ರಾಜ್ಯ ಸಾಹಿತ್ಯ ಅಕ್ಯಾಡೆಮಿ ಬಹುಮಾನಿತ-೧೯೭೩

# ವೇದ ಸಂಸ್ಕೃತಿಯ ಪರಿಚಯ

ಸಂಪುಟ ೧

ಎರಡನೇ ಆವೃತ್ತಿ

ಗ್ರಂಥಕಾರರು

ಪ್ರೊ. ಕೆ. ಎಸ್. ನಾರಾಯಣಾಚಾರ್ಯ





ವೇದ ವಿದ್ಯಾ ಪ್ರಕಾಶನ,
"ಮಾಲೋಲ" (ರೇಲ್ವೆ ಗೂಡ್ಸ್‌ಷೆಡ್ ಹಿಂದೆ)
ಕಲ್ಯಾಣನಗರ, ಧಾರವಾಡ - ೫೮೦ ೦೦೭

# ವೇದ ಸಂಸ್ಕೃತಿಯ ಪರಿಚಯ

ಸಂಪುಟ ೧

ಎರಡನೇ ಆವೃತ್ತಿ

"ವೇದೋಽಖಿಲೋ ಧರ್ಮಮೂಲಂ"— (ಮನು)

ಗ್ರಂಥಕಾರರು

ಪ್ರೊ. ಕೆ. ಎಸ್. ನಾರಾಯಣಾಚಾರ್ಯ



ವೇದ ವಿದ್ಯಾ ಪ್ರಕಾಶನ,

"ಮಾಲೋಲ" (ರೇಲ್ವೆ ಗುಡ್ಸ್‌ಷೆಡ್ ಹಿಂದ)

ಕಲ್ಯಾಣನಗರ, ಧಾರವಾಡ.

ಪ್ರಕಾಶಕರು :
ಪ್ರೊ. ಕೆ. ಎಸ್. ನಾರಾಯಣಾಚಾರ್ಯ.
ವೇದ ವಿದ್ಯಾ ಪ್ರಕಾಶನ,
ಕಲ್ಯಾಣನಗರ-ಧಾರವಾಡ-೭



ಪ್ರಥಮ ಮುದ್ರಣ : ೧೯೭೩
ದ್ವಿತೀಯ ಮುದ್ರಣ : ೧೯೮೧



ಕ್ರಯ : ರೂ. ೧೦/-



ಮುದ್ರಕರು :
ಶ್ರೀ ಆರ್. ಬಿ. ವೈದ್ಯ
ಸಾಧನಾ ಮುದ್ರಣಾಲಯ
ಪಿ. ಬಿ. ರೋಡ, ಧಾರವಾಡ-೧.

# ಪ್ರಕಾಶಕರ ವಿಜ್ಞಾಪನೆ

ಈಗ ಕೆಲವು ವರ್ಷಗಳಿಂದಲೂ, ಆಗಾಗ್ಗ, ಡಾ. ಕಮಲಾಪೂರರಂತಹ ಸಜ್ಜನರ ಪ್ರೇರಣೆಯಂತೆ ಶ್ರೀಮದ್ರಾಮಾಯಣ, ಭಗವದ್ಗೀತೆ ಮುಂತಾದ ಪವಿತ್ರಗ್ರಂಥಗಳ ವಿಸ್ತಾರ ಪ್ರವಚನವು ನಾನು ವಾಸಿಸುತ್ತಿರುವ ಸ್ಥಳದಲ್ಲಿಯೇ ಅನೇಕ ತಿಂಗಳುಗಟ್ಟಲೆ ಏರ್ಪಟ್ಟು, ಆಸ್ತಿಕ ಮಹನೀಯರುಗಳ ಆದರ, ಅನುಗ್ರಹಗಳಿಗೆ ಪಾತ್ರವಾಗಿರುವುದು ಸುವಿದಿತವಾಗಿದೆಯಷ್ಟೆ. ಪ್ರವಚನಗಳ ನಡುವೆ ಆಗಾಗ ಬರುತ್ತಿದ್ದ ವೇದಸೂಕ್ತ, ಉಪನಿಷದ್ವಾಕ್ಯಗಳ ವ್ಯಾಖ್ಯಾನಗಳನ್ನು ಕೇಳಿ ಆನಂದಿಸಿದ ಅನೇಕ ಮಹನೀಯರು "ಈ ರೀತಿಯ ವ್ಯಾಖ್ಯಾನಗಳು ಅಚ್ಚಿನಲ್ಲಿ ಎಲ್ಲಿ ದೊರೆಯುತ್ತವೆ?" ಎಂದು ಆಗಾಗ ಕೇಳುತ್ತಿದ್ದುದುಂಟು. ಅನೇಕ ಸಾಂಪ್ರದಾಯಿಕ ಅರ್ಥ ವಿಶೇಷಗಳು ಇನ್ನೂ ಮುದ್ರಣಾಲಯದ ದಾರಿಕಂಡಿಲ್ಲವೆಂದು ಮನಗಂಡ ನಾನು, "ಈ ಅರ್ಥಗಳೆಲ್ಲ ಒಂದೇ ಕಡೆಯಲ್ಲಿ ಲಿಖಿತವಾಗಿಯೋ, ಮುದ್ರಿತವಾಗಿಯೋ ಒಂದೇ ಪುಸ್ತಕದಲ್ಲಿ ಸಿಗಲಾರದು" ಎಂದು ಹೇಳಿ, ಅವರಿಗೂ ನಿರಾಶೆಯನ್ನುಂಟು ಮಾಡಿ ನಾನೂ ಅತೃಪ್ತನಾಗಿಯೇ ಇರುತ್ತಿದ್ದೆನು. ಇಂದಿನ ಜೀವನಕ್ಕೆ ವೇದದ ಸಂದೇಶವನ್ನು ಹೊಂದಿಸಿ ನಾನು ನನಗೆ ತಿಳಿದಂತೆ, ಆಗಾಗ ಕೊಡುತ್ತಿದ್ದ ವಾಖ್ಯೆಗಳೋ, ಇಂದಿನ ಅವಿಚಾರಿತವಾದ ಅನೇಕ ಭಾವನೆಗಳನ್ನು ತರ್ಕಬದ್ಧವಾಗಿ ನಿರಾಕರಿಸಿ ತೋರಿಸುತ್ತಿದ್ದ ವಿಚಾರಧಾರೆಯೋ, ಪ್ರಾಚೀನ ಋಷಿವಾಣಿಗೆ ಇಂದಿನ ಜಗತ್ತಿನ ಪೂರ್ವ-ಪಶ್ಚಿಮ ದೇಶಗಳ, ಕವಿಗಳ, ತತ್ತ್ವವೇತ್ತರ, ಸೂಕ್ತಿಗಳನ್ನು ಜೋಡಿಸಿ, ಹೋಲಿಸಿ, ವಿವೇಚಿಸಿ, ಸನಾತನ ಋಷಿ ವಾಣಿಯ ಸಾರ್ವಕಾಲಿಕತೆ, ಮಹತ್ತ್ವಗಳನ್ನು ಎತ್ತಿ ತೋರಿಸುತ್ತಿದ್ದ ಅಂಶಗಳೋ, ಅನೇಕರ ಮನಸೆಳೆದು, "ಇವು ಮುದ್ರಿತವಾಗಬೇಕು; ಈ ದೃಷ್ಟಿಯಿಂದ ಸಮಗ್ರವಾಗಿ ವೇದರಾಶಿಯ ಮಹಾವೈಶಿಷ್ಟ್ಯಗಳ ಬಗೆಗೆ ಗ್ರಂಥಗಳು ಬರಬೇಕು" ಎಂದು ಚಡಪಡಿಸಿ, ನನ್ನನ್ನು ಗ್ರಂಥ ರಚನೆಯ ಕಾರ್ಯಕ್ಕೆ ಪ್ರೇರಿಸುತ್ತಿದ್ದರು. ಬಹುಜ್ಞನಲ್ಲದ ನಾನು, ಸಹಜವಾದ ಅಧೈರ್ಯದಿಂದ ಹಿಂಜರಿಯುತ್ತಲೇ ಇದ್ದೆನು. ಕವಿಶ್ರೇಷ್ಠ ಪದ್ಮಶ್ರೀ ಡಾ. ದ. ರಾ. ಬೇಂದ್ರೆಯವರೂ, ಶ್ರೀ ರಾಮಾಯಣ ಪ್ರವಚನಕ್ಕೆ ಉಪಸ್ಥಿತರಿರುತ್ತಾ, ಅನೇಕ ಉಪಯುಕ್ತಗ್ರಂಥ

ಗಳ ರಚನೆಗೆ ಉತ್ತಮ ಸಲಹೆಗಳನ್ನು ನೀಡಿ, ಪ್ರೋತ್ಸಾಹಿಸಿ, ಒಂದಾನೊಂದು ಸಂದರ್ಭದಲ್ಲಿ, (ವಿಭೀಷಣ ಶರಣಾಗತಿಯ ಮೂರು ಉಪನ್ಯಾಸಗಳ ಕೊನೆಯಲ್ಲಿ), ಸಭಾ ಮಧ್ಯದಲ್ಲಿಯೇ ನೂರ ಐದು (೧೦೫) ರೂಪಾಯಿಗಳನ್ನು ಎಲ್ಲರ ಸಮಕ್ಷದಲ್ಲಿ ಬಹುಮಾನವನ್ನಾಗಿತ್ತು, "ಇದು ನಿಮ್ಮ ಗ್ರಂಥ ರಚನೆಯ ಕಾರ್ಯಕ್ಕೆ ಪ್ರೇರಕವಾಗಲಿ" ಎಂದು ಶುದ್ಧಮನಸ್ಕರಾಗಿ ಹಾರೈಸಿದರು. ನನ್ನ ಅಧೈರ್ಯ ಹಾಗೇ ಇದ್ದರೂ, ಈಗ ಕರ್ತವ್ಯವೆಂಬ ಹೊಣೆ ಹೆಗಲೇರಿದಂತಾಯಿತು. ಆದರೂ ಆರೋಗ್ಯ ಸಾಲದೇ, ಇತರ ಕೆಲಸಗಳ ಭಾರದಿಂದ ಈ ಕಡೆಗೆ ನಾನು ಲಕ್ಷ್ಯಕೊಡಲಾಗಲಿಲ್ಲ.

ಈ ಮಧ್ಯೆ ಪ್ರಸಿದ್ಧ ಸಾಹಿತಿಗಳೂ, ಆಕಾಶವಾಣಿ ಧಾರವಾಡ ಕೇಂದ್ರದಲ್ಲಿ ಕಾರ್ಯನಿರ್ವಾಹಕರಾಗಿ ಆಗ ಕೆಲಸ ಮಾಡುತ್ತಿದ್ದವರೂ, ನನ್ನ ಉಪನ್ಯಾಸ ಕಾರ್ಯಕ್ರಮಗಳಿಗೆ ತಪ್ಪದೇ ಬರುತ್ತಿದ್ದವರಲ್ಲೊಬ್ಬರೂ, ಆದ ಶ್ರೀ "ಎನ್ಕೆ" (ಎನ್. ಕೆ. ಕುಲಕರ್ಣಿ) ಅವರು ಪ್ರಾಚೀನ ಭಾರತೀಯ ಸಂಸ್ಕೃತಿಯಲ್ಲಿ ಆಳವಾದ ಪ್ರೇಮವುಳ್ಳವರಾಗಿ, ನನ್ನಲ್ಲಿಯೂ ಆದರ ಭಾವದಿಂದ ಆಕಾಶವಾಣಿ ಧಾರವಾಡ ಕೇಂದ್ರದಿಂದ ನನ್ನ ಅನೇಕ ಉಪನ್ಯಾಸ, ವಿಚಾರ ದೀಪಿಕೆಗಳ ರಚನೆ ಮತ್ತು ಪ್ರಸಾರಕ್ಕೆ ಕಾರಣರಾದರು. ಪುಸ್ತಕ ರಚನೆಯ ನನ್ನ ಕಲಸಕ್ಕೆ ಅವಶ್ಯವಾದ ಪೂರ್ವಭಾವೀ ತರಪೇತಿಯನ್ನು ಭಗವಂತನು ಈ ಮೂಲಕ ಒದಗಿಸಿ, ನಿರ್ದಿಷ್ಟ ರೂಪದ ಮಾನಸಿಕ ಮತ್ತು ಬೌದ್ಧಿಕ ಪರಿಪಾಕಕ್ಕೆ ದಾರಿಯನ್ನೇನೋ ಮಾಡಿಕೊಟ್ಟನು. ಆದರೂ, ಗಹನವಾದ ವೇದರಾಶಿಯಲ್ಲಿ, ಅಲ್ಪಜ್ಞನಾದ ನಾನೆಲ್ಲಿ? ನನಗಿಂತ ಹಿರಿಯರೂ, ಯೋಗ್ಯರೂ, ಸಮರ್ಥರೂ ಆದವರೇ ಇಂತಹ ಕೆಲಸಕ್ಕೆ ಕೈಹಾಕದೇ ಇರುವಾಗ, ನನ್ನಂತಹವನು ಈ ಕೆಲಸದಲ್ಲಿ ತೊಡಗುವುದು ಸರಿಯಲ್ಲವೆಂದೇ ಹಿಂಜರಿಯುತ್ತಿದ್ದೆನು. (ಈಗಲೂ ಇದೇ ನನ್ನ ಮನಸ್ಸಿನ ಸ್ಥಿತಿಯಾಗಿದೆ.)

ಆದರೆ, ಈಗ ಐದಾರು ತಿಂಗಳ ಹಿಂದೆ ದೈವ ಸಂಕಲ್ಪವೂ, ಪ್ರೇರಣೆಯೂ, ನನ್ನನು ಈ ಕೆಲಸದಲ್ಲಿ ಆಕಸ್ಮಿಕವಾಗಿ ತೊಡಗಿಸಿದುವು. ಒಂದು ಮಧ್ಯಾಹ್ನ, ನನ್ನ ಭೇಟಿಗೆ ಬಂದ ಸಹೃದಯರೂ, ಸಜ್ಜನರೂ ಆದ ಮಾನ್ಯ ಶ್ರೀ ಉಡುಪಿರಾಯರೊಡನೆ ಮಾತನಾಡುತ್ತಾ, ಆಕಾಶವಾಣಿಯಲ್ಲಿ ಆಗಾಗ ಪ್ರಸಾರಿತವಾದ ನನ್ನ ಕೆಲವು ಭಾಷಣಗಳ ಪ್ರತಿಯನ್ನೂ, ವಿಚಾರ ದೀಪಿಕೆಗಳ

ಮೂಲ ಪ್ರತಿಯನ್ನೂ ತೋರಿಸಿ, "ಇವು ಇದ್ದ ರೀತಿಯಲ್ಲೇ ಮುದ್ರಿತವಾದರೆ, ಒಂದು ಸಣ್ಣ ಪುಸ್ತಿಕೆಯಾಗಲಾರದೇ ?" ಎಂದೆನು. ಪುಸ್ತಕ ಪ್ರಕಾಶನದ ಸಿಹಿ-ಕಹಿ ಅನುಭವಗಳನ್ನು ಚಿರಕಾಲ ಪಡೆದು ನುರಿತವರಾದ ಅವರು, ತಟಕ್ಕನೆ: "ಇವು ತುಂಬ ಚಿಕ್ಕಬರೆಹಗಳು. ಇವುಗಳ ಮಾದರಿಯಲ್ಲೇ ಇನ್ನಷ್ಟು ವಿಸ್ತಾರವಾಗಿ, ಒಂದು ಹತ್ತು ಮುಖ್ಯ ಪ್ರಕರಣಗಳನ್ನೊಳಗೊಂಡಂತೆ ಬರೆದರೆ, ಒಂದು ಪುಸ್ತಕವಾದೀತು." ಎಂದರು. ಬರವಣಿಗೆಯ ಶ್ರಮವನ್ನೂ ತಾವೇ ವಹಿಸುವುದಾಗಿಯೂ, ನಾನು ಬಾಯಲ್ಲಿ ಹೇಳುತ್ತಾ ಹೋದರೆ ಸಾಕೆಂದೂ. ಹತ್ತಾರು ಉದಾರಿಗಳ ಧನಸಹಾಯವನ್ನೂ ಒದಗಿಸುವುದಾಗಿಯೂ ಹೇಳಿ ಪ್ರೋತ್ಸಾಹಿಸಿದರು. ಸರಿ, ದಿನವೂ ಬೆಳಿಗ್ಗೆ ೭ ರಿಂದ ೯ ರ ವರೆಗೆ ಬರೆವಣಿಗೆಯ ಕೆಲಸ ಆರಂಭವಾಯ್ತು. ಈ "ಮಹಾಭಾರತ" ದ ಅವತಾರಕ್ಕೆ, (ವ್ಯಾಸರಲ್ಲದ) ನನಗೆ, "ಗಣಪತಿ" ಯಂತೆ ಅವರು ಸೇವೆಸಲ್ಲಿಸಿ. ಆಡಿದಂತೆ ನಡೆದು. ಹತ್ತಾರು ಮಹನೀಯರ ಸಹಾಯವನ್ನು ಕೂಡಿಸಿದರು. ಮೊದಲ ಸಂಪುಟದ ಮಾತೃಕೆ ಸಿದ್ಧವಾಯಿತು.

ಇಷ್ಟರಲ್ಲಿ, ಪ್ರಕಾಶನ ಯಾರ ಹೆಸರಿನಲ್ಲಿ ಆಗಬೇಂಬ ವಿಚಾರ ಕಾಡಲು ಆರಂಭಿಸಿತು. ಪುಸ್ತಕ ಪ್ರಕಾಶನದ ಅನುಭವವಿಲ್ಲದ ನಾನು ಮತ್ತೆ ಹಿಂಜರಿದೆ. ಇತರರನ್ನು ಇದರಲ್ಲಿ ತೊಡಗಿಸಿದರೆ ಆಗಬಹುದಾದ ಆತಂಕಗಳನ್ನೆಲ್ಲ ಮನಸ್ಸಿಗೆ ತಂದುಕೊಂಡ ಮೇಲೆ, ಎಲ್ಲ ದೃಷ್ಟಿಯಿಂದಲೂ, ಲೇಖಕನೇ ಪ್ರಕಾಶಕನಾಗುವುದು ಯೋಗ್ಯವೆನಿಸಿತು. ವ್ಯಾಪಾರ ದೃಷ್ಟಿಯಿಂದ ದೂರವಾದ, ಇದೊಂದು ಲಾಭ-ನಷ್ಟಗಳಿಲ್ಲದ ಯೋಜನೆ. ಮೊದಲು ಸಾವಿರ ಪ್ರತಿಗಳನ್ನು ಛಾಪಿಸಿ ನೋಡುವುದೆಂದು ತೀರ್ಮಾನವಾಯಿತು. ಸಹೃದಯರೂ ಶ್ರದ್ಧಾಳುಗಳೂ ಆದ ಮಾನ್ಯ ಸ್ನೇಹಿತ ಶ್ರೀ ವೈದ್ಯ ಅವರು ಸುಂದರವಾದಿ ಮುದ್ರಿಸಿಕೊಟ್ಟಿರುತ್ತಾರೆ. ಅವರಿಗೆ ನನ್ನ ಕೃತಜ್ಞತೆಗಳು. ನನ್ನ ಸ್ನೇಹಿತರೂ, ವಿಶಾಲ ದೃಷ್ಟಿಯುಳ್ಳ ಸಹೃದಯರೂ ಆದ ಪ್ರೊ. ಶ್ರೀ ಎ. ಎಮ್. ಜಾಲಿಹಾಳ್ ಅವರು ( ನನ್ನ ಸಹೋದ್ಯೋಗಿಗಳು ) ಮಾತೃಕೆಯನ್ನು ಓದಿ, ಕೇಳಿ, ಚರ್ಚಿಸಿ ಅನೇಕ ಸೂಕ್ತ ಸಲಹೆಗಳನ್ನು ನೀಡಿ ಉಪಕರಿಸಿರುತ್ತಾರೆ, ನನ್ನ ಚಿರಂಜೀವಿಗಳಾದ ಕುಮಾರಿ ನಿರ್ಮಲಾ, ಪದ್ಮಾಸಿನೀ, ರಂಗಲಕ್ಷ್ಮೀ ಮತ್ತು ಶ್ರೀರಂಗರಾಮಾನುಜ, ಮೊದಲಾಗಿ

ಹತ್ತಿರದ ಅನೇಕರು ಮುದ್ರಣದ ಕರಡುಗಳನ್ನು ತಿದ್ದುವುದರಲ್ಲಿ ಅತ್ಯಂತ ಹೆಚ್ಚಿನ ಆಸಕ್ತಿ, ಶ್ರದ್ಧೆಗಳನ್ನು ತೋರಿಸಿರುತ್ತಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳನ್ನೂ ಧನ್ಯವಾದಗಳನ್ನೂ ಅರ್ಪಿಸುತ್ತಿದ್ದೇನೆ. ಜ್ಞಾನವೃದ್ಧರೂ, ವಯೋವೃದ್ಧರೂ ಆದ ಸಾಲಿ ರಾಮಚಂದ್ರರಾಯರೂ, ಡಾ. ಕಮಲಾಪೂರ ಅವರೂ, ಕವಿವರ್ಯ ಬೇಂದ್ರೆಯವರೂ, ಇನ್ನೂ ಇತರ ಮಹನೀಯರೂ ಗ್ರಂಥದ ಅಚ್ಚಿನ ಪ್ರಗತಿಯನ್ನು ಆಗಾಗ ಅಕ್ಕರೆಯಿಂದ ಗಮನಿಸುತ್ತಾ ಬಂದಿದ್ದಾರೆ. ಗ್ರಂಥ ಪ್ರಕಟಣೆಗೆ ನೆರವಾದ ಎಲ್ಲ ಮಹನೀಯರುಗಳಿಗೂ "ವೇದ ವಿದ್ಯಾ ಪ್ರಕಾಶನ"ವು ಚಿರಋಣಿಯಾಗಿದೆ. ಇದೇ ಮಾಲೆಯಲ್ಲಿ ಮುಂದೆ ವೇದದ ಋಷಿಗಳ ಪರಿಚಯ, ಷೋಡಶ ಸಂಸ್ಕಾರಗಳ ಮಹತ್ವ, ದೇವತೆಗಳೊಬ್ಬೊಬ್ಬರ ಮಾರ್ಮಿಕ ಪರಿಚಯ, ಉಪನಿಷತ್ತುಗಳ ಪ್ರಾಚೀನ ವಿಚಾರ ಧಾರೆಯ ಗಹನತೆ, ಧರ್ಮಶಾಸ್ತ್ರಗಳಿಗೂ ವೇದಗಳಿಗೂ ಇರುವ ನಿಕಟ ಸಂಬಂಧದ ಪರಿಚಯ, ಇತಿಹಾಸ ಪುರಾಣಗಳ ತತ್ತ್ವ ದರ್ಶನಕ್ಕೆ ವೇದದ ತಳಹದಿ ಹೇಗೆ ಭದ್ರವಾಗಿದೆಯೆಂಬ ನಿರೂಪಣೆ ಇತ್ಯಾದಿ ಅನೇಕ ಉಪಯುಕ್ತ ವಿಷಯಗಳನ್ನೊಳಗೊಂಡಂತೆ ಒಟ್ಟು ಹತ್ತಕ್ಕೆ ಕಮ್ಮಿಯಿಲ್ಲದೆ, ಗ್ರಂಥಗಳು ಬರಲಿವೆ. ಇಂದಿನ ಗೊಂದಲಮಯ ಸನ್ನಿವೇಶದಲ್ಲಿ ವಿಚಾರ ಪರರಿಗೆ ತಿಳಿಯಾದ ಬೆಳಕನ್ನು ಚೆಲ್ಲುವಂತೆ ಆಗಬೇಕೆಂದು ಗ್ರಂಥ ಮಾಲೆಯ ಉದ್ದೇಶ. ಮಠಗಳೂ ದೇವಾಲಯಗಳೂ, ಧಾರ್ಮಿಕ ಸಂಸ್ಥೆಗಳೂ ಕಲಿಪುರುಷನ, ಕಾಲಪುರುಷನ ವಶಕ್ಕೆ ಬೀಳುತ್ತಿರುವ ಈ ದುಃಸ್ಥಿತಿಯಲ್ಲಿ ಇಂತಹ ಗ್ರಂಥಗಳೇ "ನುಡಿಯ ಗುಡಿ" ಗಳಾಗಲೆಂದು ಹಾರೈಸಿ, ಧರ್ಮದ ಜೀರ್ಣೋದ್ಧಾರ ಕಾರ್ಯದಲ್ಲಿ ಆಸ್ತಿಕರಾದ ಎಲ್ಲ ಮಹನೀಯರೂ ಉದಾರವಾಗಿ ಸಹಕರಿಸಲೆಂದು ಪ್ರಾರ್ಥನೆ. ಒಬ್ಬಿಬ್ಬರು ಸಹೃದಯರು ಒಂದೊಂದು ಗ್ರಂಥದ ಇಡೀ ವೆಚ್ಚವನ್ನು ಹೊರಲು ಮುಂದೆ ಬಂದಿರುವುದು ಉತ್ಸಾಹವರ್ಧಕವಾಗಿದೆ. ಎಲ್ಲರಿಗೂ ಈ ವೇದಪುರುಷನ ಕೈಂಕರ್ಯದಲ್ಲಿ ಅವಕಾಶ ಸಿಗಲೆಂದು ನಮ್ಮ ಆಶಯ. "ವೇದವಿದ್ಯಾ ಪ್ರಕಾಶನ" ವು ಬೆಳೆದು ನಿಂತರೆ, ಇದರ ಶ್ರೇಯಸ್ಸು, ಫಲ, ಎಲ್ಲ ಪ್ರೋತ್ಸಾಹಕರಿಗೂ ಸೇರಿದ್ದು.

ಸಾರಜ್ಞರಾದ ವಾಚಕರು ಗ್ರಂಥದಲ್ಲಿರಬಹುದಾದ ದೋಷಗಳನ್ನು ಮನ್ನಿಸಿ, ಗುಣಾಂಶಗಳನ್ನು ಸ್ವೀಕರಿಸುವರೆಂದು ನಂಬಿದ್ದೇನೆ. ಸಹೃದಯರು

ಈ ಗ್ರಂಥಮಾಲೆಯ ಉಪಯುಕ್ತತೆಯನ್ನು ಹೆಚ್ಚಿಸುವಂತೆ ನೀಡಬಹುದಾದ ಎಲ್ಲ ಸೂಚನೆಗಳನ್ನೂ "ಪ್ರಕಾಶನ"ವು ಕೃತಜ್ಞತೆಯಿಂದ ಸ್ವೀಕರಿಸುವುದೆಂದು ಹೇಳ ಬಯಸುತ್ತೇನೆ.

ನಮ್ಮ ಪ್ರಧಾನ ಗುರಿ, ಈಗಿನ ವಿಚಾರಕ್ರಾಂತಿಯ ಹೆಸರಿನಲ್ಲಿ ನಡೆಯುತ್ತಿರುವ ವಿಚಾರ ಭ್ರಾಂತಿಯಿಂದ ನಮ್ಮ ನಾಡಿನ ವಿಚಾರಪರರನ್ನು ಜಾಗ್ರತಗೊಳಿಸಿ, ಸನಾತನ ಮೌಲ್ಯಗಳ ತಿಳಿಯಾದ ಕಲ್ಪನೆಯನ್ನು ಅವರ ಮುಂದಿಡುವುದು. ಸದ್ಯಕ್ಕೆ ವಿವೇಚನಾ ರೂಪದ ಗ್ರಂಥಗಳ ಪ್ರಕಟಣೆಯೇ ನಮ್ಮ ಗುರಿ. ಮಹಾಜನಗಳ ಪ್ರೋತ್ಸಾಹ, ಪ್ರೇರಣೆ, ಅವಶ್ಯಕತೆಯನ್ನು ಲಕ್ಷಿಸಿ, ಮೂಲ ಗ್ರಂಥಗಳ ಟೀಕಾ, ತಾತ್ಪರ್ಯಗಳನ್ನೋ, ಭಾಷಾಂತರಗಳನ್ನೋ ಪ್ರಕಟಿಸುವ ವಿಚಾರವೂ ಇದೆ. ಒಬ್ಬರಿಂದಾಗತಕ್ಕ ಕೆಲಸ ಇದಲ್ಲ. ಹೊಸಮಾದರಿಯ ಒಂದು "ಅಶ್ವಮೇಧವೇ" ಇದು ಆಗಬಹುದು, ಎಲ್ಲರ ಸಹಕಾರದಿಂದ ಮಾತ್ರ ಸಾಧ್ಯ. ರಾಜಾಶ್ರಯ, ಶ್ರೀಮಂತರ ಆಶ್ರಯಗಳು ಸ್ವಪ್ನಪ್ರಾಯವಾಗಿರುವ ಈ ಕಾಲದಲ್ಲಿ, ಶ್ರೀಸಾಮಾನ್ಯನನ್ನೇ ಅವಲಂಬಿಸಿ, ಅವನಿಗೇ ಇದರ ಅವಶ್ಯಕತೆಯನ್ನು ಮನದಟ್ಟುಮಾಡಿಕೊಟ್ಟು, ಅವನಿಗೇ ತಲೆಗೆ ಕಟ್ಟಬೇಕಾಗಿದೆಯಾದ್ದರಿಂದ, ಕೇವಲ ಮುದ್ರಣ, ಕಾಗದ, ಮತ್ತಿತರ ಸಾಂದರ್ಭಿಕ ಖರ್ಚುಗಳಷ್ಟನ್ನೇ ಗಮನಿಸಿ ಆದಷ್ಟು ಕಮ್ಮಿ ಬೆಲೆಯನ್ನು ಪುಸ್ತಕ ಪ್ರತಿಗಳಿಗೆ ಇಡಲಾಗಿದೆ. ಶಕ್ತಿ ಇರುವವರು ಕೆಳಕಂಡ ನಮ್ಮ ಯೋಜನೆಯಲ್ಲಿ ಪಾಲುಗೊಳ್ಳುವರೆಂದು ಆಶಿಸಲಾಗಿದೆ.

ಮತ್ತೊಮ್ಮೆ, ಮುದ್ರಣದ ಅಂಕುರಾರ್ಪಣದ ಪ್ರಧಾನಭಾರವನ್ನು ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಹೊತ್ತು, ಸಹಕರಿಸಿ, ಸೇವೆ ಸಲ್ಲಿಸು-ತ್ತಿರುವ ಮಾನ್ಯ ಶ್ರೀ ಉಡುಪಿರಾವ ಬೀಡಿಯವರಿಗೆ ಪ್ರಕಾಶನದ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸಿ, ಇದಕ್ಕೆ ಪ್ರೋತ್ಸಾಹನೀಡಿದ ಎಲ್ಲರ ಉಪಕಾರವನ್ನೂ ಸ್ಮರಿಸಿ, ನಾರಾಯಣಸ್ಮೃತಿ ಪೂರ್ವಕವಾಗಿ ವಿರಮಿಸುತ್ತೇನೆ.

ಇಂತು, ಸಜ್ಜನ ಸೇವಕ

ದಿನಾಂಕ : ೧೦–೬–೭೩ ಕೆ. ಎಸ್. ನಾರಾಯಣಾಚಾರ್ಯ

ಪ್ರಧಾನ ಸಂಪಾದಕ "ವೇದವಿದ್ಯಾ ಪ್ರಕಾಶನ"ದ ಪರವಾಗಿ

# ಪ್ರಕಾಶನದ ಯೋಜನೆ

೧/೮ ಕಿರೀಟಾಕಾರದ ೧೦೦ ಪುಟಗಳುಳ್ಳ ಒಂದೊಂದು ಕಿರುಹೊತ್ತಿಗೆಯನ್ನು ಕಾಲ ಕಾಲಕ್ಕೆ ಬಿಡುಗಡೆ ಮಾಡುತ್ತ ಹೋಗುವೆವು. ಸಧ್ಯದಲ್ಲಿ ೧೦ ಹೊತ್ತಿಗೆಗಳ ಯೋಜನೆ ಮಾಡಿದ್ದೇವೆ. ಮೊದಲ ಹೊತ್ತಿಗೆ

"ವೇದ ಸಂಸ್ಕೃತಿಯ ಪರಿಚಯ"—ಭಾಗ ೧. (ಈವರೆಗೆ ಏಳು ಸಂಪುಟಗಳು ಹೊರಬಂದಿವೆ.)

೧) ಮುಂಗಡ ಪ್ರತಿಗಳಿಗ್ನು ಕಾದಿರಿಸುವದು. (ರೂ ೫೦/- ಮುಂಗಡ ಕೊಟ್ಟು)

೨) ಪೋಷಕರಾಗಿ ರೂ. ೧೦೦/- ಸಲ್ಲಿಸಿ ಪ್ರಕಟವಾಗುವ ಗ್ರಂಥಗಳನ್ನು ಪಡೆಯುವುದು, (೧೦ ಗ್ರಂಥಗಳನ್ನು.)

೩) ಗ್ರಂಥ ಪ್ರಕಟನೆಯ ಭಾರ ಹೊತ್ತು ಮಹಾಪೋಷಕರಾಗಿ ನೆರವಾಗುವುದು.

೪) ಗ್ರಂಥಗಳನ್ನು ನಮ್ಮ ಯೋಜನೆಯ ಚೌಕಟ್ಟಿನಲ್ಲಿ ಬರೆದು ಕೊಡುವದು.

೫) ಗ್ರಂಥಗಳ ಮಾರಾಟಕ್ಕೆ ನೆರವಾಗುವುದು.

—.೦.—

ವಿ. ಸೂ. :— ಮೊದಲು ೧೦೦/— ಪುಟಗಳ ಗ್ರಂಥಗಳನ್ನು ಉದ್ದೇಶಿಸಿದ್ದರೂ, ಈ ವರೆಗೆ ೨೦೦ ಪುಟಗಳಿಗೆ ಯಾವುದೂ ಕಮ್ಮಿಯಾಗಿಲ್ಲ. ಕೆಲವು ೩೬೦ ಪುಟಗಳಿಗೂ ಮಿಕ್ಕಿದೆ, ಈ ದೃಷ್ಟಿಯಿಂದ ಗ್ರಂಥಗಳ ಬೆಲೆಗಳು ಹೆಚ್ಚಾಗುವುದು ಅನಿವಾರ್ಯವಾಯಿತು. ಎಂಟನೆಯ ಸಂಪುಟ ಈಗ ಸಿದ್ಧವಾಗುತ್ತಿದೆ.

—: ಸಂಪಾದಕ

## ಎರಡನೆಯ ಆವೃತ್ತಿಯ 'ಮುನ್ನುಡಿ'

ನಮ್ಮ ಈ 'ವೇದ ಸಂಸ್ಕೃತಿಯ ಪರಿಚಯ'ದ ಪ್ರಥಮ ಸಂಪುಟವು ಪ್ರಕಟವಾಗಿ ಇದೀಗ ಎಂಟು ವರ್ಷಗಳಾದುವು. ಈ ವರೆಗೆ ಈ ಮಾಲೆಯಲ್ಲಿ ಏಳು ಸಂಪುಟಗಳು ಪ್ರಕಟವಾಗಿದ್ದು, ಕರ್ನಾಟಕದ ಆಸ್ತಿಕರಿಗೆ, ಶ್ರದ್ಧಾಳುಗಳಿಗೆ, ವಿದ್ವಜ್ಜನರಿಗೆ ಇವು ಮನ್ನಣೆಗೆ ಪಾತ್ರವಾಗಿವೆ. ಆಗಾಗ ಓದುಗರು ಬರೆಯುತ್ತಿರುವ ಅಭಿನಂದನೆಯ, ಮೆಚ್ಚುಗೆಯ, ವಿಮರ್ಶೆಗಳ ಪತ್ರಗಳನ್ನೆಲ್ಲ ಪ್ರಕಟಿಸುವುದಾದರೆ, ಅದೇ ಒಂದು ಸಂಪುಟವಾಗುವಷ್ಟು ಆಗಿವೆ. ಲೇಖಕನಿಗೆ ಇದಕ್ಕಿಂತ ಏನು ಬೇರೆ ಪ್ರೋತ್ಸಾಹಬೇಕು ? ನಮ್ಮ ಕರ್ನಾಟಕ ರಾಜ್ಯ ಸಾಹಿತ್ಯ ಅಕೆಡೆಮಿಯವರು ೧೯೭೩ರ ಸಾಲಿಗೆ ಈ ನಮ್ಮ ಪ್ರಥಮ ಸಂಪುಟಕ್ಕೆ ೧೦೦೦/- ರೂಪಾಯಿಗಳ ಬಹುಮಾನವಿತ್ತು ಗೌರವಿಸಿರುವುದನ್ನು ಇಲ್ಲಿ ನೆನೆಸಿಕೊಳ್ಳುವುದು ಸೂಕ್ತವಾಗಿದೆ.

ಈಗ ಎಂಟನೆಯ ಸಂಪುಟದ ಮಾತೃಕೆಯ ರಚನೆಯಲ್ಲಿಳಿದಿರುವಾಗ, ಈ ಪ್ರಥಮ ಸಂಪುಟದ ಮರುಮುದ್ರಣದ ತೀವ್ರ ಆವಶ್ಯಕತೆಯ ಅರಿವು ಲೇಖಕನಿಗೆ ಮಾನಸಿಕ ಒತ್ತಡವಾಯಿತು. ಮುಂದೆ ಮುಂದೆ ಓದುವವರು, ಗ್ರಾಹಕರು, ಇಡೀ ಗ್ರಂಥಮಾಲೆಯನ್ನು ಆದಿಯಿಂದ ಅಪೇಕ್ಷಿಸುವುದರಿಂದ, ಮೊದಲು ಈ ಕೆಲಸ ಮುಗಿಸಿ, ಮುಂದಿನ ಸಂಪುಟಕ್ಕೆ ಕೈ ಹಾಕುವುದೇ ಲೇಸೆಂದು ನಿಶ್ಚಯಿಸಲಾಯಿತು. ಮುದ್ರಣ ವೆಚ್ಚ, ಕಾಗದದ ಬೆಲೆಯೂ ಆರಂಭದ ಬೆಲೆಗಿಂತ ಮೂರುವರೆ ಪಟ್ಟು ಹೆಚ್ಚಾಗಿ ಕುಳಿತಿರುವುದರಿಂದ ಗ್ರಂಥದ ಬೆಲೆಯನ್ನೂ ಅಷ್ಟೇ ಪ್ರಮಾಣದಲ್ಲಿ ಏರಿಸುವುದು ಅನಿವಾರ್ಯವಾದರೂ, ಬಹುಜನರಿಗೆ ದೊರೆಯಲೆಂಬ ಆಸೆಯಿಂದ ಅಷ್ಟು ಪ್ರಮಾಣಕ್ಕೆ ಹೆಚ್ಚಿಸದೇ, ಒಂದು ಮಧ್ಯಮ ನೆಲೆಗೆ ಇಡಲಾಗಿದೆ. ಲಾಭನಷ್ಟವಿಲ್ಲದ ಯೋಜನೆಯಾಗಿ, ವೇದ ಪುರುಷನ ಕೈಂಕರ್ಯ ಮಾತ್ರವೆಂದು ಭಾವಿಸಿ, ಘೋಷಿಸಲಾಗಿರುವ ಈ ಯತ್ನವು ಈಗ ನಷ್ಟದಲ್ಲಿ ಕಾಲಿಡುವ ಪ್ರಸಂಗದಲ್ಲಿದೆ. ಆಗಾಗ ನಾವು ನಮ್ಮ ಸಂಪುಟಗಳಲ್ಲಿ ನಿವೇದಿಸಿಕೊಂಡರೂ ಧನಿಕರಾದ ಮಹಾತ್ಮರು ಯಾರೂ ಈ ಸೇವೆಗೆ ಸಹಾಯ ಮಾಡಲು ಮುಂದೆ ಬಂದಿಲ್ಲದಿರುವುದು ಶೋಚನೀಯ. ವೇದ ಸಂಸ್ಕೃತಿಯು ಪಾತಾಳಕ್ಕಿಳಿಯುತ್ತಿರುವುದನ್ನು ಸಹಿಸೆವೆಂದು ಹೇಳಿಕೊಳ್ಳುವ ಯಾವ ಅಭಿಮಾನಿಯೂ

ತಾನಾಗಿಯೇ ಮುಂದೆ ಬಂದು ಸಹಾಯ ಮಾಡಬೇಕಾದುದು ನ್ಯಾಯವಲ್ಲವೇ? ಆದರೆ ಪುಸ್ತಕಗಳ ಮಾರಾಟದ ಕೆಲಸ ಮಾತ್ರ, ತಡವಾಗಿಯಾದರೂ, ಸಮರ್ಪಕವಾಗಿ, ನಡೆಯುತ್ತಿರುವುದರಿಂದ ಈ ವರೆಗೆ ಏಳು ಸಂಪುಟಗಳನ್ನು ವರ್ಷಕ್ಕೊಂದರಂತೆ ಬರೆದು ಮುದ್ರಿಸುವುದು ಸಾಧ್ಯವಾಗಿದೆ. ಪ್ರಕೃತ ಲೇಖಕನು ತಾನಾಗಿ ಯಾರ ಮುಂದೂ ಕೈಯೊಡ್ಡುವ ಸ್ವಭಾವದವನಲ್ಲ ವಾದುದರಿಂದ, ಅವನ ಈ ಸ್ವಭಾವವನ್ನು ತಿಳಿದು, ತಾವಾಗಿ ಅನೇಕ ಸದಸ್ಯರನ್ನು ಸಂಪಾದಿಸಿಕೊಟ್ಟು ಸಹಕರಿಸಿರುವ ಸರ್ವಶ್ರೀ ಎ. ಎಂ. ಗೋಳಸಂಗಿ (ಬಿಜಾಪುರ), ಡಾ॥ ಬಿ. ಎಸ್. ಜಗನ್ನಾಥ (ಹಾಸನ), ಎಚ್. ಆರ್. ದಾಶರಥಿ (ಹುಬ್ಬಳ್ಳಿ), ಎ. ರಾಮಾನುಜಂ (ಮೈಸೂರು), ಎಚ್. ಕೆ. ಎನ್. ಆಚಾರ್ಯ (ಶಿವಮೊಗ್ಗ), ಎಚ್. ಕೆ. ರಾಮಾನುಜಂ (ಬೆಂಗಳೂರು), ಎಸ್. ರಾಜಗೋಪಾಲಾಚಾರ್ಯ (ಬೆಂಗಳೂರು), ಕೆ. ಎನ್. ಶ್ರೀನಿವಾಸಾಚಾರ್ಯ (ಹುಬ್ಬಳ್ಳಿ) ಮೊದಲಾದ ಮಿತ್ರರಿಗೆ ವೇದಪುರುಷನು ಸಕಲಸನ್ಮಂಗಳಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ,

ನಮ್ಮ ಮಾಲೆಯ ಎರಡನೆಯ, ಮೂರನೆಯ ಸಂಪುಟಗಳೂ ಸಹ ಮರು ಮುದ್ರಣದ ಹಂತವನ್ನು ಮುಟ್ಟಿವೆ. ಒಂದು ಸಂಪುಟದ ಖರ್ಚನ್ನು ಹೊರಲು ಮುಂದೆ ಬರುವ ದಾನಿಗಳ ಭಾವಚಿತ್ರವನ್ನು ಅದರಲ್ಲಿ ಮುದ್ರಿಸಿ, ಉಪಕಾರವನ್ನು ಸ್ಮರಿಸಲಾಗುವುದು. ಲೇಖಕನ ಸನ್ಮಿತ್ರರು ಅಲ್ಲಲ್ಲಿ ಉದಾರ ದಾನಿಗಳನ್ನು ಹುಡುಕಿ ಪ್ರೋತ್ಸಾಹಿಸಿದರೆ ಉಪಕಾರವಾಗುವುದು.

ಎಂದಿನಂತೆ ಗ್ರಂಥ ಮುದ್ರಣದ ಉಸ್ತುವಾರಿಯನ್ನು ನಿರ್ವಹಿಸಿ ಉಪಕರಿಸಿದ ಮಾನ್ಯ ಉಡುಪಿರಾಯರಿಗೂ, ಮುದ್ರಕರಾದ ಶ್ರೀ ಆರ್. ಬಿ. ವೈದ್ಯ ಮತ್ತು ಶ್ರೀ ಪೊತ್ನೀಸ್ ಅವರಿಗೂ, ಪ್ರೋತ್ಸಾಹಕರಾದ ಗ್ರಾಹಕರಿಗೂ, ಗ್ರಂಥಮಾಲೆಯ ಸದಸ್ಯರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಇತಿ, ಸಜ್ಜನವಿಧೇಯಃ,

ಕೆ. ಎಸ್. ನಾರಾಯಣಾಚಾರ್ಯ
ಪ್ರಧಾನ ಸಂಪಾದಕರು

ಧಾರವಾಡ
೨೬-೧೦-೧೯೮೧ (ದೀಪಾವಳೀ)

ಈ ಸಂಪುಟದ ಪುನರ್ಮುದ್ರಣ ಕಾರ್ಯ ಮುಗಿಯುತ್ತ ಬಂದು ಇನ್ನೇನು ಬಿಡುಗಡೆಯಾಗಲಿರುವ ಸಂದರ್ಭದಲ್ಲಿ. ಕವಿವರ್ಯರೂ, ದಾರ್ಶನಿಕರೂ, ಉಜ್ವಲ ವೇದಾಭಿಮಾನಿಗಳೂ, ನಮ್ಮ ಗ್ರಂಥ ಮಾಲೆಯ ಮೂಲ ಪ್ರೇರಕರೂ, ಲೇಖಕನಿಗೆ ಆತ್ಮೀಯ ಹಿರಿಯ ಬಂಧುಗಳೆಂತಿದ್ದವರೂ ಆದ ಡಾ. ದ. ರಾ. ಬೇಂದ್ರೆಯವರ ನಿಧನವು ಶುದ್ಧಾಕಾಶದಲ್ಲಿ ಸಿಡಿಲು ಬಡಿದಂತಾಗಿದೆ.

ಅಮರರಾದ ಈ ಬೇಂದ್ರೆಯವರು ಚಿರಕಾಲ ಸ್ಫೂರ್ತಿಯಾಗಿಯೇ ನಮಗೆ ಉಳಿಯುತ್ತಾರೆಂಬುದರಲ್ಲಿ ಸಂದೇಹವಿಲ್ಲ.

— ಸಂಪಾದಕರು

# ಅ ನು ಕ್ರ ಮ ಣಿ ಕ





ಪ್ರ ವಿಷ್ಣವೇ ಶೂಷಮೇತು ಮನ್ಮ ಗಿರಿಕ್ಷಿತ ಉರುಗಾಯಾಯ ವೃಷ್ಣೇ ।
ಯ ಇದಂ ದೀರ್ಘಂ ಪ್ರಯತಂ ಸಧಸ್ಥಂ ಏಕೋ ವಿಮಮೇ ತ್ರಿಭಿರಿತ್ಪದೇಭಿಃ ॥



[ ವ್ಯಾಪಕನಾದ ಯಾವ ಪರಮಾತ್ಮನು, ಎಲ್ಲರ ಕಣ್ಣಿಗೆ ಕಾಣುವ, ವಿಸ್ತಾರವೂ ಶಾಶ್ವತವೂ ಆದ, ಒಂದರೊಡನೊಂದುಗೂಡಿದ, ಈ ಮೂರು ಲೋಕಗಳನ್ನೂ, ಅದ್ವಿತೀಯನಾಗಿ ತಾನೊಬ್ಬನೇ ತನ್ನ ಮೂರು ಪಾದಗಳಿಂದ ನಿರ್ಮಿಸಿದನೋ, ಗಿರಿಯಂತೆ ಉನ್ನತವಾದ(ವೇದ)ವಾಕ್ಕಿನಲ್ಲಿ, ಅಥವಾ ಪರಮವ್ಯೋಮದಲ್ಲಿದ್ದು ಎಲ್ಲರಿಂದಲೂ ಸ್ತುತಿಸಲ್ಪಡುವನೋ, ಸಕಲ ಇಷ್ಟಾರ್ಥಗಳನ್ನೂ ಮಳೆಯಂತೆ ಸುರಿಸುವನೋ, ಅಂತಹ (ವೇದ ಪುರುಷನಾದ) ಶ್ರೀ ಮಹಾವಿಷ್ಣುವನ್ನು ವೇದ ಕರ್ಮಜನ್ಯವಾದ ಬಲವೂ, ವೇದೋಕ್ತವಾದ ಸ್ತೋತ್ರವೂ ಸೇರಿ (ಅವನಿಗೆ ಅರ್ಪಿತವಾಗಿ) ಸಾರ್ಥಕವಾಗಲಿ.]

ಋ. ಸಂ. I-154-3

ಶ್ರೀ ಕೃಷ್ಣಾರ್ಪಣ ಮಸ್ತು

॥ ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ॥

# ಪೀಠಿಕೆ

॥ ಹರಿಃ ಓಂ ॥ ಜ್ಞಾನಾನಂದಮಯಂ ದೇವಂ ನಿರ್ಮಲ ಸ್ಫಟಿಕಾಕೃತಿಂ ।
ಆಧಾರಂ ಸರ್ವವಿದ್ಯಾನಾಂ ಹಯಗ್ರೀವಮುಪಾಸ್ಮಹೇ ॥ ೧ ॥

ಗುರುಭ್ಯಸ್ತದ್ಗುರುಭ್ಯಶ್ಚ ನಮೋವಾಕಮಧೀಮಹೇ ।
ವೃಣೀಮಹೇ ಚ ತತ್ರಾದ್ಯೌ ದಂಪತೀ ಜಗತಾಂ ಪತೀ ॥ ೨ ॥

ಇಂದು ಸಂಸ್ಕೃತಿಗೆ ವಿಶ್ವದಲ್ಲೇ ದೊಡ್ಡ ಗಂಡಾಂತರ ಒದಗಿ ಬಂದಿರುವುದು ಎಲ್ಲರಿಗೂ ತಿಳಿದ ಸಂಗತಿ, "ನಾಗರಿಕತೆ"ಗೂ — "ಸಂಸ್ಕೃತಿ"ಗೂ ತಿಕ್ಕಾಟ ಆರಂಭವಾಗಿದ್ದು ಮಾನವನ ಸರ್ವನಾಶಕ್ಕೆ ನೇರವಾದ ರಸ್ತೆ ನಿರ್ಮಾಣವಾಗಿದೆ ಉಳಿವಿಗೆ ಇರುವುದು ಒಂದೇ ಮಾರ್ಗ—ಅದೆಂದರೆ ಜೀವನದ ಮಹಾಮೌಲ್ಯಗಳ ಸ್ಪಷ್ಟ ಕಲ್ಪನೆಯನ್ನು ಪುನಃ ಮಾಡಿಕೊಂಡು, ಅವುಗಳ ನೆಮ್ಮದಿಯ ಆಶ್ರಯದಲ್ಲಿ ನಮ್ಮ ಜೀವನವನ್ನು ಆದಷ್ಟು ಪುನರ್ರಚಿಸಿಕೊಂಡು ಜೀವನದ ನಿತ್ಯ ವೈರಿಶಕ್ತಿಗಳೊಡನೆ ಹೋರಾಡಲು ಸಿದ್ಧರಾಗುವುದು, ಭಾರತೀಯರಾದ ನಮಗೆ ಈ ದಿಸೆಯಲ್ಲಿ ಆದ್ಯಕರ್ತವ್ಯವೆಂದರೆ, ನಮ್ಮ ಸಕಲ ಸಂಸ್ಕೃತಿಯ ಮೂಲ ಆಕರವಾದ ವೇದರಾಶಿಯಲ್ಲಿ ನಮ್ಮ ಮೇಧಾವೀ ಪೂರ್ವಿಕರು ಸ್ಪಷ್ಟವಾಗಿ ನಿರ್ದೇಶಿಸಿಕೊಟ್ಟಿರುವ ಈ ಮಹಾ ಮೌಲ್ಯಗಳನ್ನು ನಮ್ಮ ಕಣ್ಣಿಂದಲೇ ಕಂಡುಕೊಳ್ಳುವುದು; ಈ ಜ್ಞಾನರಾಶಿಗೆ ಪೂರಕವಾಗಿ ಕಾಲಕಾಲಕ್ಕೆ ಮುಂದೆ ಬಂದ ಗ್ರಂಥಗಳು ಎಲ್ಲವೂ ಹೇಗೆ ಈ ಮೌಲ್ಯಗಳನ್ನೇ ಮುಂದಿಟ್ಟು, ಅನುಮೋದಿಸಿ, ಭಾರತೀಯರ ಜೀವನಕ್ಕೆ ಸ್ಪಷ್ಟರೂಪ, ಆಕಾರ ದಿಕ್ಕುಗಳನ್ನು ಕೊಟ್ಟವು ಎಂದು ಮನಗಾಣುವುದು.

ಈ ಪ್ರಯತ್ನವನ್ನು ಅನೇಕರು ಕಂಡು ಮೂಗು ಮುರಿದು ಇದೊಂದು ಹಿಂದೆ ಓಡುವ ಹೆಜ್ಜೆಯೆಂದೂ (**Backward step**), ಕಾಲಗರ್ಭದಲ್ಲಿ ಹುದುಗಿ ಸತ್ತು ಹೋದ ವಿಚಾರಧಾರೆಯನು ಮತ್ತೆ ಎಬ್ಬಿಸುವ ಪ್ರಯ

ತ್ನವೆಂದೂ (Revivalism) ಅಪಹಾಸ್ಯ ಮಾಡುತ್ತಿರುವುದೂ ಸಹ ನಮ್ಮ ವಿನಾಶಕಾರೀ ಶಕ್ತಿಗಳ ಬಲ ಎಷ್ಟಿದೆಯೆಂಬುದನ್ನಷ್ಟೇ ತೋರಿಸಿಕೊಡುತ್ತದೆ. ಮುಂದೆ ಬರುವುದು ವಿನಾಶವೇ ಆದರೆ "ಹಿಂದೆ" ಸರಿದರೆ ಅವಿವೇಕವಾದೀತೇ ? "ಮುಂದೆ"ಯೇ ಸರಿದು ನಾಶವನ್ನೈದುವುದು ಹೇಗೆ ವಿವೇಕವಾದೀತು? ಜೀವನದಲ್ಲಿ ದಿಕ್ಕನ್ನೇ ತಿಳಿಯದ ಹುಂಬನು (ಅವನು ಗ್ರಂಥಕರ್ತನೇ ಆಗಲಿ, ರಾಜಕೀಯ ಮುಂದಾಳೇ ಆಗಲಿ, ಬಹು ಜನರ [ ಅರ್ಥ ಶೂನ್ಯ ] ಪ್ರೀತಿಗೆ ಪಾತ್ರನೇ ಆಗಿರಲಿ,) "ಹಿಂದೆ" "ಮುಂದೆ" ಎಂದು ಖಚಿತವಾಗಿ ನಿಷ್ಕರ್ಷಿಸಿಕೊಳ್ಳಲು ಸರ್ವಮಾನ್ಯವಾದ ಒಂದು ಅಳತೆಗೋಲನ್ನು ಉಪಯೋಗಿಸದೆ ಮನಸ್ಸಿಗೆ ಬಂದಂತೆಯೋ, ತನ್ನ ಅನುಕೂಲ ಸಾಧನೆಗಾಗಿಯೋ ಹೀಗಲ್ಲ ಹೇಳಿ ಬರೆದರೆ ಅವನೂ ಅವನನ್ನು ಮೆಚ್ಚಿ ಅವನು ಹೇಳಿದ್ದನ್ನೆಲ್ಲ ನಂಬುವವರೂ ಸಹ ರಕ್ಷಿಸುವವರ " ಕಾಟ "ವಿಲ್ಲದೆ ಸರ್ವನಾಶ ಹೊಂದುವುದರಲ್ಲಿ ಸಂದೇಹ ಬರಲಾರದು.

ಅಚ್ಚುಕೂಟಗಳ ಸಂಖ್ಯೆ ಅಭಿವೃದ್ಧಿಯಾಗುತ್ತಿರುವುದನ್ನು ಕಂಡು ಹಿಗ್ಗಿ ಪುರುಷಾರ್ಥ ಸಾಧನೆಯೇ ಆಗಿ ಹೋಯಿತೆಂದು ತೃಪ್ತಿಪಟ್ಟುಕೊಳುತ್ತಿರುವವರು, ಸಾಮಾನ್ಯ ಓದುಗನ ಸಂಸ್ಕೃತಿ ವಿಕಾಸ ಇನ್ನೂ ಆಗದ ಹಿನ್ನೆಲೆಯಲ್ಲಿ, ಅವನ ವಿನಾಶಕ್ಕೆ ಎಷ್ಟು ದೊಡ್ಡ ಬಾಗಿಲುಗಳೇ ತೆರೆದಂತಾಗಿವೆಯೆಂಬುದನ್ನೂ ಸ್ವಲ್ಪ ಯೋಚಿಸಿದರೆ ಒಳಿತಾದೀತು. ಅನೇಕರಿಗೆ ವೈಚಾರಿಕ ಭ್ರಾಂತಿಯೇ ಬುದ್ಧಿಜೀವಿಯ ಮುಖ್ಯ ಲಕ್ಷಣವೆಂದು ತೋರುತ್ತಿರುವ ಈ ದುಃಸ್ಥಿತಿಯಲ್ಲಿ. ನಮ್ಮ ಸನಾತನ ಸಂಸ್ಕೃತಿಯ ಮೂಲಾಧಾರಗಳಾದ ಮುಖ್ಯ ಮಹಾಮೌಲ್ಯಗಳ ಪರಿಚಯವನ್ನು ಆದಷ್ಟು ಸರಳವೂ, ಖಚಿತವೂ ಆದ ಭಾಷೆಯಲ್ಲಿ ಹತ್ತು ಚಿಕ್ಕದಾದರೂ ಚೊಕ್ಕ ಪುಸ್ತಕಗಳಲ್ಲಿ ಮಾಡಿಕೊಡಲು ಯತ್ನಿಸುವುದೇ ಪ್ರಕೃತ ಗ್ರಂಥ ಮಾಲೆಯ ಉದ್ದೇಶ.

ನಮ್ಮ ಸಂಸ್ಕೃತಿ, ಧರ್ಮಗಳು ಯಾವುದೇ ಕುರುಡು ಸಿದ್ಧಾಂತದಮೇಲೆ (dogma) ನಿಂತಿಲ್ಲ, ಇವಕ್ಕೆ ಸುಭದ್ರವಾದ ವಿಚಾರ ಪರತೆಯು ಆಧಾರವಿದೆ. ಪಾಶ್ಚಾತ್ಯ ಧರ್ಮಗಳು ಅನೇಕ ಕುರುಡು ಸಿದ್ಧಾಂತದ ಮೇಲೆ ಅವಲಂಬಿಸಿ ನಿಂತಿರುವುದಕ್ಕೆ, ಅವುಗಳಿಗೂ, ವೈಜ್ಞಾನಿಕ ದೃಷ್ಟಿಕೋನಕ್ಕೂ ಆಗಾಗ ನಡೆ

ಯುವ ತಿಕ್ಕಾಟವೇ ಸಾಕ್ಷಿಯಾಗಿದೆ ಯಾವುದೇ ವ್ಯಕ್ತಿಯ, ಗತಕಾಲದ ಅಪ್ಪಣೆ ಆದೇಶಗಳ ಮೂಲಿಕೆಯ ಆಧಾರದ ಮೇಲೆ ನಿಂತಿರದ ನಮ್ಮ ಧರ್ಮ ಸಂಸ್ಕೃತಿಗಳು ಅಪೌರುಷೇಯವಾಗಿವೆ. ಈ ಕಾಲದ ವಿಚಾರ ಪರತೆಯ ಒರೆಗಲ್ಲಿಗೆ ಹಚ್ಚಿದಾಗ ಇವು ಎಲ್ಲಿ ಪುಡಿಪುಡಿಯಾದಾವೋ ಎಂಬ ಭಯ, ಸಂದೇಹಗಳು ಇಲ್ಲಿ ಏಳುವಂತೆಯೇ ಇಲ್ಲ. ಬದಲಾದಿ, ಇಂದಿನ ನಮ್ಮ ಹೊಸ ವಿಚಾರಗಳು ಎಷ್ಟರ ಮಟ್ಟಿಗೆ ಜೀವನ ಪೋಷಕಗಳಾಗಿವೆ, ಅಥವಾ ಇಲ್ಲ, ಎಂಬುದನ್ನು ನಿಷ್ಕರ್ಷಿಸಿಕೊಳ್ಳಲು ಇವು ಸಾಮರ್ಥ್ಯವುಳ್ಳ ಉಪಕರಣ ಗಳಾಗಿವೆ. ಏಕೆಂದರೆ ಸಹಸ್ರಾರು ವರ್ಷಗಳಲ್ಲಿ, ಸಹಸ್ರಾರು ಋಷಿ ಮುನಿ, ಆಚಾರ್ಯರುಗಳ ಪರೀಕ್ಷೆಗೊಳಗಾಗಿ, ಅವರಿಂದ ಪೋಷಿತವಾಗಿ, ಅವರ ತರ್ಕ ಬದ್ಧವಾದ ವಿಚಾರ ಪರತೆಯ ಆಧಾರದ ಮೇಲೇಯೇ ಅವು ನಿಂತಿವೆ. ಆದ್ದ ರಿಂದ ಎಷ್ಟೆಷ್ಟು ವಿಚಾರಪರತೆಯ ಪರೀಕ್ಷೆಗೆ ಒಳಪಡಿಸುತ್ತೇವೆಯೋ ಅಷ್ಟಷ್ಟೂ ಪುಟವಿಕ್ಕಿದ ಚಿನ್ನದಂತೆ ಬೆಳಗುವಶಕ್ತಿಯನ್ನು ಹೊಂದಿವೆ. "ಬುದ್ಧಿನಾಶಾ ತ್ಪ್ರಣಶ್ಯತಿ", "ಬುದ್ಧೌ ಶರಣ ಮನ್ವಿಚ್ಛ", ಬುದ್ಧಿಯೋಗ ಮುಪಾ ಶ್ರಿತ್ಯ", "ಬುದ್ಧಿಯುಕ್ತೋ ಜಹಾತೀಹ", "ಏವಂ ಬುದ್ಧ್ವಾ ಬುದ್ಧಿಮಾನ್ ಸ್ಯಾತ್", "ನಾಸ್ತಿಬುದ್ಧಿಃ ಅಯುಕ್ತಸ್ಯ" –ಇತ್ಯಾದಿ "ಬುದ್ಧಿ" ಪ್ರಶಂಸಾ ವಾಕ್ಯಗಳು ಭಗವದ್ಗೀತೆಯೊಂದರಲ್ಲೇ ಎಷ್ಟು ಹೇರಳವಾಗಿವೆಯೆಂದು ಮನ ಗಂಡರೆ, ನಮ್ಮ ವೇದರಾಶಿಯಲ್ಲೂ ಸ್ಮೃತಿಗಳಲ್ಲೂ ಇಂತಹ ಉದಾಹರಣೆಗಳು ಎಷ್ಟು ವಿಪುಲವಾಗಿವೆಯೆಂದು ತಿಳಿಯಬಹುದು. (ನಮ್ಮ ಧರ್ಮಕ್ಕೂ-ಬುದ್ಧಿ ಪರತೆಗೂ ಇರುವ ನಿಕಟ ಸಂಬಧವನ್ನೇ ಕುರಿತು ಒಂದೆರಡು ಗ್ರಂಥ ರಚಿಸಲು ಬೇಕಾಗುವಷ್ಟು ವಸ್ತು ಇಲ್ಲಿದೆ). ಹೀಗೆ ನಮ್ಮ ಧರ್ಮ ಸಂರಕ್ಷಣೆಗೆ ಭಾರತಿಯರು ಕತ್ತಿ–ಗುರಾಣಿ, ಮದ್ದು—ಗುಂಡುಗಳ ಉಪಯೊಗ ಮಾಡಬೇಕಾದಿಲ್ಲ. ಸುವಿಚಾರ ಪರರಾದರೆ ಸಾಕು. ನಮ್ಮ ಧರ್ಮಗುರುಗಳಾರೂ ಇತರಧರ್ಮಿಯರ ಸಾಮೂಹಿಕ ಕೊಲೆಗೆ ಆದೇಶಕೊಟ್ಟು, ಅಥವಾ ತಾವೇ ಅದಕ್ಕಾಗಿ ಸೊಂಟಕಟ್ಟಿ ನಿಂತ ಒಂದೇ ಒಂದು ಉದಾಹರಣೆಯೂ ಎಲ್ಲೂ ದೊರೆಯುವಂತಿಲ್ಲ. ನಮ್ಮ ಧರ್ಮದ ಹಿರಿಮೆಗೆ, ಮೌಲ್ಯಗಳ ದೊಡ್ಡತನಕ್ಕೆ ಬೇರೇನು ಸಾಕ್ಷಿಬೇಕು?

ಭಾರತೀಯ ಸಂಸ್ಕೃತಿಯೆಂಬುದು ಇನ್ನೂ ಬದುಕಿದೆಯೆಂಬುದು ಭ್ರಾಂತರಾದ ಅನೇಕರಿಗೆ ಇನ್ನೂ ತಿಳಿದಿಲ್ಲವೆಂಬುದು ದುರ್ದೈವದ ಸಂಗತಿ. ಎಲ್ಲ ಸಂಸ್ಕೃತಿಗಳಿಗೂ ಗಂಡಾಂತರ ಕಾಲವೆಂಬುದು ಇದ್ದೇ ಇರುತ್ತದೆ. ಕೈ ತಗ್ಗಿದಾಗ ಭದ್ರಪಡಿಸಲು ಪ್ರಯತ್ನಿಸುವುದು ಹೇಗೆ ಅಪಮಾನಕರ ವಾದುದೆಂದು ನಮಗಂತೂ ತಿಳಿದಿಲ್ಲ. ಪುನರುಜ್ಜೀವನವು ಜೀವನದ ಲಕ್ಷಣವೇ ವಿನಾ ನಿರ್ಜೀವದ್ದಲ್ಲ. ಇದಕ್ಕೆ ಆಂಗ್ಲರಲ್ಲಿ ಪ್ರಚಲಿತವಾಗಿರುವ ಕೆಟ್ಟ ಅರ್ಥ ಬರುವಶಬ್ದವೊಂದನ್ನು ಇಟ್ಟುಬಿಟ್ಟರೆ ಪುನರುಜ್ಜೀವನದ ಪ್ರಯತ್ನವನ್ನು ಹತ್ತಿಕ್ಕಿದಂತಾಗಲಿಲ್ಲ; ಬೇರೆ ಏನನ್ನೂ ಸಾಧಿಸಿದಂತೆಯೂ ಆಗಲಿಲ್ಲ. ಶ್ರೀ ಸಾಮಾನ್ಯನಿಗೆ ಈ "ಚೇಷ್ಟೆ"ಗಳು ತಿಳಿಯದಷ್ಟು ಅವನು ಮೂಢನಾಗಿರು ವುದು ಒಂದು ದೃಷ್ಟಿಯಿಂದ ಒಳ್ಳೆಯದೇ. ಆದರೆ "ಬುದ್ಧಿವಂತ" ರೆಂದು ಕೊಂಡ ಅನೇಕರಿಗೇ ಇದರಿಂದ ಗಂಡಾಂತರ ಕಾದಿದೆ. ಆದುದರಿಂದ ಸರಿ ಯಾದ ವಿಚಾರಪರತೆ ನಮ್ಮ ಸುತ್ತ ಮೂಡುವಂತೆ ಪ್ರಯತ್ನಿಸುವದು "ಬುದ್ಧಿಯಿದೆ" ಎಂದುಕೊಂಡ ಎಲ್ಲರ ಕರ್ತವ್ಯ.

ನಮ್ಮ ಸಂಸ್ಕೃತಿಯ ಬಗೆಗೆ ನಡೆಯುತ್ತಿರುವ ಅಪಪ್ರಚಾರಗಳನ್ನು ಕುರಿತು ಹೇಳಹೊರಟರೆ ಅದೇ ದೊಡ್ಡ ಪುಸ್ತಕವಾದೀತು. ಕೆಲವೊಂದು ಮುಖ್ಯ ನಡವಳಿಕೆಗಳನ್ನು ಹೇಳದೆಯೇ ಇದ್ದರೆ ಅಪಚಾರವೂ ಆದೀತು ಎಂದು ನಂಬಿ ಕೆಳಕಂಡಸಂಗತಿಗಳನ್ನು ನಮ್ರತೆಯಿಂದ ನಿವೇದಿಸಬೇಕಾಗಿದೆ.

ನಮ್ಮ ವಿಶ್ವವಿದ್ಯಾಲಯಗಳಲ್ಲಿ ಪಠ್ಯ ಪುಸ್ತಕಗಳನ್ನಾಗಿ ಬಳಸುತ್ತಿರುವ ಅನೇಕ ಗ್ರಂಥಗಳೇ ಹೀಗೆ ಅಪಪ್ರಚಾರ ನಡೆಸುತ್ತಿವೆಯೆಂದರೆ ಅನೇಕರಿಗೆ ಅಚ್ಚರಿಯಾಗಬಹುದು. ಜಗನ್ಮಾನ್ಯವಾದ ತತ್ತ್ವಶಾಸ್ತ್ರದ ಚರಿತ್ರೆಯಲ್ಲಿ ಎಲ್ಲ ಜನಾಂಗಗಳ ತತ್ತ್ವ ವಿಚಾರಗಳೂ ಪ್ರತಿನಿಧಿಸಲ್ಪಡಬೇಕೆಂಬುದನ್ನೊಪ್ಪಿದ ಒಬ್ಬ "ಮಹಾನುಭಾವನು", ಇಂತಹ ಚರಿತ್ರೆಯಲ್ಲಿ " ಪೂರ್ವ" ದೇಶ ಗಳ. ಅದರಲ್ಲೂಮುಖ್ಯವಾಗಿ, ಭಾರತೀಯರ ವಿಚಾರಗಳಿಗೆ ಸ್ಥಾನವೆ ಇರತಕ್ಕದಲ್ಲ ಎಂದು ಬರೆದಿದ್ದಾನೆ. ಅವನ ಕಾರಣ ಇಷ್ಟೆ. ಈ "ಪೂರ್ವ" ದೇಶೀಯರ ವಿಚಾರಗಳೂ ಇನ್ನೂ ಪುರಾಣಗಳ ಕಲ್ಪನಾವಸ್ಥೆಯಲ್ಲೇ ಇವೆ. ಕೇವಲ ಭಾವನಾಮಯಗಳಾದ ಹಾಡುಗಳು ತತ್ತ್ವಶಾಸ್ತ್ರವಾಗಲಾರವು.

ಬರಿಯ "ನಂಬಿಕೆ" ಆಗಬಹುದಷ್ಟೇ. ಪಾಶ್ಚಾತ್ಯರ ವಿಚಾರಗಳು ಹಾಗಲ್ಲವಂತೆ. [*History of Philosophy by* Frank Thilly] ಮತ್ತೊಬ್ಬನು, ಪ್ರಪಂಚದ ಹನ್ನೊಂದು ಧರ್ಮಗಳಲ್ಲಿ ಕ್ರೈಸ್ತಮತ, ಬೌದ್ಧಮತ, ಇಸ್ಲಾಂ, ಇವು ಮೂರೇ ವಿಶ್ವಮಾನ್ಯ ಧರ್ಮಗಳೆಂದು ಸಾರಿ, ನಮ್ಮ ಸನಾತನ ಧರ್ಮಕ್ಕೆ ಸ್ಥಾನವನ್ನೇ ನಿರಾಕರಿಸುವುದಲ್ಲದೆ, ಇದರಲ್ಲಿ ಇರಬಹುದಾದ ಎಲ್ಲ ಒಳ್ಳೆಯ ವಿಷಯಗಳೂ ಬೇರೆ ಧರ್ಮದಲ್ಲಿದ್ದೇ ಇವೆಯಾದುದರಿಂದ ಹೊಸ ದಿಲ್ಲವೆಂದೂ ಬೇರೆ ಯಾವ ಧರ್ಮದಲ್ಲಿಯೂ ಇರದ ಅಕ್ಷಮ್ಯ ದೋಷಗಳು ಇದರಲ್ಲಿ ಇವೆಯೆಂದೂ ಅಪಾದಿಸಿದ್ದಾನೆ. ಕ್ರೂರತನ ನಮ್ಮ ಧರ್ಮದಲ್ಲಿ ಬೇರೂರಿ ಬೆಳೆದಿದೆಯೆಂದೂ, ಸ್ಥಿತಿವಂತರು ಮಾನವೀಯತೆಯನ್ನು ಹತ್ತಿಕ್ಕಲು ನಡೆಸಿದ ಪ್ರಯತ್ನವೇ ಈ ಧರ್ಮದ ರೂಪ ತಾಳಿದೆಯೆಂದೂ, ಪ್ರಗತಿಯನ್ನು ಸರ್ವಥಾ ವಿರೋಧಿಸುವ ವರ್ಣಾಶ್ರಮಪದ್ಧತಿಯು ಇದರ ಪ್ರಧಾನ ದೋಷ ವೆಂದೂ, ಸ್ತ್ರೀಯರನ್ನು ಕಡೆಗಣಿಸಲಾಗಿದೆಯೆಂದೂ, ಕರ್ಮ ಸಿದ್ಧಾಂತ ಮೊದಲಾದವು ಮಾನವನ ನಿಷ್ಕ್ರಿಯತೆಯನ್ನು ಪ್ರೋತ್ಸಾಹಿಸುವುವೆಂದೂ, ಅನ್ಯಾಯವನ್ನು ಸಹಿಸುವಂತೆ ಮಾಡುವ ತಂತ್ರವೆಂದೂ, ಒಟ್ಟಿನಲ್ಲಿ ಜೀವನ ದಿಂದ ನಿರ್ಗಮಿಸಲು ಉತ್ತೇಜನ ಕೊಡುವ ಪಲಾಯನವಾದವೆಂದೂ ಆರೋಪಿ ಸಿದ್ದಾನೆ.. [*Ethics for Today by* Harold Titus, pp 504–508 etc.] ಇವಲ್ಲದೆ ಭಾರತೀಯ ತತ್ತ್ವವೆಲ್ಲ ಪಾರಲೌಕಿಕವೆಂದೂ, ಇದೂ ಸಹ ಕೆಲವರದ್ದೇ ಹಕ್ಕು ಎಂದೂ, ಇಲ್ಲಿ ಸಾಮಾಜಿಕ ಮೌಲ್ಯಗಳೇ ಇಲ್ಲವೆಂದೂ, ದೇವರು ಧರ್ಮಗಳ ಹೊರತು ಇದರಲ್ಲಿ ಏನೂ ಇಲ್ಲವೆಂದೂ, ಮುಂತಾಗಿ ಅಪಪ್ರಚಾರ ನಡೆಸಿರುವ ಎಲ್ಲ "ಮಹನೀಯರ" ಹೆಸರುಗಳನ್ನೂ, ಇಲ್ಲಿ ಹೇಳುವ ಅಗತ್ಯವಿಲ್ಲ.

ಸ್ತ್ರೀಯರು ಕೇವಲ ಭೋಗ ಸಾಮಗ್ರಿಗಳೆಂದೂ, ಅವರಲ್ಲಿ "ಆತ್ಮ"ವೇ ಇಲ್ಲವೆಂದೂ, ಒಬ್ಬೊಬ್ಬನು ಎಷ್ಟೊಂದು ಸ್ತ್ರೀಯರನ್ನಾದರೂ ಇಷ್ಟ ಬಂದಂತೆ "ಮದುವೆ"ಯಾಗಬಹುದೆಂದೂ, ತೋರಿದಾಗ, ತೋರಿದಂತೆ, ವಿನಾಕಾರಣ ನಡುನೀರಿನಲ್ಲಿ ಕೈ ಬಿಟ್ಟಂತೆ, ಪರಿತ್ಯಾಗ ಮಾಡಿ ವಿವಾಹ ವಿಚ್ಛೇದನೆ ಮಾಡಬಹುದೆಂದೂ ಮುಂತಾಗಿ ಬೋಧಿಸುವ "ಧರ್ಮ"

ವಿಶ್ವಧರ್ಮವೆಂದೂ "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" (ಎಲ್ಲಿ ಸ್ತ್ರೀಯರಿಗೆ ಪೂಜ್ಯತೆ ಇದೆಯೋ ಅಲ್ಲಿ ದೇವತೆಗಳಿಗೆ ಆನಂದವಾಗುತ್ತದೆ) ಯೆಂದು ಬೋಧಿಸುವ ಧರ್ಮ ವಿಶ್ವಧರ್ಮವಲ್ಲ ವೆಂದೂ ಬಗೆಯುವುದು, ಬರೆಯುವುದು, ಇಂದಿನ "ವೈಚಾರಿಕತೆ"ಯ ಭ್ರಾಂತಿಗೂ, ವಿಪರ್ಯಾಸಕ್ಕೂ ಶ್ರೇಷ್ಠ ನಿದರ್ಶನ. ಇದು ಈ ಪಾಶ್ಚಾತ್ಯ "ಮಹಾನುಭಾವ"ರಿಗೆ ತಿಳಿಯದಿರುವುದು ಅವರ "ಬುದ್ಧಿವಂತತೆ"ಯ ಮಟ್ಟಕ್ಕೆ, ಪ್ರಾಮಾಣಿಕತೆಗೆ ಸಾಕ್ಷಿ ! "ಮಧ್ಯಯುಗ" ಕಾಲದಲ್ಲಿ ಧರ್ಮದ ಹೆಸರಿನಲ್ಲಿ ಕೋಟ್ಯಾಂತರ ಜನರು ಕೊಲ್ಲಲ್ಪಟ್ಟರು, ಸಜೀವವಾಗಿ ಸುಡಲ್ಪಟ್ಟರು. ಇದು ಮತ ಪ್ರಚಾರದ ಹೆಸರಿನಲ್ಲಿ ಯೂರೋಪು ಮತ್ತು ಮಧ್ಯ ಏಷ್ಯಾಗಳಲ್ಲಿ ಕ್ರೈಸ್ತ, ಮುಸಲ್ಮಾನರಲ್ಲಿ ನಡೆದದ್ದು. ತಮ್ಮ ಮತ ಗುರುಗಳನ್ನು ದೇವರ ಏಕಮೇವ ಪ್ರತಿನಿಧಿ ಎಂದು ಒಪ್ಪದವರೆಲ್ಲ ನರಕಕ್ಕೇ ಹೋಗುವವರೆಂದೂ. ಇವರನ್ನೆಲ್ಲ ಕೊಲ್ಲುವುದು "ಧಾರ್ಮಿಕ ಕರ್ತವ್ಯ"ವೆಂದೂ ಬೋಧಿಸಿದವರು "ವಿಶ್ವಧರ್ಮ"ದವರಂತೆ ! ಪರಮತ ಸಹಿಷ್ಣುತೆ, "ಮಾವಿದ್ವಿಷಾವಹೈ" ಎಂದು ಬೋಧಿಸಿದ ನಮ್ಮ "ಧರ್ಮ" ಸಂಕುಚಿತ ಮನೋಭಾವದ್ದಂತೆ ! ಇದು ಕುರುಡರ "ದೃಷ್ಟಿ"ಯಲ್ಲವ ?

ಪಾಶ್ಚಾತ್ಯರು ಹೀಗೆಲ್ಲ ಬರೆದು, ಬರೆಯುತ್ತಿರುವುದಕ್ಕೆ ಪ್ರಬಲ ಕಾರಣಗಳಿವೆ. ಒಬ್ಬನ, ಒಂದು ದೇಶದ ಅಥವಾ ಜನಾಂಗದ ಸಂಸ್ಕೃತಿಯು ಒಂದೇ ದಿನದಲ್ಲಿ "ಅರ್ಥ"ವಾಗುವ ವಿಷಯವಲ್ಲ. ತಿಳಿಯಲೇಬೇಕೆಂದು ಹೊರಟವನಿಗೂ ಪೂರ್ಣ ತಿಳುವಳಿಕೆ ಬರಲು ಹಿಡಿಯುವ ಕಾಲವೆಷ್ಟು, ಎದುರಿಸಬೇಕಾದ ತೊಂದರೆಗಳೇನು ಎಂಬ ವಿಚಾರ ಹಾಗಿರಲಿ; ಉದ್ದೇಶ ಪೂರ್ವಕವಾಗಿಯೇ ತಾನೂ ತಪ್ಪು ತಿಳಿದು ಇತರರಿಗೂ ಅಜ್ಞಾನವನ್ನೇ ಮಾಡಿಸಲು ಕಂಕಣ ಕಟ್ಟಿ ಹೊರಟರೆ ಏನೆಲ್ಲ ಅನರ್ಥಗಳಾದಿವೆಯೋ ಇವಕ್ಕೆಲ್ಲ ಅವರಲ್ಲದೆ ಬೇರೆ ಯಾರು ಹೊಣೆಯಾಗಬಹುದು ?

ಈ ಶತಮಾನದ ಬಹು ಮುಖ್ಯ ಆಂಗ್ಲ ಕವಿಯೆಂದು ಪರಿಗಣಿತನಾಗಿ ರುವ ಟಿ. ಎಸ್. ಎಲಿಯಟ್ ಎಂಬ ಮಹಾಕವಿಯು ತಾನೂ ಭಾರತೀಯ

ತತ್ತ್ವಶಾಸ್ತ್ರವನ್ನೂ ಸಂಸ್ಕೃತ ಭಾಷೆಯನ್ನೂ ನಾಲ್ಕಾರು ವರ್ಷ ಅಭ್ಯಸಿಸಲು ಪ್ರಯತ್ನಿಸಿದುದಾದಿಯೂ, ಆ ದಿಸೆಯಲ್ಲಿ ಪ್ರಯತ್ನಿಸಿದಾಗ ಸಂಸ್ಕೃತ ಗ್ರಂಥಗಳನ್ನು ಪಾಶ್ಚಾತ್ಯರಿಗೆ ಭಾಷಾಂತರ ಮಾಡಿಕೊಟ್ಟು ವಿವರಿಸಿ ಬರೆದ ಅನೇಕರ ಪ್ರಯತ್ನಗಳು ಮತ್ತಷ್ಟು ತಪ್ಪು ಕಲ್ಪನೆಯನ್ನೇ ಹೇಗೆ ಮಾಡುವಂತಿವೆಯೆಂದೂ, ಕೊನೆಗೆ ತಾನು ತನ್ನ "ಪಾಶ್ಚಾತ್ಯ" ತನಕ್ಕೆ ತಿಲಾಂಜಲಿ ಕೊಟ್ಟ ಹೊರತು ಕೆಲವೊಂದು, ಭಾರತೀಯ ವಿಚಾರಗಳು ಹೇಗೆ ತನಗೆ ತಿಳಿಯಲಾರದವೆನಿಸಿದವೆಂದೂ, ಆದರೆ ತನಗನಿಸಿದ ಮಟ್ಟಿಗೆ ಹೇಗೆ ಭಾರತೀಯ ಮೇಧಾವಿ ಆಚಾರ್ಯರುಗಳ ಸೂಕ್ಷ್ಮತತ್ತ್ವಪ್ರಭೇದಗಳು ಐರೋಪ್ಯ ತತ್ತ್ವವಾದಿಗಳನ್ನು ಶಾಲೆಯ ಹುಡುಗರ ಮಟ್ಟಕ್ಕೆ ಹಾಕಿದಂತೆ ತನಗೆ ಮನವರಿಕೆಯಾಗಿದೆಯೆಂದೂ ಬರೆದುಕೊಂಡಿದ್ದಾನೆ. ತನ್ನ ಅನೇಕ ಕಾವ್ಯಗಳಲ್ಲಿ ಸ್ಪಷ್ಟವಾದ ಭಾರತೀಯ ತತ್ತ್ವ ಪ್ರಭಾವವನ್ನು ಬಿಂಬಿಸಿರುವ ಈ ಮಹಾ ಕವಿಯು ದೊಡ್ಡ ಮನೋಭಾವದಿಂದಲೇ ಹೊರಟಾಗ್ಯೂ ಈ ಎಲ್ಲ ತೊಂದರಗಳನ್ನನುಭವಿಸಿದನೆಂದ ಮೇಲೆ, ಇತರ ಅಸೌಹಾರ್ದಮನೋಭಾವದ ಪಾಶ್ಚಾತ್ಯರ ಗತಿ ಏನಾಗಿರಬೇಡ!

ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಮೊದಲ ಬಾರಿಗೆ ಸಂಸ್ಕೃತಾಧ್ಯಯನಕ್ಕೆ ಪೀಠವೊಂದನ್ನು ಸ್ಥಾಪಿಸಲು ಹಣವನ್ನು ದಾನಮಾಡಿದ ಕರ್ನಲ್ ಬೋಡೆನ್ ಮಹಾಶಯನು ತನ್ನ ಉಯಿಲಿನಲ್ಲಿ (ಅಗಸ್ಟ್ ೧೫, ೧೮೧೧)ಅದರ ಉದ್ದೇಶವನ್ನು ಹೀಗೆ ವಿವರಿಸಿದ್ದಾನೆ. ಈ ನಿಧಿ ಸ್ಥಾಪನೆಯ ಪ್ರಧಾನ ಗುರಿ ಕ್ರೈಸ್ತ ಮತಗ್ರಂಥಗಳನ್ನು ಸಂಸ್ಕೃತಕ್ಕೆ ಪರಿವರ್ತಿಸುವದರ ಮೂಲಕ ಭಾರತ ದೇಶದ ಪ್ರಜೆಗಳನ್ನು ಕ್ರೈಸ್ತರನ್ನಾಗಿ ಮತಾಂತರಿಸಲು ಸಹಾಯ ಮಾಡುವುದು." ಇದು ರಹಸ್ಯದ ವಿಷಯವಲ್ಲ! ನಮ್ಮ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು, ಈಗ ಉಪಯೋಗಿಸುತ್ತಿರುವ ಪ್ರಸಿದ್ಧ ಸಂಸ್ಕೃತ–ಇಂಗ್ಲೀಷು ಭಾಷಾಕೋಶದಲ್ಲಿ ಸರ್ ಮೋನಿಯರ್ ವಿಲಿಯಂಸ್ ಎಂಬ ಪ್ರಾಧ್ಯಾಪಕನ ಮುನ್ನುಡಿಯಲ್ಲಿ ಎತ್ತಿ ತೋರಿಸಲಾದ ವಿಷಯ. (ಪುಟ IX) ಈ ಸಂಸ್ಥೆಯಿಂದ ಪ್ರಕಟವಾದ ನಮ್ಮ ಧರ್ಮದ ಬಗೆಗಿನ ಗ್ರಂಥಗಳು ಹೇಗೆ ದೋಷಪೂರಿತ ಉದ್ದೇಶದಿಂದ ಕೂಡಿವೆಯೆಂಬುದಕ್ಕೆ ಬೇರೆ ಏನು ನಿದರ್ಶನ ಬೇಕು?

ಈ ಮಾಲೆಯಲ್ಲಿ, ದಿಸೆಯಲ್ಲಿ ವೇದದ ಬಗೆಗೆ ವಿಲ್ಸನ್, ರಾತ್, ವ್ಹಿಟ್ನಿ, ಮ್ಯಾಕ್ಸ್‌ಮ್ಯುಲರ್, ಯಾಕೋಬೀ, ಕೀತ್, ಬ್ಲೂಮ್‌ಫೀಲ್ಡ್, ಮೊದಲಾದ " ಮಹಾವಿದ್ವಾಂಸರ " ಗ್ರಂಥಗಳು ಈಗಲೂ ನಮಗೆ '' ಪ್ರಮಾಣ "ಗ್ರಂಥ ಗಳಾಗಿರುವುದು ದುರ್ದೈವವೇ ಸರಿ. ವೇದಗಳ ಬಗೆಗೆ ಭಾರತೀಯರಿಗೆ ತಿರ ಸ್ಕಾರವನ್ನು ಮೂಡಿಸಲು ಈ ಮಹನೀಯರು ಮುಂದೆ ತಂದ "ಚಾರಿತ್ರಿಕ ಪದ್ಧತಿ", "ಭಾಷಾ ಶಾಸ್ತ್ರಪದ್ಧತಿ", ಮೊದಲಾದವುಗಳ ಉಪಯುಕ್ತ ತೆಯ ಬಗೆಗೆ ಪುನರ್ವಿಚಾರ ಇನ್ನೂ ಆಗದಿರುವುದೂ ಬಹು ನಿರಾಶೆಯ ಸಂಗತಿ. ಅದಿರಲಿ ನಮ್ಮವರೇ ಸಂಸ್ಕೃತ ಪ್ರಾಧ್ಯಾಪಕರುಗಳೂ ಅವರ ವಿಚಾರಗಳನ್ನೇ ಸಮರ್ಥಿಸುತ್ತಾ ಹೊಸ ಜನಾಂಗಕ್ಕೆ ವಿಷವನ್ನೇ ಅಮೃತವೆಂಬಂತೆ ನೀಡುತ್ತಿರು ವುದೂ, ಪಾಶ್ಚಾತ್ಯರ ಪ್ರಯತ್ನ ಎಷ್ಟು ಫಲಕಾರಿಯಾದಿದೆಯೆಂಬುದನ್ನು ತೋರಿಸುತ್ತದೆ.

ಮ್ಯಾಕ್ಸ್ ಮುಲರ್ ಮಹಾಶಯನು ತನ್ನ ಸಂಸ್ಕೃತ ಸಾಹಿತ್ಯ ಚರಿತ್ರೆ ಯಲ್ಲಿ ಹೀಗೆ ಬರೆದಿದ್ದಾನೆ (ಪುಟ ೩೨): "ಕ್ರೈಸ್ತ ಮತವನ್ನು ಸಕಲಮಾನವ ಜನಾಂಗವೂ ಒಪ್ಪಿಕೊಳ್ಳಲು ಅನೇಕ ಕಾಲಹಿಡಿಯುವದರಿಂದ, ಅದಕ್ಕೆ ಕ್ರಮ ಬದ್ಧವಾದ ಶಿಕ್ಷಣ ಅವಶ್ಯವೆಂದು ಇತಿಹಾಸ ತಿಳಿಸುವಂತಿದೆ. ಉಚ್ಚ ಸತ್ಯದ ಉನ್ನತ ದೀಪವು ಸರ್ವಮಾನ್ಯವಾಗುವ ಮೊದಲು, ಮನುಷ್ಯನ ಮನಸ್ಸಿನ ಹುಚ್ಚುತನದ ವೈವಿಧ್ಯತೆಗೆ ಅವಕಾಶಕೊಟ್ಟು ಕಳೆಯಬೇಕಾಗಿದೆ. ಜಗತ್ತಿನ ಸನಾತನ ಧರ್ಮಗಳು ಮನುಷ್ಯ ಸ್ವಭಾವದ ಎಳೆಹಾಲಿನಂತೆ; ಇದರ ಜಾಗದಲ್ಲಿ ಸರಿಯಾದ ಆಹಾರ ಬರಬೇಕಾಗಿದೆ. ಕ್ರಮವಾಗಿ......ಬೌದ್ಧಧರ್ಮವೂ ಆರ್ಯಾ ವರ್ತದ ಮಿತಿಯನ್ನು ಮೀರಿ ಬೆಳೆದಿರುವುದು ಅಲ್ಪದೃಷ್ಟಿಯ ನಮಗೆ ಕ್ರೈಸ್ತ ಮತದ ವಿಸ್ತಾರ ಬೆಳವಣಿಗೆಗೆ ಅಡಚಣೆಯಾದಿದೆಯೆಂದು ಅನಿಸಬಹುದು. ಆದರೆ ಸಾವಿರ ವರ್ಷಗಳು ಯಾವನಿಗೆ (ದೇವರಿಗೆ) ಒಂದು ವರುಷವೋ ಅವನ ದೃಷ್ಟಿಯಲ್ಲಿ, ಹಳೇ ಪ್ರಪಂಚದ ಈ ಧರ್ಮಗಳು ಕ್ರಿಸ್ತನಿಗೇ ಕೊನೆಗೆ ದಾರಿ ಮಾಡಿಕೊಡುವ ಪ್ರಯತ್ನಗಳಾಗಿರಬಾರದೇಕೆ ? ತಮ್ಮ ದೋಷ ಗಳಿಂದಲೇ ತಾವೇ ಕ್ರೈಸ್ತ ಮತದ ಸತ್ಯವನ್ನು ಭದ್ರಪಡಿಸಿ, ಮಾನವನ ಅನಿ ವಾರ್ಯ, ಸತ್ಯದಾಹಕ್ಕೆ ಕಾರಣಗಳಾಗುವುವು. " ಈ ದೃಷ್ಟಿಯಿಂದ ಹೊರಟ

ಈ "ಮಹಾನುಭಾವನಿಗೆ" ವೇದಗಳು "ತೀರಾ ಹುಡುಗಾಟಿಕೆ"ಯ ಭಾಷೆ, ವಿಚಾರಗಳನ್ನೊಳಗೊಂಡತೆಯೂ, ಬೇಸರತರಿಸುವ, ಕೀಳುತನದ, ಹೊಸತನವಿಲ್ಲದ ಮಾತುಗಳಾಗಿಯೂ ಕಂಡದ್ದು ಆಶ್ಚರ್ಯವಲ್ಲ. ಋಗ್ವೇದ ವನ್ನು ಭಾಷಾಂತರಿಸಿದ ಇವನ ಉದ್ದೇಶವನ್ನು ಇವನೇ ತನ್ನಪತ್ನಿಗೆ ಬರೆದ ಪತ್ರ ವೊಂದರಲ್ಲಿ ಹೀಗೆ ಹೇಳಿಕೊಂಡಿದ್ದಾನೆ: (ಪತ್ರಗಳು — ಸಂಪುಟ ೧, ಅಧ್ಯಾಯ ೧೫, ಪುಟ. ೩೪೬): "ಈಗ ನಾನು ಭಾಷಾಂತರಿಸಿ ಸಂಪಾದಿಸಿದ ಈ ಗ್ರಂಥವು ಇನ್ನು ಮುಂದೆ ಭಾರತದ ಅದೃಷ್ಟವನ್ನೇ (fate, ಕೊನೆ) ಬಹಳವಾಗಿ ನಿರ್ಧರಿಸುವುದು. ಇದು (ವೇದವು) ಭಾರತೀಯರ ಧರ್ಮದ ಬೇರು. ಈ ಬೇರು ಎಂಥದೆಂದು ತೋರಿಸುವುದು, ಅದ ರಿಂದ ಕಳೆದ ಮೂರು ಸಾವಿರವರ್ಷಗಳಿಂದಲೂ ಚಿಗುತಿರುವುದೆಲ್ಲವನ್ನೂ ಬುಡಮೇಲಾಗಿಸುವ ಒಂದೇ ಉಪಾಯವಾಗಿದೆ." ೧೬ನೇ ಡಿಶಂಬರ್ ೧೮೬೮ ರಲ್ಲಿ ಭಾರತಕ್ಕೆ ಸಂಬಂಧಿಸಿದ ವಿಷಯಗಳಿಗೆ ಆಂಗ್ಲ ಮಂತ್ರಿಯಾ ಗಿದ್ದ ಡ್ಯೂಕ್ ಆಫ್ ಆರ್ಗಿಲ್ ಎಂಬುವನಿಗೆ ಬರೆದ ಪತ್ರದಲ್ಲೂ ಹೀಗೆ ಬರೆ ದಿದ್ದಾನೆ: "ಭಾರತದ ಸನಾತನ ಧರ್ಮವನ್ನೇನೋ ಹಾಳಾಗಿಸಿದ್ದಾಯ್ತು. ಈ ಸ್ಥಳದಲ್ಲಿ ಕ್ರೈಸ್ತ ಮತಬಾರದಿದ್ದರೆ ಯಾರದು ಈ ತಪ್ಪು? (ನನ್ನ ದಂತೂ ಅಲ್ಲ!)" ಇವನ ದಾರಿಯಲ್ಲೇ ನಡೆದ ಅನೇಕ ಇತರ ಐರೋಪ್ಯರಿಗೆ ನಮ್ಮ ಧರ್ಮದಲ್ಲಿ ಚೆನ್ನಾಗಿರುವುದೆಲ್ಲ ಕ್ರೈಸ್ತಮತದ ಪ್ರಭಾವದಿಂದಲೇ ಉಂಟಾದದ್ದೆಂದೂ, ಅದಕ್ಕಿಂತ ಹಳೆಯದು ಒಳ್ಳೆಯದು ಇರುವುದು ಸಾಧ್ಯ ವಿಲ್ಲವೆಂದೂ, ದುರ್ಭಾವನೆ ಮೂಡಿ ಅವರಿಂದ ರಚಿಸಲ್ಪಟ್ಟ ಗ್ರಂಥ ರಾಶಿಗಳೇ ನಮ್ಮನ್ನು ಇನ್ನೂ ತಮ್ಮ ಪ್ರಭಾವದಲ್ಲಿಟ್ಟು ಕೊಂಡಿವೆ.

ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಿಂದ ಪ್ರಕಟಿತವಾದ **"The Religious quest of India"** ("ಭಾರತದ ಧರ್ಮಾನ್ವೇಷಣೆ") ಎಂಬ ಗ್ರಂಥ ಮಾಲೆಯಲ್ಲಿ **"The Religion of the RigVeda"** (ಋಗ್‌ವೇದದ ಧರ್ಮ") ಎಂಬ ಗ್ರಂಥದ ಮುನ್ನುಡಿಯಲ್ಲಿ, ಅದರ ಪ್ರಧಾನ ಸಂಪಾದಕನಾದ ಫಾರ್ಕುಹಾರ್ ಎಂಬವನು, ಅದರ ಉದ್ದೇಶವನ್ನು ಹೀಗೆ ವಿವರಿಸಿದ್ದಾನೆ: — "ಮಾಲೆಯ ವಿವಿಧ ಗ್ರಂಥಗಳ ಲೇಖಕರ ಪ್ರಯತ್ನ, ಭಾರತೀಯ ಧರ್ಮ

ಗಳ ಪಕ್ಕದಲ್ಲಿ ಕ್ರೈಸ್ತಮತವನ್ನು ಎದ್ದು ಕಾಣುವಂತೆ ಇಡುವುದು, ಕ್ರಿಸ್ತನು ಅವರೆಲ್ಲರ ದರ್ಶನದ ಕಣ್ಬೆಳಕು. ಅವನು ಒಂದಾನೊಂದು ದಿನ ಇಡೀ ಜಗತ್ತಿಗೇ ಬೆಳಕಾಗುವುದು ಖಂಡಿತವೆಂದು ನಂಬಿದವರು, ಇಂದೋ ನಾಳೆಯೋ ಭಾರತದ ಅನಾದಿಕಾಲ ಪ್ರವೃತ್ತವಾದ ಧಾರ್ಮಿಕ ಅನ್ವೇಷಣೆ, ದಾಹ, ಸತ್ತ್ವಗಳು, ಈ ಕ್ರಿಸ್ತನಲ್ಲೇ ತಮ್ಮ ಗುರಿಮುಟ್ಟಿ, ಹೊಸ ದಾರಿಯ ಮೊದಲ ಬಿಂದುವನ್ನು ತಲುಪುವುವೆಂದು ದೃಢವಾಗಿ ನಂಬಿದವರು. ಈ ಮಾಲೆಯ ಗ್ರಂಥಗಳು ಈ ಸಿದ್ಧಿಯತ್ತ ಮುನ್ನಡೆಯುವ ಪ್ರಯತ್ನವನ್ನು ಹೆಚ್ಚು ವೇಗಶಾಲಿಯನ್ನಾಗಿಸಲು ಸ್ವಲ್ಪವಾದರೂ ಸಹಾಯಮಾಡಿದರೆ, ಅವರಿಗೆ ಇಷ್ಟೇ ತೃಪ್ತಿ. ಈ ಉದ್ದೇಶ ಸ್ವಾಗತಾರ್ಹವಲ್ಲ ಎಂದು ಬಗೆಯುವ ಓದುಗರು ಇದ್ದದ್ದೇ ಆದರೆ, ಅವರಿಗೆ ಹೀಗೆ ಜ್ಞಾಪಿಸಬೇಕಾಗುತ್ತದೆ : ಒಂದು ಧರ್ಮದ ಅಧ್ಯಯನವನ್ನು ಪ್ರಾರಂಭಿಸುವ ಯಾವುದೇ ಮನುಷ್ಯನು, ತನ್ನದೇ ಧಾರ್ಮಿಕ ನಿಷ್ಕರ್ಷೆಗಳಿಲ್ಲದೆ, ಸರಿ-ತಪ್ಪು ತಿಳುವಳಿಕೆಯಿಲ್ಲದೆ, ಹೊರಡಲಾರನು. ಬರೆಯುವವನಿಗೂ, ಓದುವವನಿಗೂ, ಮೊದಲೇ ಇವು ಸ್ಪಷ್ಟವಾಗಿ ತಿಳಿಯತಕ್ಕದ್ದು ಅವಶ್ಯ." ಈ ಮಾಲೆಯಲ್ಲಿ Ind.an Theism, Redemption Hindu and Christian, Hindu Ethics, The Vedanta, ಮುಂತಾದ ಅನೇಕ ಗ್ರಂಥಗಳ ಮೂಲಸ್ವರೂಪ ಈಗ ತಿಳಿಯುವುದಲ್ಲವೇ ?

ಪ್ರಸಿದ್ಧನಾದ ಮ್ಯಾಕ್ನಿಕೊಲ್ ಎಂಬ ಪಾಶ್ಚಾತ್ಯ "ಪಂಡಿತನು", "ಕಂಪ್ಯಾರೇಟಿವ್ ರಿಲಿಜನ್" (ತುಲನಾತ್ಮಕ ಧರ್ಮಗಳ ವಿವೇಚನೆ) ಎಂಬ ಗ್ರಂಥದಲ್ಲಿ, (ಇವು ಉಪನ್ಯಾಸಗಳ ಗುಚ್ಛ.) ಈ ಉಪನ್ಯಾಸ ಮಾಲಿಕೆಯನ್ನು ಏರ್ಪಡಿಸಿದವನ ಉದ್ದೇಶವನ್ನು ಈ ರೀತಿ ವಿವರಿಸಿದ್ದಾನೆ : "ಮಾಲಿಕೆಯನ್ನು ಸ್ಥಾಪಿಸಿದವನ ಉದ್ದೇಶ, ಉಪನ್ಯಾಸಕನು ಮಾನವನ ಮಹೋನ್ನತ ಧ್ಯೇಯವು, ನಿಸ್ವಾರ್ಥಪ್ರೇಮ ಮತ್ತು ಒಡನಾಡಿಗಳ ಸೇವೆಯೇ ಎಂಬುದನ್ನೂ, ಇವು ಕ್ರೈಸ್ತಮತದ ಬೋಧನೆಯ ಸಾರಸರ್ವಸ್ವವೆಂಬುದನ್ನೂ ಎತ್ತಿ ತೋರಿಸುವಂತಾಗಬೇಕೆಂದು.....ನಾನು ಈ ದೃಷ್ಟಿಯನ್ನು ಎಲ್ಲ ವಿಧದಲ್ಲಿಯೂ ಒಪ್ಪುತ್ತೇನೆಂದು ಹೇಳ ಬಯಸುತ್ತೇನೆ.....ಇಲ್ಲಿ ವಿಮರ್ಶಿಸಲಾಗುವ ವಿವಿಧ ಮತಗಳ ಬಗೆಗೆ ನಾನು ಪ್ರಚಾರಕನ ಮನೋಭಾವವನ್ನು

ತಾಳದೇ, ತೀರ್ಪನ್ನೀಯುವ ನ್ಯಾಯಮೂರ್ತಿಯ ಧೋರಣೆಯನ್ನು ತಾಳಿರುತ್ತೇನೆ."

ಪಾಶ್ಚಾತ್ಯರು ಹೀಗೆ, ಕ್ರೈಸ್ತ ಧರ್ಮಕ್ಕಿಂತ ನಮ್ಮ ಸನಾತನ ಧರ್ಮ "ಕೀಳೆಂದು" ತೀರ್ಪನ್ನೀಯಲು ಬಂದವರು. ನಿಷ್ಪಕ್ಷಪಾತವಾಗಿ ಅಭ್ಯಸಿಸಲು ಬಂದವರಲ್ಲ! ಅಪ್ಪಿ ತಪ್ಪಿ ಅಲ್ಲೊಂದು ಇಲ್ಲೊಂದು ಒಳ್ಳೆಯ ಮಾತನ್ನು ವೇದಗಳ ಬಗೆಗೋ, ಭಾರತೀಯರ ಸ್ವಭಾವ, ಸಂಸ್ಕಾರಗಳ ಬಗೆಗೋ, ಅಲ್ಲಲ್ಲಿ ಬರೆದಿದ್ದರೆ. ಇವು ನಮ್ಮನ್ನು ತಮ್ಮ ಗ್ರಂಥಗಳನ್ನು ಓದುವಂತೆ, ತಮ್ಮ "ನಿಷ್ಪಕ್ಷಪಾತತೆ"ಯ ಬಗೆಗೆ ನಮಗೆ ನಂಬಿಕೆ ಹುಟ್ಟುವಂತೆ ಪ್ರೇರೇಪಿಸಲು, ಮೀನಿಗೆ ಗಾಳ ಹಾಕಿದಂತೆ, ಮಾಡಿದ ತಂತ್ರ ಮಾತ್ರ. ಅಥವಾ ಕೈ ಮರೆತು ಅಲ್ಲಲ್ಲಿ ಪ್ರಾಮಾಣಿಕವಾಗಿಯೇ ಬರೆದಿದ್ದಾರೆಂದು ಆದರೆ, ಇಂತಹ ವಂಚಕರನ್ನೂ ಆಕರ್ಷಿಸಿ, ಅವರನ್ನೂ ಪರಿವರ್ತಿಸಿದ ನಮ್ಮ ವೇದ ಗ್ರಂಥಗಳ ಮಹಿಮೆಗೆ ಇವು ಸಾಕ್ಷಿಗಳು. ನಾಲ್ಕೂ ವೇದಗಳ ಮಂತ್ರಗಳ ಅಕಾರಾದಿಯನ್ನು (Vedic Concord) ದೊಡ್ಡದಾಗಿ ಸಂಗ್ರಹಿಸಿ ಪ್ರಕಟಿಸಿದ ಬ್ಲೂಮ್ ಫೀಲ್ಡ್ ಮೊದಲಾದವರ ಪ್ರಯತ್ನವನ್ನು ಮೆಚ್ಚತಕ್ಕದ್ದಲ್ಲವೆ ? ಎಂದು ಕೇಳಿದರೆ, ಇನ್ನೊಂದು ರೀತಿಯ ಶ್ರಮಪ್ರಧಾನ ಕೆಲಸವೇ ಹೊರತು (Donkey's work) ಬೌದ್ಧಿಕ ಕೆಲಸವಲ್ಲ. ಇದರಿಂದ ವೇದಗಳ ಬಗೆಗಿನ ಅವನ ತಿರಸ್ಕಾರದ ಧೋರಣೆಯಾಗಲೀ, ಬರವಣಿಗೆಯಾಗಲೀ, ಬದಲಾಗಲಿಲ್ಲವೆಂಬುದನ್ನು ಮರೆಯಬಾರದು. ಅಭಿಮಾನದಿಂದಲೂ, ಮೆಚ್ಚುಗೆಯಿಂದಲೂ ಬರೆದದ್ದು ಚೆನ್ನಾಗಿದ್ದೀತು. ತಪ್ಪು ಉದ್ದೇಶವನ್ನು ಮರೆಮಾಚದೇ ಮುಂದಿಟ್ಟುಕೊಂಡು, ಎಷ್ಟೊಂದು ದೊಡ್ಡ ಪ್ರಮಾಣದಲ್ಲಿ ಕೆಲಸ ಮಾಡಿದರೂ,ದುರುದ್ದೇಶದ ಪ್ರಮಾಣವನ್ನಷ್ಟೇ ಅದು ಸೂಚಿಸುವುದಲ್ಲವೇ ? ತಪ್ಪು ದಾರಿಯಲ್ಲಿ ಎಷ್ಟು ದೂರ ನಡೆದರೇನು? ಸರಿದಾರಿಯ ಒಂದೇ ಹೆಜ್ಜೆಗೆ ಸರಿಸಮವಾದೀತೇ ? ಆದುದರಿಂದ ಪಾಶ್ಚಾತ್ಯರ "ವೇದ ಸಂಶೋಧನಾ" ಪ್ರಯತ್ನವನ್ನು ಪರಿಮಾಣದ ಆಧಾರದ ಮೇಲೆ, (Quantitative) ಅಳತೆಗೆ ಗುರಿಪಡಿಸತಕ್ಕದ್ದಲ್ಲ. ಇದು ಆಂತರಿಕ ಗುಣದ ಆಧಾರದಿಂದ (Qualitative) ಬೆಲೆ ಕಟ್ಟತಕ್ಕದ್ದು; ಇಷ್ಟರ ಮೇಲೆಯೂ

ಅವರ ಗ್ರಂಥಗಳಲ್ಲೂ ಗ್ರಾಹ್ಯಾಂಶಗಳು ಇದ್ದರೆ ಸ್ವೀಕರಿಸುವುದಕ್ಕೆ ಅಭ್ಯಂತರವೇನೂ ಇಲ್ಲ. ಆದರೆ ಸಾಮಾನ್ಯ ವಾಚಕನಿಗೆ, ಯಾವುದು ಸ್ವೀಕಾರ ಯೋಗ್ಯ, ಅಥವಾ ಅಲ್ಲ ಎಂಬುದು ಹೇಗೆ ತಿಳಿಯ ಬೇಕು ? ಪಂಡಿತ ರೆಂದುಕೊಳ್ಳುವವರೇ ಹಳ್ಳದಲ್ಲಿ ಬಿದ್ದು ಏಳಲಾರದೇ ಇರುವಾಗ, ಉಳಿದವರ ಪಾಡೇನು ? ಉದ್ದೇಶ ಒಳ್ಳೆಯದಲ್ಲವಾದ್ದರಿಂದ, ಎಲ್ಲೆಲ್ಲೂ ಶಂಕೆ ಆಗ ಬಹುದು. ಭ್ರಮೆ ಆಗಬಹುದು. ಆದ್ದರಿಂದ ಸಂಪ್ರದಾಯಾನುಸಾರ ಭಾರ ತೀಯ ದೃಷ್ಟಿ ಕೋನದಿಂದಲೇ ವಿವೇಚಿಸಲಾದ ವೇದ ಪರಿಚಯ ಗ್ರಂಥಗಳು ಅತ್ಯಂತ ಅವಶ್ಯವಾಗಿವೆ. ಈ ಕೊರತೆಯನ್ನು ತುಂಬಲು ಈ ನಮ್ಮ ಗ್ರಂಥ ಮಾಲೆಯು ಸ್ವಲ್ಪವಾದರೂ ಸಹಾಯಕವಾದರೆ, ಲೇಖಕನಿಗೆ ತೃಪ್ತಿಯಾ ದೀತು. ಇಂಗ್ಲೀಷು ಭಾಷೆಯನ್ನು ಭಾರತದಲ್ಲಿ ಅಧ್ಯಯನಕ್ಕೆ ತಂದು, ಆಂಗ್ಲ ಮಾದರೀ ವಿದ್ಯಾಭ್ಯಾಸ ಕ್ರಮವನ್ನು ಇಲ್ಲಿ ಗೊತ್ತುಪಡಿಸಲು ಶ್ರಮಿಸಿದ ಲಾರ್ಡ್‌ಮೆಕಾಲೇ ಎಂಬುವನು ಇದರ ಉದ್ದೇಶವನ್ನು ಹೀಗೆ ವಿವರಿಸಿದ್ದಾನೆ: "ಇಂಗ್ಲೀಷು ವಿದ್ಯಾಭ್ಯಾಸವು, ಮುಂದೆ ರಕ್ತ-ವರ್ಣಗಳಲ್ಲಿ ಮಾತ್ರ ಭಾರತೀಯರಾಗಿಯೂ, ಅಭಿರುಚಿ, ವಿಚಾರ, ನೀತಿವಂತತೆ, ಬುದ್ಧಿ ಶಕ್ತಿಗಳಲ್ಲಿ ಆಂಗ್ಲರಾಗಿಯೂ ಇರುವ ಹೊಸದೊಂದು ವರ್ಗದ ಜನ ರನ್ನೇ ಸಿದ್ಧಪಡಿಸುತ್ತದೆ."

ಮ್ಯಾಕ್ಸ್‌ಮ್ಯುಲ್ಲರ್‌ನು ತನ್ನ ಬಂಗಾಳೀ ಸ್ನೇಹಿತನೊಬ್ಬನಿಗೆ ಬರೆದ ಪತ್ರ ದಲ್ಲಿ "ನೀನೂ, ನಿನ್ನ ದೇಶಬಾಂಧವರೂ ಪ್ರಕಟವಾಗಿಯೇ ಕ್ರೈಸ್ತರಾಗಲು ಏನು ತೊಂದರೆಗಳಿವೆ ತಿಳಿಸು.....ನನ್ನ ದೃಷ್ಟಿಯಲ್ಲಿ ಇಂಡಿಯಾ ದೇಶವು, ಕನಿಷ್ಠ ಪಕ್ಷ ಅದರ ಮುಖ್ಯ ಭಾಗವು, ಈಗಾಗಲೇ ಕ್ರೈಸ್ತಮತಕ್ಕೆ ಪರಿವರ್ತಿತ ವಾಗಿದೆ. ಕ್ರಿಸ್ತನ ಅನುಯಾಯಿಯಾಗಲು ಈಗ ನಿನಗೆ (ನಿಮಗೆ) ಒತ್ತಾ ಯವೇ ಬೇಕಿಲ್ಲ....." ಎಂದು ಬರೆದಿದ್ದಾನೆ ! (ಪತ್ರಗಳು, ಸಂಪುಟ ೨ ಪುಟ ಗಳು ೪೧೫-೪೧೬). ಅಂದ ಮೇಲೆ, ಭಾರತೀಯ ದೃಷ್ಟಿಯಿಂದಲೇ ಬರೆಯ ಲ್ಪಟ್ಟ ವೇದ ಪರಿಚಯ ಗ್ರಂಥಗಳ ಅವಶ್ಯಕತೆಯ ತೀವ್ರತೆಯ ಅರಿವು ಆಗ ಬಹುದಲ್ಲವೆ ?

ಆದರೆ ದುರ್ದೈವದಿಂದ, ಭಾರತೀಯ ಸಂಸ್ಕೃತಿಯನ್ನು ಪರದೇಶದ ವರಿಗೆ ಪರಿಚಯ ಮಾಡಿಕೊಡಲು ಹೊರಟ ಅನೇಕ ಭಾರತೀಯ

ವಿದ್ವಾಂಸರೇ ತಪ್ಪು ದಾರಿಯನ್ನು ಹಿಡಿದರು. ನಮ್ಮ ಗ್ರಂಥಗಳೆಲ್ಲವೂ ಮೋಕ್ಷವೊಂದನ್ನೇ ಎತ್ತಿ ಹಿಡಿಯುತ್ತವೆ, ಎಂಬ ಅರ್ಥ ಬರುವಂತೆ, ಬರೆದ ಈ ವಿದ್ವಾಂಸರು ಹೇಗೋ ತಾವು ಪಾಶ್ಚಾತ್ಯರಿಗಿಂತ ಕೀಳೆಂಬ ಮಾನಸಿಕ ರೋಗಕ್ಕೆ ತುತ್ತಾಗಿ ಈ ಒಂದು ವಿಷಯದಲ್ಲಾದರೂ ತಾವು ಮೇಲಾಗಿದ್ದೇವೆ ಎಂದು ತೋರಿಸಲು ಹೊರಟಂತೆ ಕಾಣುತ್ತದೆ. ರಾಜಕೀಯ ಶಾಸ್ತ್ರ, ಅರ್ಥ ಶಾಸ್ತ್ರ, ಖಗೋಳ, ಗಣಿತ, ವೈದ್ಯ, ರಸಾಯನ ಶಾಸ್ತ್ರ, ಕೊನೆಗೆ ಕಾಮ ಶಾಸ್ತ್ರ, ಇವುಗಳಲ್ಲೆಲ್ಲ ಭಾರತೀಯರು ಬಹುಹಿಂದೆಯೇ ಸಂಪಾದಿಸಿದ ಅಪಾರ ತಜ್ಞಾನ ರಾಶಿಯ ಬಗ್ಗೆ ಏನನ್ನೂ ಬರೆಯದೆ, ಕೇವಲ ಮೋಕ್ಷವನ್ನಷ್ಟೇ ವಿವೇಚಿಸುವ ಗ್ರಂಥಗಳ ಬಗೆಗೆ ಹೆಚ್ಚು ಲಕ್ಷ್ಯ ಕೊಟ್ಟದ್ದು ಈ ಅನರ್ಥಕ್ಕೆ ಮೂಲವಾಯಿತು. ಅದಿರಲಿ, ವೇದದಲ್ಲಿಯೇ "ಉಪನಿಷತ್ತು" ಗಳಷ್ಟೇ ಮುಖ್ಯವೆಂದೂ, [ಅವರ ಪ್ರಕಾರ], ಸಂಹಿತೆ, ಬ್ರಾಹ್ಮಣಗಳು ಕೇವಲ ಐಹಿಕ ಜೀವನವನ್ನಷ್ಟೇ ಕುರಿತು ಹೇಳುರುವದರಿಂದ ಅವು ಅಮುಖ್ಯವೆಂದೂ ಒಂದು ವಿಚಿತ್ರವಾದ ಸಿದ್ಧಾಂತವು ರೂಪಗೊಂಡಂತೆ ಕಾಣುತ್ತದೆ. ಐಹಿಕ ಜೀವನದ ಪವಿತ್ರತೆಯನ್ನೂ, ಬದುಕಬೇಕೆಂಬ ಉತ್ಕಟ ಬಯಕೆಯನ್ನೂ ಪ್ರತಿಬಿಂಬಿಸುವ ಈ ವೇದರಾಶಿಯನ್ನು ಮೊದಲು ತಿರಸ್ಕಾರ ಭಾವದಿಂದ ಕಂಡು, ನಂತರ ಆರಣ್ಯಕೋಪನಿಷತ್ತುಗಳ, ಪಾರಲೌಕಿಕತೆಯನ್ನು, ಐಹಿಕ ಸುಖಕ್ಕೆ ಇವು ಬೆಲೆಕೊಟ್ಟಿಲ್ಲ ಎಂಬ ಆರೋಪಿತ ಕಾರಣದಿಂದ ತಿರಸ್ಕರಿಸು ದನ್ನೂ ಪರಸ್ಪರ ಅಸಂಬದ್ಧ ಆರೋಪಗಳು ಎಂದು ಅನೇಕರು ಕಂಡಂತಿಲ್ಲ. ಒಟ್ಟಿನಮೇಲೆ ಯಾವುದೇ ಕಾರಣದಿಂದಲಾದರೂ ವೇದರಾಶಿಯನ್ನು ನಿಂದಿ ಸಲೇ ಬೇಕೆಂದು ಹೊರಟವನು ಈ ರೀತಿಯಲ್ಲಿ ವೇದದ ಒಂದು ಭಾಗವನ್ನು ಮತ್ತೊಂದರ ವಿರುದ್ಧ ಎತ್ತಿ ಹಿಡಿದ ತಂತ್ರ ಭಾರತೀಯ"ವಿದ್ವಾಂಸ" ರಿಗೆ ತಿಳಿಯದಿದ್ದುದು ಬಹುದುರದೃಷ್ಟಕರ.

ವೇದಗಳು ಎಲ್ಲಿಯೂ ಲೌಕಿಕ ಜೀವನದ ಬಗ್ಗೆ ಕೇವಲ ತಿರಸ್ಕಾರ ಭಾವದಿಂದ ಉದ್ಗಾರ ತೆಗೆದಿಲ್ಲ; ಬದಲಾಗಿ ವೇದದ, ಮುಖ್ಯ ಸಂದೇಶವನ್ನು "ಭದ್ರಂ ಕರ್ಣೇಭಿಃ", "ಪಶ್ಯೇಮ ಶರದಃಶತಂ" "ಸಹನಾವವತು" ಇತ್ಯಾದಿ ವೇದ ವಾಕ್ಯಗಳಲ್ಲಿ ಚೆನ್ನಾಗಿ ಕಾಣಬಹುದು. "ಧೃಡಾಂಗರಾದಿ. ಆಯುಷ್ಯ

ಇರುವತನಕ, ದೇವತೆಗಳನ್ನು ಸ್ತುತಿಸಲು ಅವರಿಗೆ ಹಿತವನ್ನು ಆಚರಿಸಲು, ಕಿವಿಗಳಿಂದ ಒಳ್ಳೆಯದನ್ನೇ ಕೇಳೋಣ, ಕಣ್ಣುಗಳಿಂದ ಒಳ್ಳೆಯದನ್ನೇ ನೋಡೋಣ.....ನೂರಾರು ಶರತ್ಕಾಲ ಆನಂದದಿಂದ ಬಾಳೋಣ"ಎಂಬುದೇ ವೇದಗಳ ನಿತ್ಯ ಸಂದೇಶ. ಬೌದ್ಧರ ಪ್ರವಾಹ ಬಲಿತ ಮೇಲೆ ಅವರ ತತ್ತ್ವದ ಹಿನ್ನೆಲೆಯಲ್ಲಿ ವೇದಗಳನ್ನು ಕಂಡವರಿಗೆ ಈ ವೈದಿಕ ಸಂದೇಶದ ವಿಷಯಕ್ಕೆ ತಿರಸ್ಕಾರ ಹುಟ್ಟಿರಬೇಕು. ಇಲ್ಲದಿದ್ದರೆ ಪಶು, ಪುತ್ರ, ವೃದ್ಧಿಗಾಗಿಯೂ, ಶತ್ರುಗಳಿಂದ, ರಕ್ಷಣೆಗಾಗಿಯೂ ಪ್ರಾರ್ಥಿಸುವ ಸೂಕ್ತಗಳ ಬಗ್ಗೆ ತಿರಸ್ಕಾರ ಏಕೆ ಮೂಡಬೇಕು ? ಬದುಕುವುದೇ ಅಪರಾಧವೆಂದೂ, ದುಃಖವೊಂದೇ ನಿತ್ಯ ಸತ್ಯವೆಂದೂ, ಬೋಧಿಸುವ ಬೌದ್ಧಮತದ ನಿರಾಶಾವಾದದ ಹಿನ್ನೆಲೆಯಲ್ಲಿ ನೋಡಿದ ಹೊರತು, ಕೇವಲ ಸಂನ್ಯಾಸದ ಬಗೆಗೆ ಮಾತ್ರ ಅನುಚಿತವಾದ ಗೌರವ ಮೂಡುವುದು ವೈದಿಕನಿಗೆ ಶಕ್ಯವಿಲ್ಲ ವೇದದ ಋಷಿಗಳು ಯಾರೂ ಸಂನ್ಯಾಸಿಗಳಾಗಿರಲಿಲ್ಲ. "ಮಹಾಶಾಲ"ರೆಂದು ಪ್ರಸಿದ್ಧರಾದ ಈ ಮಹಾಗೃಹಸ್ಥರು ಬೌದ್ಧ ವಿಹಾರದಂತಹ ಶೂನ್ಯ ಸ್ಥಳಗಳಲ್ಲಿ ವಾಸ ಮಾಡುತ್ತಿದ್ದವರಲ್ಲ. "ಆಶ್ರಮ"ಗಳೆಂದರೆ "ಶ್ರಮ" ಪೂರ್ವಕವಾಗಿ ದುಡಿದು ಪ್ರಕೃತಿಯೊಡನೆ ಸ್ನೇಹದಿಂದ ಬಾಳುವ ಕ್ಷೇತ್ರಗಳು. ಅವು ಕೇವಲ ಗುಡಿಸಲು ಗಳಲ್ಲ. ಸರಳ ಜೀವನವನ್ನೇ ಗುರಿಯನ್ನಾಗಿಟ್ಟುಕೊಂಡು ಸಹಸ್ರಾರು ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾದಾನ ಮಾಡುವ ಮತ್ತು ಅವರಿಗೆ ಬೇಕಾದ ಅನ್ನವನ್ನು ಆಶ್ರಮದ ಪರಿಸರದಲ್ಲೇ ಉತ್ಪಾದಿಸಲು ವ್ಯವಸಾಯಕ್ಕೆ ಏರ್ಪಾಡುಗಳನ್ನು ಪಡೆದ ವಿಸ್ತಾರವಾದ ಗ್ರಾಮ, ಅಥವಾ ಅರಣ್ಯದ ಭಾಗ ಗಳಿಗೆ ಆಶ್ರಮಗಳೆಂದು ಹೆಸರಿದ್ದಿತು. ಮಹಾಭಾರತ ರಾಮಾಯಣಗಳಲ್ಲಿ ಬರುವ ಋಷ್ಯಾಶ್ರಮಗಳ ವರ್ಣನೆಯೇ ಇದಕ್ಕೆ ಸಾಕ್ಷಿ.

ಋಷಿಗಳು ಜೀವನಕ್ಕೆ ಅಂಜಿ, ಸಮಾಜದಿಂದ ಓಡಿಹೋದ ಅಂಜು ಬುರುಕರಲ್ಲ. ಆದರೆ ತೃಪ್ತಿಯ ಜೀವನವನ್ನು ನಡೆಸಲು, ಸರಳತೆಗೆ ಸಹಜ ಸ್ಥಾನವನ್ನು ಹುಡುಕಿ ಹೊರಟವರು, ಜ್ಞಾನವನ್ನೇ ಗುರಿಯನ್ನಾದಿಟ್ಟು ಕೊಂಡವರು. ಸುಖಸಮೃದ್ಧ ಜೀವನಕ್ಕೆ ವಿರೋಧಿಗಳಾಗಿದ್ದವರಲ್ಲ. ಋಷಿ ಗಳು, ಭಿಕ್ಷುಕರಾಗಿ ಬಾಳಿದವರೂ ಅಲ್ಲ. "ಕುಲಪತಿ" ಶಬ್ದದ ವ್ಯಾಖ್ಯಾನ

ವನ್ನು ಮಹಾಭಾರತದಲ್ಲಿ ನೋಡಿದರೆ, ಅನೇಕ ತಪ್ಪು ಕಲ್ಪನೆಗಳ ನಿವಾರಣೆಯಾಗುವುದು. ಐಶ್ವರ್ಯವಂತರೂ ರಾಜರುಗಳೂ, ಆಗಾಗ, ವಿಶ್ರಾಂತಿಗೆಂದೋ, ಸಲಹೆ ಕೇಳಲೆಂದೋ, ಈ ಮಹರ್ಷಿಗಳ ಬಳಿ ಬರುತ್ತಿದ್ದರೆಂದ ಮೇಲೆ, ವೇದದ ಕಾಲದ ಸಂಸ್ಕೃತಿಯು ಎಂತಹ ಮೌಲ್ಯಗಳನ್ನು ಹೊಂದಿತ್ತೆಂಬುದು ಸ್ಪಷ್ಟವಾಗುತ್ತದೆ. ಹೀಗೆಲ್ಲ ಸತ್ಯಸಂಗತಿ ಇದ್ದರೂ, ಅನೇಕ ಪಾಶ್ಚಾತ್ಯರು ಇವುಗಳನ್ನು ತಿಳಿಯದೆಯೋ ಅಥವಾ ಬೇರೆ ಕಾರಣದಿಂದಲೋ ಭಾರತೀಯ ಸಂಸ್ಕೃತಿಯು ಜೀವಸತ್ತ್ವ ಕಳೆದುಕೊಂಡದ್ದೆಂದು ಬರೆದಿರುವುದು ಅಚ್ಚರಿಯನ್ನುಂಟುಮಾಡುತ್ತದೆ.

ಅಮೌರಿ. ಡಿ. ರೀಇನ್‌ಕೋರ್ಟ್ ಎಂಬ ಮಹಾಶಯನು, "The Soul of India" ಎಂಬ ತನ್ನ ಪುಸ್ತಕದಲ್ಲಿ ಹೊಸದೊಂದು "ಸಿದ್ಧಾಂತ"ವನ್ನೇ ಮಂಡಿಸಿ, ಪ್ರತಿಯೊಂದು "ಸಂಸ್ಕೃತಿ"ಯೂ ಪ್ರಾರಂಭದಲ್ಲಿ ಯೌವನದಿಂದ ಕೂಡಿದ್ದು ಅನಾಗರಿಕ ಜನಗಳ ದಂಡಯಾತ್ರೆಯಿಂದ ಜಾಗ್ರತಿಗೊಂಡು ಎಲ್ಲ ಕ್ಷೇತ್ರಗಳಲ್ಲಿಯೂ ತನ್ನ ಸೃಜನ ಶಕ್ತಿಯನ್ನು ವ್ಯಕ್ತಪಡಿಸಿ, ಉನ್ನತಿಯನ್ನು ಮುಟ್ಟಿ ನಂತರ ಅಧಃಪಾತವನ್ನು ಹೊಂದಿ, ಕೊನೆಗೆ "ನಾಗರೀಕತೆ"ಯಾಗಿ ಮತ್ತೆಂದೂ ಮೇಲೇಳದಂತೆ ಹಾಳಾಗಿ ಹೋಗುವುದೆಂದು ಇವನ ವಾದ. ಇದರ ಪ್ರಕಾರ ಭಾರತೀಯ ಸಂಸ್ಕೃತಿಯು ಹರಪ್ಪಾ, ಮೊಹೆಂಜೋದಾರೋಗಳ ಕಾಲಕ್ಕೇ ಶಿಖರವನ್ನು ಮುಟ್ಟಿದುದಾಗಿಯೂ. "ಅನಾಗರೀಕ"ರಾದ ವೈದಿಕ ಆರ್ಯರಿಂದ ಧರ್ಷಿಸಲ್ಪಟ್ಟುದಾಗಿಯೂ, ವೇದಗಳ ಕಾಲವೇ ಭಾರತದ ಮಧ್ಯಯುಗವೆಂದೂ, ಉಪನಿಷತ್ತುಗಳ ಕಾಲವೇ ಹೊಸ ಯುಗಾರಂಭವೆಂದೂ, ಬುದ್ಧನ ಕಾಲದ ಸಮಯಕ್ಕೆ ಇದು ಅವನತಿಯನ್ನು ಹೊಂದಿತೆಂದೂ, ನಂತರ ಬಂದ ಮೌರ್ಯ ಚಕ್ರಾಧಿಪತ್ಯವು ಜಾತಿ ಸಮಸ್ಯೆಯಿಂದ ಕೂಡಿದ್ದು. ಕೇವಲ, "ನಾಗರೀಕತೆ" ಯಾಯಿತೆಂದೂ, "ವಿಶ್ವಸಮಾಜ" ಕ್ಕೆ ಬದಲು, ಬರೀ "ರಾಷ್ಟ್ರದ" ಕಲ್ಪನೆ ಉಂಟಾಗಿ, ಭಾರತದ ಸೂರ್ಯನು ಮುಳುಗಿಯೇ ಹೋದನೆಂದೂ, ನಂತರ ಬಂದ ವಿಜಯನಗರ ಸಾಮ್ರಾಜ್ಯ ಮತ್ತು ಅದರ ಸಂಸ್ಕೃತಿಗಳು "ಬೆಳದಿಂಗಳ ನಾಗರಿಕತೆಯೆಂದೂ (Moon-light Civilization), ಮೊಗಲ ಮತ್ತು ಐರೋಪ್ಯ ಸಾಮ್ರಾಜ್ಯ ಶಕ್ತಿಗಳು

ಭಾರತವನ್ನು ಗೆಲ್ಲುವುದಕ್ಕೆ ಭಾರತದ .ಸಂಸ್ಕೃತಿಯ ಅಂತಸ್ಸತ್ವ ಶೂನ್ಯತೆಯೇ ಕಾರಣವೆಂದೂ, ಇತ್ಯಾದಿ—ಬರೆದಿರುವುದು ವಿನೋದ ಉಂಟುಮಾಡು ವಂತಿದೆ. ಈ ಸಿದ್ಧಾಂತವನ್ನು ಗ್ರೀಕರಿಂದ ಮೊದಲು ಮಾಡಿ ಈಗಿನ ಪಾಶ್ಚಾತ್ಯ ಸಂಸ್ಕೃತಿಗೇ ಹೆಚ್ಚು ಸಮರ್ಪಕವಾಗಿ ಅನ್ವಯ ಮಾಡಬಹು ದೆಂಬುದನ್ನೂ ಕುರುಡನಾದ ಈ ಮಹಾಶಯನು ಏಕೋ ಕಾಣಲಿಲ್ಲ.

ಇದಲ್ಲದೆ ಭಾರತೀಯ ಸಂಸ್ಕೃತಿಯು "ಕಾಲ"ವನ್ನು ಕಡೆಗಣಿಸಿದೆ ಯೆಂದೂ, ಅದಕ್ಕೆ ನಮ್ಮ ಭೌಗೋಲಿಕ ಪರಿಸರವೇ ಕಾರಣವೆಂದೂ, ಒಬ್ಬ ದೇವರ ಕಲ್ಪನೆಯೇ ಈ ಸಂಸ್ಕೃತಿಯಲ್ಲಿ ಬರುವುದು ಅಸಾಧ್ಯವೆಂದೂ, ಭಾರ ತೀಯ ವ್ಯಕ್ತಿತ್ವವು ಏಕರೂಪತೆಯನ್ನು ಸಮರಸತೆಯನ್ನು, ಹೊಂದದೆಯೇ ಇದ್ದುದರಿಂದ ಯೋಗವೆಂಬ ಶಾಸ್ತ್ರವು ಅವರಿಗೆ ಅವಶ್ಯಕವಾಯಿತೆಂದೂ ಬರೆದಿದ್ದಾನೆ. ಪರಕೀಯರನ್ನು ದ್ವೇಷಿಸುವುದು ಭಾರತೀಯ ಸಂಸ್ಕೃತಿಗೆ ಸಹಜವಾಗಿದೆಯಂತೆ! ಋಗ್ವೇದವೆಂಬುದು, ದ್ರಾವಿಡ ಸಂಸ್ಕೃತಿಯೆಂದು ಭಾವಿಸಲಾದ ಹರಪ್ಪ--ಮೊಹೆಂಜೋದಾರೊಗಳ ಸಂಸ್ಕೃತಿಯನ್ನು "ಅನಾಗರಿಕ" ಆರ್ಯರು ನಿರ್ನಾಮ ಮಾಡಿದ ಚಾರಿತ್ರಿಕ ಘಟನೆಯ ಮಹಾಕಾವ್ಯವಂತೆ! (ಇದೇ ಧಾಟಿಯಲ್ಲಿ ಇನ್ನೂ ಬರೆಯುತ್ತಿರುವ ನೀರದ ಚೌಧುರಿ ದೊಡಲಾ ದವರ ಬರವಣಿಗೆಯು ಇನ್ನೂ ವಿಚಿತ್ರವಾದ ಆರೋಪಗಳನ್ನು ಮಾಡಿದೆ.) ಭಾರತೀಯರು, ತಮ್ಮನ್ನು ತಾವೇ ಕನಿಕರ ಭಾವದಿಂದ ನೋಡಿಕೊಳ್ಳುವ ನಿಕೃಷ್ಟ ಮನೋಭಾವವುಳ್ಳವರು. ಒಳಗೂ, ಹೊರಗೂ, ಕೃತ್ರಿಮತೆ, ಸ್ವಭಾವ ಬೇಧವು ಭಾರತೀಯ ಸಂಸ್ಕೃತಿಗೆ ಸಹಜವೆಂದೂ, ಇದಕ್ಕೆ ಸಾಕ್ಷಿ. ನಮ್ಮನ್ನು ಗೆದ್ದವರನ್ನು ಒಳಗೆ ದ್ವೇಷಿಸಿದರೂ ಹೊರಗೆ ಅವರಿಗಾಗಿಯೇ ದುಡಿದಿರುವ ದೆಂಬುದನ್ನೂ ಈ ಮಹಾಶಯನು ಆರೋಪಿಸಿ ತೋರಿಸುತ್ತಾನೆ.

ಆದರೆ, ಜಗತ್ತಿನಲ್ಲಿ ವಿರಳಿತಗಳನ್ನು ಹೊಂದದ ಸಂಸ್ಕೃತಿ ಯಾವುದೂ ಇಲ್ಲ. ಅಷ್ಟೇ ಅಲ್ಲ, ಹೇಳ ಹೆಸರಿಲ್ಲದೇ ಅನೇಕ ಸಂಸ್ಕೃತಿಗಳು ನಿರ್ನಾಮವಾಗಿರುವ ಈ ಜಗತ್ತಿನಲ್ಲಿ ನಮ್ಮ ಸಂಸ್ಕೃತಿಯಂತೆ, ಅನಾದಿ ಕಾಲದಿಂದ ಇಲ್ಲಿಯವರೆಗೂ ಉಳಿದು ಬಂದ ಮತ್ತಾವುದಾದರೊಂದು ಸಂಸ್ಕೃತಿಯು ಇನ್ನೂ ಇದೆಯೇ ಎಂಬುದನ್ನು ಮನಗಾಣಬೇಕಾಗಿದೆ.

ಡಾ॥ ಸಚ್ಚಿದಾನಂದ ಮೂರ್ತಿ ಅವರ " The Indian Spirit " ಎಂಬ ಗ್ರಂಥವೂ, ಇದೇ ಮಾದರಿಯ ಈಚಿನ ಅನೇಕ ಗ್ರಂಥವೂ ಇಂತಹ ತಪ್ಪು ಕಲ್ಪನೆಗಳನ್ನು ಪರಿಹರಿಸಿ, ಯಥಾರ್ಥವನ್ನು ತಿಳಿಸಲು ಪ್ರಯತ್ನಿಸಿರುವುದು ಇದ್ದುದರಲ್ಲಿ ಅಲ್ಪ ತಪ್ಪಿಗೆ ಕಾರಣವಾಗಿದೆ.

ಅನೇಕರಿಗೆ ಭಾರತೀಯ ಸಂಸ್ಕೃತಿಯನ್ನು ಸಿಕ್ಕ ಹಾಗೆ ಟೀಕಿಸುವುದೇ ಉದ್ಯೋಗವಾದಂತಿದೆ. ನಡೆಯುವವನೊಬ್ಬನು ಬೀದಿಯಲ್ಲಿ ಎಡವಿಬಿದ್ದರೆ, " ಇದಕ್ಕೆ ಅವನ ಸಂಸ್ಕೃತಿಯೇ ಕಾರಣ " ಎಂದು ಟೀಕಿಸುವುದು ಸಂಸ್ಕೃತಿ ವಿಮರ್ಶೆಯಾಗಲಾರದು. ಸಂಸ್ಕೃತಿಯಲ್ಲಿ ಒಂದು ಧ್ಯೇಯಾಂಶವೂ ಮತ್ತೊಂದು ಆಚರಣೆಯ ಅಂಶವೂ ಇರುವುದು ಎಲ್ಲರಿಗೂ ಗೊತ್ತಿರುವ ವಿಷಯ. (The Ideal and the Actual aspects ). ಅಂದರೆ, ನಮ್ಮ ವೇದರಾಶಿಯೂ ಸ್ಮೃತಿ ಗ್ರಂಥಗಳೂ ಮುಂತಾದವು ಈ ಧ್ಯೇಯಾಂಶವನ್ನು ಪ್ರತಿಬಿಂಬಿಸುತ್ತವೆ. ಈ ಸಂಸ್ಕೃತಿಯನ್ನು ಆಶ್ರಯಿಸಿದವನೊಬ್ಬನು, ಆದರಂತೆ ಆಚರಣೆಯಲ್ಲಿ ನಡೆದುಕೊಳ್ಳದಿದ್ದರೆ, ಅವನು ವಂಚಕನೆಂದೋ ಬೂಟಾಟಿಕೆಯವನೆಂದೋ ಮಾತ್ರ ಸಿದ್ಧವಾಗುವುದೇ ವಿನಾ, ಅವನು ಆಶ್ರಯಿಸಿರುವುದಾಗಿ ಹೇಳಿಕೊಳ್ಳುವ ಸಂಸ್ಕೃತಿಯೇ ಸರಿಯಲ್ಲವೆಂದು ಆಗುವುದಿಲ್ಲ.

ಭಾರತೀಯರು ಈಗ ''ಬಡವರಾಗಿ''ರುವದಕ್ಕೆ, ಅವರ ಸಂಸ್ಕೃತಿ ಕಾರಣವಲ್ಲ. ಪರಕೀಯರು ಇಲ್ಲಿ ದಂಡಯಾತ್ರೆ ಮಾಡಿದ್ದಕ್ಕೂ, ಇಲ್ಲಿನ ರಾಜಕೀಯಅನೈಕ್ಯತೆಯೇ ಕಾರಣವೇ ವಿನಾ, ಭಾರತೀಯ ಸಂಸ್ಕೃತಿಯ ಮೂಲಭೂತ ಯಾವುದೇ '' ದೋಷ " ವಲ್ಲ. ಕೇವಲ ಆಕಸ್ಮಿಕ ಘಟನೆಗಳು ಚರಿತ್ರೆಯಲ್ಲಿ ಮಹತ್ತರ ಬದಲಾವಣೆಗಳನ್ನು ಮಾಡಿಲ್ಲವೆ ? ಪೃಥ್ವೀರಾಜ_ ಜಯಚಂದ್ರರ ವೈಯಕ್ತಿಕ ದ್ವೇಷವು ಇಂತಹದೊಂದು. ಬ್ರಿಟೀಷರು ಇಲ್ಲಿ ತಳ ಊರಿ ಸಾಮ್ರಾಜ್ಯ ಸ್ಥಾಪಿಸಿದುದಕ್ಕೆ ಅವರ " ಸಂಸ್ಕೃತಿ " ಕಾರಣವೇ ? ಯೂರೋಪಿಯನ್ನರಿಗೆ ಬೇಡವಾಗಿ ಕಳ್ಳಕಾಕರೆಂದು ಅಲ್ಲಿಂದ ಹೊರಗೆ ಹಾಕಿಸಿಕೊಂಡು ಇಲ್ಲಿ ಬಂದ ರಾಬರ್ಟ್ ಕ್ಲೈವ್, ಡ್ಯೂಪ್ಲೆ, ಮುಂತಾದವರಲ್ಲಿ ಏನು " ಸಂಸ್ಕೃತಿ " ಇದ್ದಿತು ? ಇದಲ್ಲದೆ, ಸಾಂಸ್ಕೃತಿಕ ಧ್ಯೇಯಗಳಿಗೂ

ಆಚರಣೆಗಳಿಗೂ, ಎಂತಹ ಪರಿಪೂರ್ಣ ಸಂಸ್ಕೃತಿಯಲ್ಲೂ ಸ್ವಲ್ಪ ಅಂತರವಿದ್ದೇ ಇರುವುದು. ಇಲ್ಲದಿದ್ದರೆ ಜೀವನದ ಪ್ರಗತಿಗೆ ಅರ್ಥಬಾರದು. "ದೇವ" ನಾಗಲು ಹೊರಟ ಮಾನವನು, "ದೇವ"ನಾಗಿಯೇ ಹೋಗಿದ್ದಾನೆಯೆ? ಇಲ್ಲ. ಆದ ಮಾತ್ರದಿಂದ ದೇವನಾಗಲು ಹೊರಡುವುದೇ ತಪ್ಪೇ ? ಬುದ್ಧಿ ವಂತರು ಯೋಚಿಸಲಿ. ಪ್ರಗತಿಯ ಪ್ರಾಯಿಕವಾದಿ ವೈಯ್ಯಕ್ತಿಕವಾಗಿ ಆಗುವ ಹಾಗೆ ಸಾಮೂಹಿಕ ಜೀವನದ ಒಟ್ಟಾರೆ ಸ್ವರೂಪದಲ್ಲಿ ಆಗುವುದು ಕಷ್ಟ. ಧ್ಯೇಯಗಳನ್ನು ಎತ್ತಿ ಹಿಡಿದಿದ್ದರೆ ಅಲ್ಲಲ್ಲೇ ಕೆಲವರಾದರೂ ಉದ್ಧಾರ ವಾದಾರು ಎಂದು ಆಸೆ. ಎಲ್ಲರೂ ಆಗಲಿಲ್ಲವೆಂದು ಇಡೀ ಧ್ಯೇಯಗಳನ್ನು ಬುಡ ಸಹಿತ ಕಿತ್ತು ಹಾಕುವವರನ್ನು ಮಾನವರೆನ್ನುವುದಕ್ಕಿಂತ ಮಂಗಗಳೆಂದು ಕರೆದರೆ ಹೆಚ್ಚು ಸಮಂಜಸವಾದೀತು.

ಇತರ ಧರ್ಮ-ಸಂಸ್ಕೃತಿಗಳನ್ನೂ ಸ್ವಲ್ಪ ಹೀಗೇ ನೋಡಿ ಪಾಠ ಕಲಿಯೋಣ, ಈಗಿನ ಮಧ್ಯ-ಪ್ರಾಚ್ಯದ ಅರಬರನ್ನೋ ಯಹೂದ್ಯರನ್ನೋ, ಬಂಗಾಳದಲ್ಲಿ ಪಾಕಿಸ್ಥಾನದ ಅಮಾನುಷ, ಕ್ರೂರವರ್ತನೆಯನ್ನೋ ನೋಡಿ. ಅವರ ಸಂಸ್ಕೃತಿಯ ಧ್ಯೇಯಗಳನ್ನೂ ಅಳೆಯ ಬಾರದೇಕೆ ? ಅವರ ಸಂಸ್ಕೃತಿಯ ಧ್ಯೇಯವೇ ಅವರ ಪಾಶವೀನಡತೆಗೆ ಮೂಲ ಕಾರಣವೆಂಬುದನ್ನು ಅವರು ಒಪ್ಪುವರೆ ? ಜಗತ್ತಿನಾದ್ಯಂತ ಇತರರನ್ನು ತುಳಿದು, ಸುಲಿಗೆ ಮಾಡಿ, ಇತರ ಜನಾಂಗಗಳನ್ನು ನಿರ್ನಾಮ ಮಾಡಿ ದೊಡ್ಡ ಸಾಮ್ರಾಜ್ಯಗಳನ್ನು ಸ್ಥಾಪಿಸಿ (ಈಗ ಅದರ ಫಲ ಅನುಭವಿಸುತ್ತಿರುವ) ಐರೋಪ್ಯರಲ್ಲಿ, ಈ ದೃಷ್ಟಿಯಂತೆ, ಏನು ಸಂಸ್ಕೃತಿ ಇದ್ದಿದ್ದು, ಈಗಲೂ ಇದೆ? ವಲಸೆ ಹೋಗಿ "ಅಮೇರಿಕಾ" ದಲ್ಲಿ ನೆಲೆಸಿ, ರೆಡ್ ಇಂಡಿಯನ್ಸ್, ಇನ್‌ಕಾಸ್ (ದ. ಅಮೇರಿಕೆಯವರು) ಮೊದಲಾದ ಜನಾಂಗಗಳ ನಿರ್ನಾಮಕ್ಕೆ ಕಾರಣರಾದ ಐರೋಪ್ಯ ಕ್ರೈಸ್ತರಿಗೆ, ಅವರ ಕ್ರೈಸ್ತ ಮತವೇ ಮೂಲ ಪ್ರಚೋದನೆಯನ್ನಿತ್ತಿತು ಎಂದು ಅವರು ಮೊದಲು ಒಪ್ಪಿ ಬರೆಯಲಿ, ನಂತರ ಎರಡನೆಯ ಸಂಸ್ಕೃತಿಯ ಮೂಲ ದೋಷಗಳಿಗೆ ಕೈ ಹಾಕೋಣ ! ಎರಡು ಮಹಾಯುದ್ಧಗಳನ್ನು ಜಗತ್ತಿಗೆ "ಕಾಣಿಕೆ"ಯನ್ನಾಗಿತ್ತು, ನಿದ್ರಿಸುತ್ತಿದ್ದ ಜಪಾನದ ಪಟ್ಟಣಗಳ ಜನರ ಮೇಲೆ ಅಣ್ವಸ್ತ್ರಗಳನ್ನು ಹಾಕಿ ಕೊಂದವರ "ಸಂಸ್ಕೃತಿ" ಎಂಥ ಮಟ್ಟದ್ದೆಂಬುದು

ಜಗತ್ಪ್ರಸಿದ್ಧವಾಗಿದೆ. ಕಣ್ಣೆದುರಿಗೇ ! ಭಾರತೀಯರು ಯಾವುದೇ ದೇಶವನ್ನು ನಿರ್ನಾಮ ಮಾಡಿ, ಜನಾಂಗಗಳನ್ನು ಅಳಿಸಿ, ರಾಕ್ಷಸೀರೀತಿಯಲ್ಲಿ ನಡೆದು ಕೊಂಡಿರುವ ಪುರಾವೆಗಳನ್ನು ಈ ಚರಿತ್ರೆಕಾರರು ಎತ್ತಿ ತೋರಿಸಲಿ, ನೋಡೋಣ. ದಕ್ಷಿಣ ಆಫ್ರಿಕೆ, ಉತ್ತರ ಅಮೇರಿಕೆಗಳಲ್ಲಿನ ನೀಗ್ರೋ ಜನರ ಇಂದಿನ ಪಾಡಿಗೆ ಪಾಶ್ಚಾತ್ಯ " ಸಂಸ್ಕೃತಿ " ಎಷ್ಟು ಮಟ್ಟಿಗೆ ಕಾರಣವಾಗಿದೆ ಯೆಂದು ಎಲ್ಲರಿಗೂ ತಿಳಿದಿದೆ.

ಹೀಗೆಂದು ತೋರಿಸಿದಾಗ, ಕೆಲವರು ; "ಇತರರ ಸಂಸ್ಕೃತಿಯಲ್ಲಿ ದೋಷ ಗಳಿರಬಹುದು. ಇವುಗಳನ್ನು ತೋರಿಸಿದ ಮಾತ್ರದಿಂದ ನಿಮ್ಮ ಸಂಸ್ಕೃತಿಯ ದೋಷಗಳನ್ನು ಇಲ್ಲವೆಂದಾಯಿತೇ ?" ಎಂದು ಕೇಳಬಹುದು. ಇದಕ್ಕೆ ಉತ್ತರ : ಒಂದು ಸಂಸ್ಕೃತಿಯಲ್ಲಿ ಜನರ ಆಚರಣೆಯನ್ನೂ ಮತ್ತೊಂದರಲ್ಲಿ ಧ್ಯೇಯವನ್ನೂ ಹೋಲಿಸುವುದು ಸರಿಯಲ್ಲ. ಹೋಲಿಸಲೇಬೇಕಾದರೆ ಎರಡರ ಆಚರಣೆಯನ್ನೂ ಹೋಲಿಸಿ ನೋಡೋಣ ; ಇಲ್ಲವೆ ಎರಡರ ಧ್ಯೇಯ ಗಳನ್ನೂ ಹೋಲಿಸೋಣ. ಹೀಗೆ ಮಾಡಿದಾಗ ತಿಳಿದು ಬರುವುದೇನೆಂದರೆ, ನಮ್ಮ ದೇಶದ ಜನರ ಆಚಾರ ವಿಚಾರಗಳಲ್ಲಿ ದೋಷಗಳಿದ್ದರೆ, ಅವು ಉಳಿದ ದೇಶದ ಜನರ ನಡುವಳಿಕೆಗಳಲ್ಲಿ ಇರುವುದಕ್ಕಿಂತ ಅನೇಕ ವಿಷಯಗಳಲ್ಲಿ ಹೆಚ್ಚು ದೋಷ ಪೂರಿತಗಳಲ್ಲ, ಅಥವಾ ವಾಸಿಯೇ ಆಗಿವೆ. ಧ್ಯೇಯಾಂಶಗಳಲ್ಲಿ ನಮ್ಮ ಸಂಸ್ಕೃತಿಯ ವೈಶಿಷ್ಟ್ಯ, ಹಿರಿಮೆಗಳು ಉಳಿದುವುಗಳಿಗಿಂತ ಹೇಗೆ ಭಿನ್ನವೂ, ಉತ್ತಮವೂ ಆಗಿವೆಯೆಂದು ಈ ಗ್ರಂಥ ಮಾಲೆಯ ಕುಸುಮಗಳು ತೋರಿಸಿ ಕೊಡುವುವು. ಅಂತೂ, ಹೇಗಾದರೂ, ಪಾಶ್ಚಾತ್ಯ ಧರ್ಮಗಳು ಮಾತ್ರವೆ ವಿಶ್ವಧರ್ಮಗಳೆಂದೂ, ನಮ್ಮದು ಅಲ್ಲವೆಂದೂ ವಾದಿಸುವವರು ದುರಾಗ್ರಹಪೀಡಿತರಾಗಿರುತ್ತಾರೆಂಬುದು ಇಲ್ಲಿ ತಾತ್ಪರ್ಯ. ನಮ್ಮ ಸಂಸ್ಕೃತಿಯ ಆಚರಣೆಯ ಭಾಗದಲ್ಲಿ ದೋಷಗಳೇ ಇಲ್ಲವೆಂದು ಯಾರೂ ಹೇಳಲಾರರು. ಆದರೆ ಇವು, ನಮ್ಮ ಮೌಲ್ಯಗಳ " ಮೂಲ-ದೋಷ " ಗಳಿಂದ ಬಂದಿರುವು-ದೆಂದು ಹೇಳುವದಕ್ಕಿಂತ, ನಮ್ಮ ಮೌಲ್ಯಗಳನ್ನು ಕಡೆಗಣಿಸಿರುವುದರಿಂದಲೇ ಬಂದಿವೆಯೆಂದೂ, ಎಚ್ಚರಿಕೆ ವಹಿಸಿ ನಡೆದರೆ, ತಿದ್ದಿಕೊಳ್ಳಬಹುದಾದುವೆಂದೂ ಹೇಳುವುದು ವಿವೇಕ. ಭಾರತೀಯ ಸಂಸ್ಕೃತಿಯ ಪ್ರೇಮಿಗಳು ಮಾತನಾಡುವ

ರೀತಿ ಇದು, ಕೇವಲ ಆಸೆ, ಆಮಿಷ, ಬೆದರಿಕೆ, ಬಲಾತ್ಕಾರಗಳಿಂದ, ರಾಜಕೀಯ ಪಕ್ಷಾಂತರವಾದವನಂತೆ, ಮಾನವನು "ಮತಾಂತರ" ಹೊಂದಿದ ಮಾತ್ರದಿಂದ, ಅವನ ಸಂಸ್ಕೃತಿ ಬದಲಾಗಲಾರದು. ಸಂಸ್ಕಾರವೇ ಬದಲಾದ ಹೊರತು ವ್ಯಕ್ತಿಪರಿವರ್ತನೆ ಆಗುವುದಿಲ್ಲ. ಇದಕ್ಕೆ ವಿಚಾ ಪರತೆ ಅತ್ಯಂತ ಅಗತ್ಯವಾಗಿದೆ.

ಪಾಶ್ಚಾತ್ಯ ತತ್ತ್ವಶಾಸ್ತ್ರಕ್ಕಿಂತ, ಭಾರತೀಯ ತತ್ತ್ವಶಾಸ್ತ್ರ ಹೇಗೋ ಹೀನವಾಗಿದೆಯೆಂದು ಅರ್ಥ ಬರುವಂತೆ ಅನೇಕರು ಬರೆದಿರುವುದೂ ನಿರಾಧಾ ವಾದುದು. ಆಧುನಿಕ ಚಾರಿತ್ರಿಕ ಪದ್ಧತಿ ಎಂಬುದು ಐರೋಪ್ಯರ ಮಟ್ಟಿ ಆಧುನಿಕವಿರಬಹುದು. ಭಾರತೀಯರಿಗೆ ಇದು ಹೊಸದಲ್ಲ. ಇನ್ನು ಭಾರತೀಯರ ಕಾಲಪ್ರಜ್ಞೆಯ ವಿಚಾರ. ಭಾರತೀಯನು ವಿಶ್ವದ ಘಟ ಗಳಲ್ಲಿಯೂ, ತನ್ನ ಚರಿತ್ರೆಯಲ್ಲಿಯೂ, ಯಾವುದು ಮುಖ್ಯವೋ ಅವುಗಳನ್ನು ಮರೆಯದೇ ತನ್ನ ನಿತ್ಯಸ್ಮರಣೆಯಲ್ಲಿ ಇಟ್ಟುಕೊಂಡೇ ಇದ್ದಾನೆ.

ಸನಾತನ ಋಷಿಗಳಿಂದ, ದಿವ್ಯಜ್ಞಾನವು, ಅನೇಕ ಸಹಸ್ರ ವರ್ಷಗಳ ಶಿಷ್ಯ ಪರಂಪರೆಯಲ್ಲಿ ಹರಿದು ಬಂದಿರುವ ಸಾಕ್ಷಿಗಳು, ಉಪನಿಷದಾಚಾರ್ಯರು ಗಳ ಸುದೀರ್ಘಪಟ್ಟಿಗಳಿಂದ ದೃಢಪಡುತ್ತವೆ. (ಛಾಂದೋಗ್ಯ ಮತ್ತು ಬೃಹ ದಾರಣ್ಯಕಗಳ ಅನೇಕ ಅಧ್ಯಾಯಗಳ ಕೊನೆಯಲ್ಲಿ ಇಂತಹ ಪಟ್ಟಿಗಳಿವೆ.) ಮುಖ್ಯ ಅಮುಖ್ಯ ವಿವೇಚನೆಯಿಲ್ಲದ, ನಡವಳಿಕೆಗಳ ಪಟ್ಟಿ ಎಂಬ ಅರ್ಥ ದಲ್ಲಿ ಚರಿತ್ರೆಯು ಭಾರತೀಯನಿಗೆ ನಿಷ್ಪ್ರಯೋಜಕವಾಗಿ ಕಂಡಿರಬೇಕು. ಗ್ರಂಥ ರಚನೆಯಲ್ಲಿಯೂ ಸಹ ಭಾರತೀಯರು ನಿತ್ಯ ಜೀವನಕ್ಕೆ ಮತ್ತು ಆದ ಸಾಧನವಾದ ಮನುಷ್ಯನ ಸ್ಮರಣೆಗೆ ಉಪಕಾರಕವಾದ ರೀತಿಯಲ್ಲೇ ಸೂತ್ರ ವೃತ್ತಿ, ಮುಂತಾದ ರೀತಿಯ ವಿಶಿಷ್ಟಗ್ರಂಥಗಳನ್ನು ರಚಿಸುತ್ತಿದ್ದರು. ತಪ್ಪೋ ಸರಿಯೋ, ತಲೆಗೆ ತೋರಿದುದನ್ನಷ್ಟೆ ಬರೆದು, ಯಾವುದೇ ವಿಧ ದಿಂದಲಾದರೂ ಪ್ರಸಿದ್ಧಿಗಾಗಿ ಹಂಬಲಿಸುವ ಇಂದಿನ ದೃಷ್ಟಿಗೂ, ಭಾರತೀಯನ ದೃಷ್ಟಿಗೂ ಅಜಗಜಾಂತರ ವ್ಯತ್ಯಾಸವಿದೆ. ಪುಸ್ತಕದಲ್ಲೇ ಉಳಿದ ವಿದ್ಯೆಯೂ ಮತ್ತೊಬ್ಬನ ಕೈಯ್ಯಲ್ಲಿರುವ ನಮ್ಮ ಹಣವೂ ಸಕಾಲದಲ್ಲಿ

ಒದಗದೆ, ವಿದ್ಯೆಯೂ, ಹಣವೂ, ಅಗಲಾರವೆಂಬಂತೆ, ತಲೆಯಲ್ಲಿ ಸರ್ವದಾ ಉಳಿದ ಜ್ಞಾನವಷ್ಟೇ ಸಮ್ಮತವಾಗಿ ಜೀವನಕ್ಕೆ ಪ್ರಧಾನ ಪ್ರೇರಕವೆಂಬುದನ್ನು ಸನಾತನ ಋಷಿಗಳು ಅನೇಕ ಸಹಸ್ರ ವರ್ಷಗಳ ಹಿಂದೆಯೇ ಕಂಡಿದ್ದರು.

ಜ್ಞಾನದಲ್ಲಿ, ಪರಿಮಾಣಕ್ಕಿಂತ, ಆಂತರಿಕ ಗುಣವೇ ಮುಖ್ಯವೆಂಬುದನ್ನೂ ಮನಗಂಡಿದ್ದರು, ತರ್ಕವೆಂಬುದು ಅನುಭವವನ್ನು ಸ್ವಯಂ ಸೃಷ್ಟಿಮಾಡ ಲಾರದೆಂದೂ ಆದರೆ ಅಪನಂಬಿಕೆಯ ಮುಳ್ಳನ್ನೂ, ಮತ್ತು ಅವಿಚಾರಿತ ಭಾವನೆಗಳನ್ನೂ ನಿವಾರಿಸುವ ಸಾಧನವೆಂದೂ ಬಗೆದಿದ್ದ ಅವರಿಗೆ ಸಂವಾದ, ವಿತ್ತಂಡ, ಜಲ್ಪ, ಆಲಾಪ, ಇತ್ಯಾದಿ ಮಾತನಾಡುವ ಪ್ರಕಾರಗಳ ವರ್ಗೀ ಕರಣ ಸಾಧ್ಯವಾಗಿತ್ತೆಂಬುದನ್ನು ಮರೆಯಬಾರದು. ಸಂಪ್ರದಾಯ ನಿಷ್ಠೆಯೂ, ಚಾರಿತ್ರಕತೆಯನ್ನು ಕಾಯ್ದುಕೊಂಡು ಬರುವುದಷ್ಟೇ ಅಲ್ಲದೆ, ಅನಪೇಕ್ಷಿತ ಗೊಂದಲಗಳನ್ನು ದೂರವಿಡುವ ಒಂದು ಪ್ರಯತ್ನವೂ ಆಗಿದ್ದಿತು. ಸಂಪ್ರ ದಾಯವೆಂದರೆ ಮೂಗು ಮುರಿದು ಅಪಹಾಸ್ಯ ಮಾಡುವ ಅವಿವೇಕಿಗಳು ಈ ನಮ್ಮ ಕಾಲದಲ್ಲೇ ಪ್ರಸಿದ್ಧ ಮನೋವಿಜ್ಞಾನಿಯಾಗಿದ್ದ ಕಾರ್ಲ್‌ಯೂಂಗ್ ಎಂಬ ಮಹಾಶಯನು, ಆಡಿರುವ ಈ ಮಾತುಗಳನ್ನು ಗಮನಿಸಬೇಕು:

"ಆಧುನಿಕತೆಯೆಂಬುದು ಕೇವಲ ಸಮಕಾಲೀನತೆಯಲ್ಲ; ಆಧುನಿಕ ಪ್ರಜ್ಞೆ ಕೇವಲ ಸಾಮಾನ್ಯ ಮನುಷ್ಯನಿಗೆ ಸಾಧ್ಯವಿಲ್ಲ, ಎತ್ತರದ ಶಿಖರದ ಮೇಲೆ ನಿಂತು, ಭವಿಷ್ಯದ ಅಂತರಾಳವನ್ನು ಗಮನಿಸುತ್ತ, ಭೂತ ಕಾಲದ ಮಾನವ ಜನಾಂಗದ ಚರಿತ್ರೆಯನ್ನು ಆಗಾಗ ವೀಕ್ಷಿಸುತ್ತ, ಮುಂದೆ ಹೋಗಲು ಪ್ರಯತ್ನಿಸುವವನೇ ಆಧುನಿಕ ಪ್ರಜ್ಞೆಯುಳ್ಳವನು. ಕೇವಲ ವರ್ತಮಾನ ಕಾಲಕ್ಕೆ ಗಂಟುಬಿದ್ದು, ಭೂತ–ಭವಿಷ್ಯತ್ತುಗಳನ್ನು ಕಡೆಗಣಿಸುವವನು ಪ್ರಜ್ಞಾಶೂನ್ಯನೇ ಹೊರತು ನವಪ್ರಜ್ಞಾಸಂಪನ್ನನಲ್ಲ. ನವಪ್ರಜ್ಞೆಯು ಸುಲಭವಾಗಿ ಬರತಕ್ಕದ್ದೂ ಅಲ್ಲ. ಇದೊಂದು ಸಂಸ್ಕೃತಿಯ ಸೋಗು ಎಂಬುದಾಗಿ ಭಾವಿಸಿಕೊಂಡು ಅನೇಕರು ವರ್ತಿಸುತ್ತಿರುವುದು ಅವರ ಅಜ್ಞಾನಕ್ಕೆ ನಿದರ್ಶನವಾಗಿದೆ. ಹಳೆಯದನ್ನೆಲ್ಲ ಕಿತ್ತು ಹಾಕಿದವನು ಬುಡ

ಮೇಲಾದ ಮಾನುಷ್ಯನಾಗಬಹುದೇ ವಿನಾ ನವಪ್ರಜ್ಞಾಸಂಪನ್ನನಾಗ ಲಾರ. ಭೂತಕಾಲಕ್ಕೆ ದ್ರೋಹ ಬಗೆದ ಮಾತ್ರದಿಂದ ಭವಿಷತ್ತಿಗೆ ಸೇವೆ ಮಾಡಿದಂತೆ ಆಗಲಿಲ್ಲ. ಹೀಗೆ ನಿನ್ನೆ, ಇಂದು, ನಾಳೆಗಳ, ಪರಿಪೂರ್ಣ ಸಮನ್ವಯ ಮನೋಭಾವದ ತಳೆದು ನವಪ್ರಜ್ಞಾಸಂಪನ್ನನಾದ ಮಾನವನನ್ನು ಹಳಬರೆಂದು ವರ್ಣಿಸಲಾಗುವ ಮನುಷ್ಯರಲ್ಲಿ ಕಾಣುವುದು ಹೆಚ್ಚು ಸಂಭವವೇ ಹೊರತು ಹೊಸಬರೆಂದು ತಮ್ಮನ್ನು ತಾವೇ ಕರೆದುಕೊಂಡವರಲ್ಲಿ ಅಲ್ಲ. "

ಈ ದೃಷ್ಟಿಯಿಂದ ನೋಡಿದಾಗ, ಭಾರತೀಯ ಪ್ರಾಚೀನ ಋಷಿಗಳು ಅತ್ಯಂತ ಆಧುನಿಕರು. ವೇದಕ್ಕೆ ಅಂಗಗಳಾಗಿಯೂ ಉಪಬ್ರಂಹ್ಮಣಗಳಾಗಿಯೂ ಇರುವ ಗ್ರಂಥಗಳನ್ನು ನೋಡಿದರೆ ಈ ಪ್ರಜ್ಞೆಯ ದೊಡ್ಡತನದ ಅರಿವಾಗುವುದು. ನಮ್ಮ ಇತಿಹಾಸಗಳು ಪಾಶ್ಚಾತ್ಯ ಇತಿಹಾಸಗಳಂತಾಗದ. ಗತಕಾಲದ ಘಟನೆಗಳಲ್ಲಿ ನಮ್ಮ ಜೀವನಕ್ಕೆ ಬೆಳಕನ್ನು ಚೆಲ್ಲುವ ಜೀವನದ ಆಂತರಿಕ ಗುಣವನ್ನೇ ಪ್ರಧಾನವಾಗಿವುಳ್ಳ ನಡವಳಿಕೆಗಳ ದಾಖಲೆಗಳಾಗದೆ ನಡೆದ ಘಟನೆಗಳಲ್ಲಿ ಆ ಕೇವಲ ಘಟನೆಗಳಿಗಿಂತ, ಅವುಗಳನ್ನು ನೋಡುವ ಕಣ್ಣು ಬಹು ಮುಖ್ಯ. ಪುರಾಣಗಳು ಸಹ ( ಪುರಾ–ನವಂ ಎಂಬ ನಿಷ್ಪತ್ತಿಯಂತೆ) ಅತ್ಯಂತ ಹಳದೂ ಹೊಸದೂ ಏಕಕಾಲಕ್ಕೆ ಆದ ಜೀವನದ ನಿತ್ಯ ಸತ್ಯಗಳನ್ನು ಆದಿ ಹೋದ ಕಥೆಗಳ ಚೌಕಟ್ಟಿನಲ್ಲಿ ಕೊಡುವ ಸುಂದರ ಗ್ರಂಥಗಳು, ಇವುಗಳಲ್ಲಿ ಪ್ರಾಚೀನತೆ ಅರ್ವಾಚೀನತೆಯ ತಾಕಲಾಟಕ್ಕೆ ಅವಕಾಶ ಎಲ್ಲ.

ವೇದಗಳಲ್ಲಿಯೇ ಹಳೆಯದು ಹೊಸದೆಂಬ ದೃಷ್ಟಿ ಭೇದದಿಂದ ಸತ್ಯವು ಬದಲಾಗುವ ಸಾಧ್ಯತೆಯಿಲ್ಲವಾದುದರಿಂದ ಅವುಗಳಲ್ಲಿ ಹಿಂದುಮುಂದಿನ ಭಾಗಗಳೆಂಬ ಕಲ್ಪನೆಗೆ ಅವಕಾಶವೇ ಇಲ್ಲ. ಹೀಗೆ ಭಾರತೀಯ ತತ್ತ್ವಶಾಸ್ತ್ರವು ಇತಿಹಾಸ, ಪುರಾಣಗಳ, ತಿರಸ್ಕಾರದಿಂದ ಹುಟ್ಟಿದ ಶಾಸ್ತ್ರವಾಗುವದರ ಬದಲು, ಅವುಗಳ ಅನ್ಯೋನ್ಯ, ಆಶ್ರಯದಿಂದ ಜೀವಂತವಾಗಿರುವದನ್ನು ಕಾಣಬೇಕು.

ಈಗೀಗ " ಬದಲಾಗುತ್ತಿರುವ ಮೌಲ್ಯಗಳಿಗೆ ಮಾನವರು ಹೊಂದಿಕೊಳ್ಳಬೇಕೆಂಬ" ಹೊಸಕೂಗು ಕೇಳಿ ಬರುತ್ತಿದೆ. " ಹಾಗೆಂದರೇನು ? "

ಎಂದು ವಿಚಾರಪರರು ಕೇಳಿಕೊಂಡಾಗ ಇದರ ಹಿಂದೆ ಇರುವ ಅವಿವೇಕದ ಪ್ರಮಾಣದ ಅರಿವಾಗುವುದು ಜೀವನದಲ್ಲಿ, ಕಾಲಕಾಲಕ್ಕೆ ಬದಲಾಗುತ್ತಿರುವ ಒಂದಂಶವೂ, ಎಂದೆಂದೂ ಶಾಶ್ವತಸ್ವರೂಪವುಳ್ಳ ಇನ್ನೊಂದಂಶವೂ ಇವೆ. ( ಇವುಗಳಲ್ಲಿ ಯಾವುದೊಂದನ್ನು ಅಲ್ಲಗಳೆದರೂ ದೃಷ್ಟಿ ಕುರುಡಾಗುವುದು. ) ಉದಾಹರಣೆಗೆ, ಕಾಲಕಾಲಕ್ಕೆ ಉಡಿಗೆಗಳ ವಿಚಿತ್ರ ಮಾದರಿಗಳೂ, ಒಟ್ಟಿಗೆಗಳವೈವಿಧ್ಯತೆಯೂ ಬರುವುದುಂಟು. ಆದರೆ "ಬಟ್ಟೆಯಿಂದ ಮೈಮುಚ್ಚಿಕೊಳ್ಳುವುದು ಮಾನ-ಮರ್ಯಾದೆಯ ಲಕ್ಷಣ" ಎಂಬುದು ಬದಲಾಗದ ಮೌಲ್ಯ. ಇದು ಬದಲಾದರೆ ಹುಚ್ಚುತನಕ್ಕೆ ಪಟ್ಟಕಟ್ಟಿದಂತಾಗುವುದು, ಮನುಷ್ಯ ಜೀವನವೇ ಅಶಾಶ್ವತ ಹೌದು, ಆದರೆ ಮಾನವ ಜನಾಂಗ ವೆಂಬುದು ಇರುವ ತನಕ, ಶಾಂತಿ, ಸ್ನೇಹ, ದಯೆ, ಜ್ಞಾನ, ತ್ಯಾಗ, ಕ್ಷಮೆ, ಸೌಹಾರ್ದತೆ, ಸೌಂದರ್ಯಪ್ರಜ್ಞೆ, ಮೊದಲಾದ ಮಹಾ ಮೌಲ್ಯಗಳು ಬದಲಾಗುವಂತಿಲ್ಲ; ಇವೂ ಬದಲಾಗಬೇಕೆಂದೂ, ಬದಲಾದ ಮೌಲ್ಯಗಳಿಗೆ ಹೊಂದಿಕೊಳ್ಳಬೇಕೆಂದೂ ವಾದಿಸುವವರು ಪ್ರಾಯಶಃ ಮಾನವರಲ್ಲ ! ಉದಾಹರಣೆಗೆ : ಸತಿ-ಪತಿಯರು ಒಬ್ಬರನ್ನೊಬ್ಬರು ವಂಚಿಸದೆ, ಅನ್ಯೋನ್ಯ ಪ್ರೀತಿಯಿಂದ ಬಾಳಿ ಸತ್ಪ್ರಜಾವೃದ್ಧಿಗೆ ಕಾರಣರಾಗಬೇಕೆಂದೂ, ಇಂತಹ ಶಾಂತ, ಆನಂದಮಯ ಕುಟುಂಬಗಳ ವೃದ್ಧಿಯಿಂದ ಮಾತ್ರ ಸಾಮಾಜಿಕ ಸುಖ. ಸಾಧ್ಯವೆಂಬುದೂ ಮಹಾಮೌಲ್ಯ: ವೇದ ಎತ್ತಿ ಹಿಡಿದಿರುವ ಮೌಲ್ಯಗಳಲ್ಲಿ ಒಂದು. ಇದು ಬದಲಾಗಿ, ಇಂದಿನ ಸಂಬಳ ಸಾಲದ ಒಬ್ಬ ಯುವಕನು (ಅಥವಾ ಇಂಥ ಅನೇಕರು), ತಾನು ಬದುಕಿರುವ ತನಕ ಒಬ್ಬಳಿಗೇ ಗಂಟುಬಿದ್ದು, ಅವಳನ್ನು ಪೋಷಿಸುವದಾಗಲೀ. ಅಥವಾ ಮಕ್ಕಳನ್ನು ಕಾಪಾಡುವದಾಗಲೀ ಸಾಧ್ಯವಿಲ್ಲವೆಂದೂ, ಇಂತವರ ಸಂಖ್ಯೆ ಹೆಚ್ಚಿದಂತೆ, ಇವರಿಗೆ ಕನಿಕರ ತೋರಿಸುವವರ ಸಂಖ್ಯೆಯೂ ಬೆಳೆದು, ಇವರ "ಸೌಕರ್ಯಾರ್ಥ", ಲೈಂಗಿಕಪ್ರಚೋದನೆಯನ್ನು ತೀರಿಸಿಕೊಳ್ಳಲು ಉಚಿತ ಕೇಂದ್ರಗಳು, ಅಥವಾ ಸ್ತ್ರೀಯರಿಗೆ ಕೃತಕಗರ್ಭ ಕೇಂದ್ರಗಳು ಸಾಮಾಜಿಕವಾಗಿ ಏರ್ಪಟ್ಟು ಈ ಹೊಸ ಮೌಲ್ಯವನ್ನು ಸಮಾಜ ಒಪ್ಪಿದರೆ, ಮಾನವ ಜನಾಂಗ, ತಾನೇ ಆತ್ಮಹತ್ಯೆ ಮಾಡಿಕೊಂಡಂತೆ. ಅಥವಾ ಇಂದಿನ ಹಾಹಾಕಾರ ಪರಿಸ್ಥಿತಿಯಲ್ಲಿ "ತ್ಯಾಗ"ವನ್ನು ಬಾಹಿರವೆಂದು ಘೋಷಿಸಿ "ಸ್ವಾರ್ಥತೆ"ಯನ್ನು ಅಲ್ಲಿ

ಸ್ಥಾಪಿಸಿದರೆ ಈ ಬದಲಾದ "ಮೌಲ್ಯವು" ಮಾನವೀಯತೆಯನ್ನೇ ಅಳಿಸಿ ಹಾಕುವುದರಲ್ಲಿ ಸಂದೇಹವಿದೆಯೇ ? ಹಾಗೆಯೇ "ಸತ್ಯ" ವನ್ನು ಪ್ರಚಾರ ಸಾಧನದಿಂದ "ಅಸತ್ಯ" ವನ್ನಾಗಿಯೋ "ನ್ಯಾಯ" ವನ್ನು "ಅನ್ಯಾಯ" ವನ್ನಾಗಿಯೋ ಬದಲಾಯಿಸಲು ಸಾಧ್ಯವಿಲ್ಲ.

ಈ "ಮೌಲ್ಯಗಳ ಬದಲಾವಣೆ" ಯ ವಿಚಾರ, ಕಮ್ಯೂನಿಸ್ಟ್ ಮತ್ತು (ಅಮೇರಿಕಾದ) ಪ್ರಾಗ್ಮ್ಯಾಟಿಸ್ಟ್ -ಎಂಬ ಅಪಸಿದ್ಧಾಂತಗಳ ಪ್ರಭಾವ ದಿಂದ ಭರತಭೂಮಿಯ ಮೇಲೆಯೂ ಗಾಳಿಬೀಸುತ್ತಿದೆ. ನಮ್ಮ ಹೊಸ ಜನಾಂಗವನ್ನು, ಸುವಿಚಾರಧಾರೆಯ ಬಲದಿಂದ ಈ ದುಷ್ಟ ವಿಚಾರಗಳಿಂದ ರಕ್ಷಿಸುವದು ನಮ್ಮ ಕರ್ತವ್ಯ. ಪ್ರಗತಿಯೆಂದರೆ ಅತೃಪ್ತಿಸಂವರ್ಧನೆಯೆಂದೂ ತೃಪ್ತರಾಗಿರುವುದು ಪ್ರಗತಿ ವಿರೋಧಿ. ಪ್ರತಿಗಾಮಿಗಳ ಪಟ್ಟಭದ್ರ ಹಿತಾ ಸಕ್ತಿಗಳ, ಲಕ್ಷಣವೆಂದೂ ಈಗಿನ ಅನೇಕರ ವಾದ. ಹಿಂದೆ ನಮ್ಮ ದೇಶದಲ್ಲಿ ಹುಚ್ಚಾಸ್ಪತ್ರೆಗಳ ಸಂಖ್ಯೆಯಾಗಲೀ, ಜೈಲುಗಳ ಸಂಖ್ಯೆಯಾಗಲೀ, ಅನಾಥಾಲ ಯಗಳ ಸಂಖ್ಯೆಯಾಗಲೀ ಬಹಳ ಇರಲಿಲ್ಲ. ಇದು "ಹಿಂದುಳಿದ" ಲಕ್ಷಣ ವೆಂದು ಬಗೆದು ಇವುಗಳ ಸಂಖ್ಯೆಯನ್ನು ಹೆಚ್ಚಿಸುವಂತೆ ಮಾಡುತ್ತಿರುವುದು "ಪ್ರಗತಿ" ಯ ಶ್ರೇಷ್ಠ ಉದಾಹರಣೆ ! "ಪ್ರಗತಿ" ಹೊಂದಿದ ಅಮೇರಿಕೆ ಯಲ್ಲಿ ವರ್ಷವರ್ಷಕ್ಕೆ ಅಪರಾಧಿಗಳ ಸಂಖ್ಯೆಯೂ ಹೆಚ್ಚುತ್ತಿರುವದು ಅಂಕಿ ಅಂಶಗಳಿಂದ ತಿಳಿಯುವುದು. ಪ್ರತಿಹತ್ತು ಮನೋರೋಗವೈದ್ಯರಲ್ಲಿ ಒಬ್ಬರು ಸ್ವಯಂ ಹುಚ್ಚರೆಂದ ಮೇಲೆ "ಪ್ರಗತಿ" ಯ ಶಿಖರವನ್ನೇ ಅವರು ಮುಟ್ಟಿ ದ್ದಾರೆ ! ಶಿಥಿಲವಾಗಿರುವ ಕೌಟುಂಬಿಕ ನೀತಿನಿಯಮಗಳು. ಸಡಿಲವಾಗಿರುವ ಲೈಂಗಿಕ ಜೀವನದ ರೀತಿನೀತಿಗಳು, ಸ್ವಾತಂತ್ರ್ಯದ ತಪ್ಪುಕಲ್ಪನೆ, ಉಳಿದೆಲ್ಲ ಕ್ಕಿಂತಲೂ ಹಣದ ಅನವರತ ಆರಾಧನೆ ಇವುಗಳೂ ಇತರ ಸ್ಥಿತಿಗಳೂ ಚಿಕ್ಕವ ರನ್ನು "ಹಿಪ್ಪಿ" ಗಳನ್ನಾಗಿಯೂ ದೊಡ್ಡವರನ್ನು "ಹುಚ್ಚ" ರನ್ನಾಗಿಯೂ ಮಾಡುತ್ತಿರುವುದನ್ನು ಕಂಡು ಇದು ನಮ್ಮಲ್ಲಿ ಸಾಕಷ್ಟು ಪ್ರಮಾಣದಲ್ಲಿ ಇನ್ನೂ ಆಗಿಲ್ಲವೆಂದು ಅಸೂಯೆಯಿಂದ ಹೊಟ್ಟೆಉರಿ ಪಡುವ "ಪ್ರಗತಿ" ಶೀಲರು ಇದ್ದಾರೆಂದಮೇಲೆ ನಮ್ಮ ಭಾಗ್ಯವನ್ನು ಕೇಳಬೇಕೇ ? "ಶಾಂತಿ" ಎಂಬುದು ಹಳೆಯ ಕಾಲದ ಮಾತು ಎಂದು ನಿಷ್ಕರ್ಷಿಸಿ "ಹಿಂಸೆ" ಎಂಬ ಹೊಸಮೌಲ್ಯ

ಅಲ್ಲಿ ಸ್ಥಾಪಿತವಾಗಿದೆ. ಇದು " ಪ್ರಗತಿ " ! " ದೇವರು" ಹಳೆಯಮೌಲ್ಯ ! " ಫ್ಯಾಕ್ಟರಿಗಳು ", " ಯಂತ್ರಗಳು" ಹೊಸಮೌಲ್ಯಗಳು. ಸ್ವಾತಂತ್ರ್ಯವೇ ಹಳೆಯಮೌಲ್ಯವೆಂದೂ, " ಗುಲಾಮಗಿರಿ " ಯೇ ಪ್ರಗತಿಯ ಲಕ್ಷಣವೆಂದೂ ಈಚಿನ ಮೌಲ್ಯ.

ಹೀಗೆ " ಬದಲಾಗುತ್ತಿರುವ ಮೌಲ್ಯ " ಗಳು ಮಾನವನನ್ನು ಎಲ್ಲಿ ಒಯ್ಯುತ್ತಿವೆಯೆಂದು ನೋಡಬಹುದು. ಇದು ಮನದಟ್ಟಾದರೆ ವೇದಗಳಲ್ಲಿ ಪ್ರತಿಪಾದಿತವಾದ ಮೌಲ್ಯಗಳನ್ನು ಬದಲುಮಾಡುವುದೆಂದರೇನೆಂದು ಅರಿವಾಗುವುದು. ಆಗ ಮೌಲ್ಯಗಳಲ್ಲಿ ಹಳೆಯ-ಹೊಸವೆಂಬುದಕ್ಕೆ ಅರ್ಥವಿಲ್ಲವೆಂದು ತಿಳಿಯುವುದು. ವೇದಗಳಿಗಿಂತಲೂ " ನವಪ್ರಜ್ಞೆ " ಯುಳ್ಳ ಗ್ರಂಥಗಳು ಇರುವುದು ಸಾಧ್ಯವಿಲ್ಲವೆಂದೂ ಖಚಿತವಾಗುವುದು, ಈ ವೇದಗಳ ಕಾಲ ಯಾವುದಾದರೇನು ? ಸಾರ್ವಕಾಲಿಕ ಮೌಲ್ಯಗಳನ್ನು ಎತ್ತಿಹಿಡಿದಿರುವದರಿಂದ ಎಲ್ಲಕಾಲಗಳಲ್ಲಿಯೂ ಅವು ನಿತ್ಯ ನೂತನವೇ.

ಇಷ್ಟರಮೇಲೆ ವೇದಗಳ ಐತಿಹಾಸಿಕತೆಗೆ ಅಸಮರ್ಪಕವಾದ ಆಧಾರಗಳಿಂದ ನಮ್ಮ ತತ್ತ್ವ ಶಾಸ್ತ್ರದ ಬಗೆಗೇ ಅನೇಕ ತಪ್ಪು ಕಲ್ಪನೆಗಳಾಗಿರುವುದನ್ನು ನೋಡೋಣ. ಕೇವಲ ಭಾಷೆಗಳ ತುಲನಾತ್ಮಕ ವಿಕಾಸ ವಿವೇಚನೆಯಿಂದ ಇಂಡೋ-ಐರೋಪ್ಯರೆಂದು ಕರೆಯಲಾದ, ಭಾರತಕ್ಕೆ ಹೊರಗಿನವರೆಂದು ಭಾವಿಸಲಾದ ಒಂದಾನೊಂದು "ಆರ್ಯ " ಜನಾಂಗದ ಕಲ್ಪನೆ ಈ ತಪ್ಪುಗಳಿಗೆಲ್ಲ ಅಡಿಗಲ್ಲಾಗಿದೆ. " ಇದಮಿತ್ಥಂ" ಎಂದು ತೀರ್ಮಾನಿಸಲಾಗದ ಕೇವಲ ಊಹೆಗಳಿಂದ ಪ್ರಮುಖ ತೀರ್ಮಾನಗಳಿಗೆ ಬರುವುದು ಸಾಧುವೇ ಎಂಬುದನ್ನು ಅನೇಕರು ಪರಿಗಣಿಸಿದಂತಿಲ್ಲ. ಮಹಾಘಟನೆಗಳನ್ನೆಲ್ಲ ಮರೆಯದೆ ನಮ್ಮ ಜ್ಞಾನ ರಾಶಿಯಲ್ಲಿ, ಸ್ಮೃತಿ ಪಥದಲ್ಲಿ ಉಳಿಯಲು ವಿಶೇಷ ಪರಿಶ್ರಮಿಸಿದ ನಮ್ಮ ಪೂರ್ವಿಕರು, "ಆರ್ಯ" ರಾದ ತಾವು ಹೊರಗಿಂದ ಬಂದದ್ದು ಆಗಿದ್ದರೆ ಈ ವಿಷಯವನ್ನು ಎಲ್ಲೂ ಸ್ಪಷ್ಟವಾಗಿ ತಿಳಿಸದೆಯೇ ಮರೆಮಾಚಿಟ್ಟರೇಕೆ ? "ಸಪ್ತ ಸಿಂಧು "ಎಂದು ವರ್ಣಿಸಲಾಗಿರುವ ಭಾರತದ ವಾಯುವ್ಯ ಪ್ರಾಂತವೇ ಎಂದಿನಿಂದಲೂ ಈ " ಆರ್ಯರ " ವಾಸಸ್ಥಾನವಾಗಿತ್ತೆಂದು ಪ್ರಮಾಣ

ಬದ್ಧವಾಗಿ ವಾದಿಸಿ ಬರೆದಿರುವ ನಮ್ಮ ಅನೇಕ ವಿದ್ವಾಂಸರ ಮತ್ತ
ಅಭಿಮತವಲ್ಲ ? ಈ ವಿಷಯವನ್ನು ವಾದಸರಣಿಯ ತರ್ಕ ಪದ್ಧತಿಯಿ
ತೀರ್ಮಾನಿಸಬೇಕೋ ಅಥವಾ "ವಾದಿ " ಗಳ ಸಂಖ್ಯಾಬಲದಿಂದ ನಿರ್ಣಯಿ
ಬೇಕೋ ? ಹೇಗಾದರೂ, ಇನ್ನೂ ನಿರ್ಣಯವಾಗದ ಈ ವಿಷಯದ
" ಆರ್ಯರು ಹೊರಗಿನಿಂದ ಬಂದವರು " ಎಂದೇ ನಮ್ಮ ಶಾಲೆಯ ಮಕ್ಕ
ಪ್ರಾರಂಭಾವಸ್ಥೆಯಲ್ಲೇ "ಹಸಿಯಸುಳ್ಳನ್ನು" ಕಲಿಸುವುದರ ಸಾಧಕಬಾಧ
ಗಳನ್ನೂ ಯಾರೂ ಗಮನಿಸಿದಂತಿಲ್ಲ.

ಇನ್ನು ವೇದಗಳ ಕಾಲದ ವಿಷಯದಲ್ಲೂ ತಪ್ಪು ಕಲ್ಪನೆಗಳು ಹೇಗಿ
ನೋಡೋಣ. ಮಾನವ ಜನಾಂಗದ ಇತಿಹಾಸದಲ್ಲಿಯೇ ವೇದಗಳು ಅತ್ಯ
ಪ್ರಾಚೀನ ಸಾಹಿತ್ಯ ರಾಶಿಯೆಂದು ಒಪ್ಪಿಕೊಳ್ಳಲೇಬೇಕಾಗಿ ಬಂದಿರುವ ಈ
ಪರಿಸ್ಥಿತಿಯಲ್ಲೂ ಮ್ಯಾಕ್ಸಮ್ಯುಲರ್ ಮಹಾಶಯನು ಕ್ರಿ. ಪೂ ೧೨೦೦
ವರ್ಷಗಳಿಗೆ ಹಿಂದಿನದಾಗಿರಲಾರದೆಂದೂ, ಹಾಗ್ ಎಂಬವನು ೨೪೦೦ ವರ್ಷ
ಹಿಂದಿನದೆಂದೂ ಲೋಕಮಾನ್ಯ ತಿಲಕರು ೪೦೦೦ ವರ್ಷಕ್ಕಿಂತ ಹಿಂದೆ ಇ
ಬೇಕೆಂದೂ, ಡಾ|| ಎಸ್. ಶ್ರೀಕಂಠಶಾಸ್ತ್ರಿಗಳು ೧೦೦೦೦ ವರ್ಷ ಹಿಂದಿ
ದೆಂದೂ, ಡಾ|| ಸಂಪೂರ್ಣಾನಂದರು ೩೫೦೦೦ ವರ್ಷಗಳಷ್ಟಾದರೂ ಹಿಂದಿ
ದೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಜಗತ್ತಿನ ಸೃಷ್ಟಿಯೇ ಕ್ರಿ. ಪೂ. ೪೦೦೪
ವರ್ಷಗಳು ಹಿಂದೆ ನಡೆದದ್ದೆಂದು ಹಠವಾದಿತನ ಹಿಡಿದಿರುವ ಕ್ರೈಸ್ತ
ಯಹೂದ್ಯರ ದೃಷ್ಟಿಯಲ್ಲಿ ವೇದಗಳಿಗೆ ಪ್ರಾಚೀನತೆ ಇರಬಾರದೆಂಬ ಆಶಯ
ವಿಕ ಇದೆಯೆಂದು ತಿಳಿಯುವುದು ಕಷ್ಟವಲ್ಲ, "ದ್ರಾವಿಡ " ರೆಂದು ಭಾವಿ
ಲಾದ ಹರಪ್ಪ ಜನಾಂಗದ ಸಂಸ್ಕೃತಿಯೇ ಕ್ರಿ. ಪೂ. ೩೦೦೦ ವರ್ಷಗಳಷ್ಟಾ
ದರೂ ಹಳೆಯದಾಗಿರಬೇಕೆಂದು ಒಪ್ಪುವ ಈ ಕಾಲದಲ್ಲಿ ವೇದಗಳ ಪ್ರಾಚೀನ
ತೆಗೆ ದುರುದ್ದೇಶದ ಮಿತಿಗಳನ್ನು ಹೇರಲು ಹೊರಡುವುದು ಅನಾಗರೀಕತೆಯ
ಲಕ್ಷಣವೆಂದೇ ಹೇಳಬೇಕು.

ಹೀಗೆ ಕಾಲವೇ ನಿರ್ಣಯವಾಗದ ಗ್ರಂಥದ ವಿಚಾರ ಧಾರೆಯನ್ನು
"ಅದೇಕಾಲ"ದ್ದೆಂದು ಭಾವಿಸಲಾದ ಗ್ರೀಸ್, ಪರ್ಷಿಯಾ, ಇಜಿಪ್ತ ದೇಶಗಳ

ಪ್ರಾಚೀನ ಚಾರಿತ್ರಿಕ, ಸಾಂಸ್ಕೃತಿಕ ವಿಚಾರ ಧಾರೆಗಳೊಡನೆ "ಹೋಲಿಸಿ" ಇವರ ವಿಚಾರವನ್ನು ವೇದದ ಮೇಲೆ ಬಲಾತ್ಕಾರವಾಗಿ ಹೇರಲು ಪ್ರಯತ್ನಿಸುವುದು ಹೇಗೆ '' ವೈಜ್ಞಾನಿಕ " ಪದ್ಧತಿಯ ಸಂಶೋಧನೆಯೋ ತಿಳಿಯದು. ಅತ್ಯಂತ ಪ್ರಾಚೀನ ಕಾಲದ ಚಾರಿತ್ರಿಕ, ಭೌಗೋಲಿಕ ಸಂಗತಿಗಳು ಸ್ಪಷ್ಟವಾಗಿ, ನಿರ್ವಿವಾದವಾಗಿ ಸ್ಥಾಪಿಸಲ್ಪಟ್ಟ ಹೊರತು ಈ ಗೊಂದಲಗಳೇ ಸಂಶೋಧನೆ ಗಳೆಂದೆನಿಸಿ ಅನರ್ಥ ಪರಂಪರೆಯಾಗುವ ಸಂಭವವಿದೆ.

ಋಗ್ವೇದದ ಹತ್ತನೇ ಮಂಡಲದ ೧೩೬ ನೇ ಸೂಕ್ತದಲ್ಲಿ ಪೂರ್ವ ಪಶ್ಚಿಮ ಸಮುದ್ರಗಳ ಬಗೆಗೆ ಉಲ್ಲೇಖವಿದೆ. ಸಪ್ತ ಸಿಂಧುವಿಗೆ "ಪಶ್ಚಿಮ" ದಲ್ಲೂ " ಪೂರ್ವ" ದಲ್ಲೂ ಸಮುದ್ರವಿದ್ದದ್ದು ಕನಿಷ್ಠ ಪಕ್ಷ ೧೫೦೦೦ ವರ್ಷ ಗಳಿಗಿಂತಾದರೂ ಹಿಂದೆ ಎಂದು ಭೂಗರ್ಭಶಾಸ್ತ್ರಜ್ಞರ ಅಭಿಪ್ರಾಯ. ಇಂತಹ ಅನೇಕ ಉಪಯುಕ್ತ ವಿಷಯಗಳ ಸ್ಪಷ್ಟ ತಿಳುವಳಿಕೆ ಇಲ್ಲದೆ ಇಂದಿನ ಭಾರತ ವನ್ನು ಮುಂದಿಟ್ಟು ಇಂದಿನ ನಮ್ಮ ಅಸೂಯಾಮೂಲವಾದ ರಾಜಕೀಯ ಪ್ರಜ್ಞೆಯನ್ನೇ ಆಧರಿಸಿ ತಲೆಗೆ ತೋರಿದುದನ್ನೇ ಸತ್ಯವೆಂದು ಬಗೆದರೆ ಇದರಿಂದ ಯಾರಿಗೆ ಉಪಕಾರ ? ನಮಗೆ ತಿಳಿದ ಚರಿತ್ರೆಯಲ್ಲೇ ಒಂದು ದೇಶದ "ಒಳಗು" "ಹೊರಗು"ಗಳು ಬದಲಾಗುತ್ತಿರುವಾಗ ಅನಾದಿಕಾಲದ ಬಗೆಗೆ ಇದೇ ಒಳಗು ಇದೇ ಹೊರಗೆಂದು ಹೇಳುವುದು ಹೇಗೆ ? ಉದಾಹರಣೆಗೆ ನಮ್ಮ ಪೂರ್ವಿಕರ "ಸಪ್ತಸಿಂಧು"ವಿನ ಕೆಲ ಭಾಗಗಳು ಈಗಿನ ಪಾಕಿಸ್ಥಾನದಲ್ಲಿವೆ. ಆದುದರಿಂದ ಅವರು ಆಗಲೂ ಮುಸ್ಲಿಮರಾಗಿದ್ದ ರೆಂದೋ, ಈಗಿನ ಭಾರತಕ್ಕೆ ಅವರು ಎಂದೂ ಹೊರಗಿನವರೆಂದೋ ಹೇಳಿದರೆ ಹಾಸ್ಯಾಸ್ಪದವಾಗುವದಿಲ್ಲವೇ ?

ಆದುದರಿಂದ ನಿರ್ಧರಿಸಲಾಗದ ಪ್ರಶ್ನೆಗಳನ್ನು ಬಿಟ್ಟುಕೊಟ್ಟು ವೇದ ಗಳು ಏನನ್ನು ಉಪದೇಶಿಸುತ್ತವೆಯೋ ಆ ಅನರ್ಘ್ಯ ಸಂದೇಶಗಳನ್ನು ನಮ್ಮ ಇಂದಿನ ಜೀವನಕ್ಕೆ ಹೊಂದಿಸಿಕೊಂಡು ಕೃತಾರ್ಥರಾಗುವುದೇ ವಿವೇಕಿಗಳ ಮಾರ್ಗವಾಗುವುದು. ಸರ್ವಕಾಲಾತೀತವಾದ, ಸಾರ್ವಕಾಲಿಕವಾದ, ಯಾವ ಯಾವ ಮಹಾಮೌಲ್ಯಗಳು ವೇದದಲ್ಲಿವೆಯೆಂಬುದನ್ನು ನಿಷ್ಕರ್ಷಿಸಿಕೊಳ್ಳು ವುದೇ ವೇದಾರ್ಥಪ್ರಯತ್ನದ ಮುಖ್ಯ ಗುರಿಯಾಗಬೇಕು. ಮೇಲೆ ಹೇಳಿದಂತೆ,

ವೇದದಲ್ಲಿ "ಪ್ರಾಚೀನ ಭಾಗ" "ಅರ್ವಾಚೀನ ಭಾಗ" ಎಂಬ ಕೃತಕ ವಿಭಾ
ಗಳಿಗೆ ಈ ದೃಷ್ಟಿಯಿಂದ ಅರ್ಥವೇ ಇಲ್ಲ. ಇವೂ ಪಾಶ್ಚಾತ್ಯರ "ಕಾಣಿ
ಗಳೇ ! ಮೊದಲು ಋಗ್ವೇದವು ಬಂದಿತೆಂದೂ, ನಂತರ ಯಜುಸ್ಸು ಸಾ
ಅಥರ್ವಗಳು ಕ್ರಮವಾಗಿ ಬಂದವೆಂದೂ ಹೇಳುವುದು ಹಾಸ್ಯಾಸ್ಪ
ಏಕೆಂದರೆ ವೇದದ ಮುಖ್ಯ ಪ್ರಯೋಜನ "ಯಜ್ಞ"ವರ್ಧನೆ. "ಯಜ್ಞ"ವು
ಅನಾದಿಯಾದ ವೈದಿಕ ಸಂಸ್ಥೆ. ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ
ಎಂಬ ನಾಲ್ವರೂ ಕೂಡಿಯೇ ನಡೆಸಬೇಕಾದದ್ದು. ಯಜ್ಞಕ್ಕೆ ಬರತಕ್ಕ ದೇವ
ಗಳನ್ನು ಸ್ತೋತ್ರದಿಂದ ಆಹ್ವಾನಿಸುವುದು ಹೋತೃವಿನ ಕೆಲಸ. ಇವ
ಭಾಗದ ಸ್ತೋತ್ರಗಳಿಗೆ ಋಕ್ ಗಳೆಂದು ಹೆಸರು. ಉದ್ಗಾತೃವು ಆ
ಋಕ್ಕ್‌ಗಳನ್ನು ಗಾನರೂಪದಿಂದ ಹಾಡಿ ತೋರಿಸಿದಾಗ "ಸಾಮ"ಗಳೆನಿಸಿದವು.
ಇದೂ ಯಜ್ಞದ ಮುಖ್ಯಾಂಗವೇ. ಹೀಗೆ ಇಳಿದು ಬಂದ ದೇವತೆಗಳನ್ನು
ಕ್ರಿಯಾರೂಪದಿಂದ ಅರ್ಚಿಸಿ ಆರಾಧಿಸುವವನೇ ಅಧ್ವರ್ಯು. ಇವನ ಭಾಗ
ಕೆಲಸವೇ ಪ್ರಧಾನ ಯಜ್ಞ. ಹೀಗೆ ಎಲ್ಲವೂ ಸಮರ್ಪಕವಾಗಿ ವೇದೋಕ್ತ
ವಾಗಿ ನಡೆಯುತ್ತಿರುವುದೇ ಎಂದು ನಿರೀಕ್ಷಿಸುತ್ತಿರುವವನೇ ಬ್ರಹ್ಮ. ಈ
ನಾಲ್ವರೂ ಅನ್ವಯಿಸದೇ ಯಜ್ಞ ನಡೆಯುವಂತಿಲ್ಲ. ಇದು ಭಾರತೀಯರಿಗೆಲ್ಲ
ಗೊತ್ತು (ಋ, ಸಂ. X-71-11, ರಲ್ಲಿ ಇದು ಸ್ಪಷ್ಟವಾಗಿದೆ.)

ಹೀಗಿರುವಲ್ಲಿ " ಋಗ್ವೇದವು ಮೊದಲುಬಂದಿತೆಂ" ದರೆ " ಹೋತೃ"
ಒಬ್ಬನೇ ಅಧ್ವರ್ಯು ಉದ್ಗಾತೃಗಳಿಲ್ಲದೆ ಸಹಸ್ರಾರು ವರ್ಷಗಳವರೆಗೆ ಯಜ್ಞ
ನಡೆಸುತ್ತಿದ್ದನೆಂದಾಗಲೀ, ಉಳಿದವರು ತಾವು ತಾವೇ ಇಷ್ಟ ಬಂದಂತೆ ಯಜ್ಞ
ಮಾಡುತ್ತಿದ್ದರೆಂದಾಗಲೀ ಅಂದ ಹಾಗಾಗುತ್ತದೆ. ಇದು ಹಾಸ್ಯಾಸ್ಪದವಾದುದ
ರಿಂದ ಯಥಾರ್ಥಗಳನ್ನು ಗ್ರಹಿಸಬೇಕಾಗಿದೆ. ಭಗವಾನ್ ವ್ಯಾಸರವರೆಗೆ ಈ
ವೇದಸಾಹಿತ್ಯವು ಮಿಶ್ರಿತವಾಗಿಯೇ ಇದ್ದು ಅಧಿಕಾರವ್ಯಾಪ್ತಿ ಹಂಚಲ್ಪಡದೆ
ಇದ್ದಿತು. ಸೌಕರ್ಯಾರ್ಥವಾಗಿ ವ್ಯಾಸರು ಋಗ್ ಯಜುಸ್ ಸಾಮಗಳನ್ನು
ವಿಭಜಿಸಿ, ವೇದಶಾಖೆಗಳನ್ನು ಏರ್ಪಡಿಸಿ, ಆ ಆ ಶಾಖೆಗಳವರು ತಂತಮ್ಮ
ಭಾಗದ ವೇದಗಳನ್ನೋ, ವೇದಗಳ ಶಾಖಾ ಮಾತ್ರಗಳನ್ನೋ ಮೊದಲು ಕಲಿ
ಗತ ಮಾಡಿಕೊಂಡ ಹೊರತು ಇತರ ವೇದ ಶಾಖೆಗಳಿಗೆ ಪ್ರವೇಶಿಸಕೂಡದೆಂ

ನಿಯಮವನ್ನು ಏರ್ಪಡಿಸಿದರು, ಬರವಣಿಗೆಯಲ್ಲಿ ಇನ್ನೂ ಬಾರದ ಅನ್ವರ್ಥವಾಗಿದ್ದ "ಶ್ರುತಿ" ಯನ್ನು ಉಳಿಸಲು ವ್ಯಾಸರು ಮಾಡಿದ ಅಮೋಘ ಏರ್ಪಾಡು ಇದು. ಹೀಗೆ ತಮ್ಮ "ಸ್ವ" ಶಾಖೆಯನ್ನೋ, ವೇದವನ್ನೋ, ಕಂಠಪಾಠ ಮಾಡಿದ ಮಹನೀಯರು ಉಳಿದ ವೇದಗಳನ್ನೂ ಅಭ್ಯಸಿಸಿ ದ್ವಿವೇದಿ, ತ್ರಿವೇದಿ, ಚತುರ್ವೇದಿಗಳಾದದ್ದು ಹಿಂದೆಯೂ ಉಂಟು. ಈಗಲೂ ಅಲ್ಲಲ್ಲಿ ಹೆಸರಿನಲ್ಲಾದರೂ ಕಾಣುವುದುಂಟು. ಭಗವಂತನ ಅರ್ಚೆಯಲ್ಲಿ ಈಗಲೂ ಮನೆಗಳಲ್ಲೂ ದೇವಾಲಯಗಳಲ್ಲೂ ನಾಲ್ಕು ವೇದಗಳಿಂದ ಆಯ್ದ "ಕುಸುಮ" ಗಳನ್ನು "ಮಂತ್ರ ಪುಷ್ಪ" ಗಳೆಂದು ಸಮರ್ಪಿಸುವುದು ಎಲ್ಲರಿಗೂ ತಿಳಿದಿದೆ. ಹೀಗೆ ಎಲ್ಲವೇದಗಳೂ ಒಂದೇಕಾಲಕ್ಕೆ ಇದ್ದವೇ ವಿನಾ ಒಂದಾದಮೇಲೊಂದು ಬಂದವಲ್ಲ.

ಆದರೆ ಈಗಿರುವ ಎಲ್ಲ ಸೂಕ್ತಗಳೂ, ಮಂತ್ರಗಳೂ, ಅನುವಾಕಗಳೂ ಸಾಮಗಳೂ ಹಾಗೇ ಇದ್ದುವೇ ? ಎಂದು ಕೇಳಬಹುದು. ಅಥವಾ ಹಿಂದೆ ಇದ್ದುದೆಲ್ಲ ಈಗಲೂ ಇದೆಯೇ ? ಎಂದು ಕೇಳಿದರೆ ಹೀಗೆ ಪರಿಹಾರವಿದೆ. ಪುರುಷಸೂಕ್ತಾದಿಗಳಲ್ಲಿ ಸ್ಪಷ್ಟಪಡುವಂತೆ ಯಜ್ಞೋಪಯುಕ್ತವಾದ ಋಗ್ಯಜುಸ್ಸಾಮಗಳು ಈ ಪ್ರಮಾಣದಲ್ಲಿಲ್ಲದಿದ್ದರೂ, ಯಾವುದೇ ಅಲ್ಪ ಪ್ರಮಾಣದಲ್ಲಿ ಆದರೂ ಒಟ್ಟಿಗೇ ಇದ್ದಿರಬೇಕು. ಕನಿಷ್ಠ ಪಕ್ಷ, ಒಂದು ಋಕ್ಕಿಗೆ, ಒಂದು ಯಜುಸ್ಸೂ, ಒಂದು ಸಾಮವೂ ಇದ್ದ ಹೊರತು ಯಜ್ಞವಾಗುವಂತಿರಲಿಲ್ಲ. ಯಜ್ಞಕ್ಕಲ್ಲದೆ ಅವು ಇರುವಂತೆಯೂ ಇರಲಿಲ್ಲ ! ಋಕ್ಕುಗಳು ಬೆಳೆಯುತ್ತ ಉಳಿದವೂ ಬೆಳೆದಿರಬೇಕು. ಈ ಬೆಳವಣಿಗೆ ಹೇಗೆಂದರೆ, ಒಂದು ಹೂವಿನ ಗಿಡದಲ್ಲಿ ಹೂಗಳು ಅನೇಕ ವರ್ಷಗಳಲ್ಲಿ ಅಸಂಖ್ಯಾತವಾಗಿ ಬೆಳೆದರೂ ಹೇಗೆ ಒಂದೇ ಜಾತಿಯವೇ ಆಗುತ್ತವೋ ಹಾಗೆ, ಮುಂದೆ ಬಂದ ಋಷಿಗಳು "ಪ್ರತ್ಯಕ್ಷ" ಮಾಡಿಕೊಂಡಂತೆಲ್ಲಾ ಆಯಾದೇವತೆಗಳ ಬಗೆಗೆ ಒಂದಕ್ಕೊಂದು ಪೋಷಕವಾಗುವಂತಹ ಋಕ್ಕುಗಳೇ, ಯಜುಸ್ಸಾಮಗಳೇ ಹೊರಬಂದವು. ಹೀಗೆ ಬೆಳವಣಿಗೆಯೆಂಬುದು, ಏಕರೂಪತೆಯಿಂದಲೇ ಬಂದಿರುವುದರಿಂದ ವೇದಗಳೆಲ್ಲ ಏಕಾರ್ಥಕೊಡುವಂತಹವು ಎಂಬ ನಂಬಿಕೆ ಅನಾದಿಕಾಲದಿಂದ ಬಂದಿದೆ. ಋಷಿಭೇದದಿಂದಾಗಲೀ, ಕಾಲಭೇದದಿಂದಾಗಲೀ, ದೇವತಾಭೇದದಿಂದಾಗಲೀ,

ಕ್ರಿಯಾಭೇದದಿಂದಾಗಲೀ ವೇದಗಳ ಏಕಕಂಠತ್ವವು ಮಾರ್ಪಾಡಾಗಲಿಲ್ಲವೆನ್ನು ವುದೇ ಸಾಂಪ್ರದಾಯಿಕ ಅಭಿಪ್ರಾಯ.

ಈ ರೀತಿ ಅತ್ಯಾಶ್ಚರ್ಯಕರವಾದ ಏಕಾಭಿಪ್ರಾಯವನ್ನು ಉಳಿಸಿ ಕೊಂಡು ಬರುವುದು ಕಷ್ಟವೂ ಇರಲಿಲ್ಲ. "ಋಗ್ವೇದ" ಸಂಸ್ಕೃತಿಯೆಂದರೆ ಆ ಕಾಲದಲ್ಲಿ ಎಲ್ಲರೂ ಋಷಿಗಳಾಗಿದ್ದರೆಂದಾಗಲೀ, ಅಥವಾ ಈ ವಿಚಾರಗಳು ಸರ್ವಸಾಮಾನ್ಯವಾಗಿದ್ದವೆಂದಾಗಲೀ, ತಿಳಿಯಬೇಕಾದ ಅವಶ್ಯಕತೆ ಇರಲಿಲ್ಲ. ಎಲ್ಲ ವೇದ ಋಷಿಗಳನ್ನೂ ಎಣಿಸಿ ನೋಡಿದರೆ, ಗೋತ್ರ, ಶಿಷ್ಯಸಂಪ್ರದಾಯ, ಗುರುಕುಲದ ಕಟ್ಟುಪಾಡುಗಳು, ಋಷಿಜೀವನದ ಕಠೋರ ನಿಯಮಾವಳಿ ಗಳು, ವೇದಾರ್ಥದ ರಹಸ್ಯ ರಕ್ಷಣೆಯ ವ್ಯವಸ್ಥೆ; ಶಬ್ದೋಚ್ಚಾರಣೆಗಾಗಿ ವಿಶೇಷ ಏರ್ಪಾಡುಗಳು ಎಲ್ಲವನ್ನೂ ಮನಸ್ಸಿಗೆ ತಂದುಕೊಂಡರೆ, ಏಕಕಂಠ ತ್ವವು ಉಳಿಯಲು ಇದ್ದ ಅವಕಾಶದ ಅರಿವು ,ಆಗುವುದು. ಹೀಗಾಗಿ ವೇದಸೂಕ್ತಗಳು ನಷ್ಟವಾದದ್ದು ಆಶ್ಚರ್ಯವೇ ವಿನಾ "ಹೊಸ" ದಾಗಿ ಬಂದ ಸೂಕ್ತಗಳು "ಹಳೆಯ" ರೀತಿಯಲ್ಲೇ ಬಂದದ್ದರಲ್ಲಿ ಆಶ್ಚರ್ಯವಾಗ ಲಾರದು. ಈ ಏಕಾರ್ಥವೊಂದು ಇದೆಯೆಂದೂ ಅದನ್ನು ಗ್ರಹಿಸುವುದೇ ವೇದಾಧ್ಯಯನದ ಮುಖ್ಯ ಗುರಿಯೆಂದು ಎಲ್ಲ ಭಾಷ್ಯಕಾರರೂ ಹೇಳಿ ಕೊಂಡು ಬಂದಿರುವುದಲ್ಲದೆ ಅಂತಹ ಏಕಾರ್ಥವನ್ನೇ ತಮ್ಮ ತಮ್ಮ ಸಿದ್ಧಾಂತ ಗಳನ್ನಾಗಿ ಸ್ಥಾಪಿಸಿದ್ದಾರೆ; ಒಂದೊಂದು ಉಪನಿಷತ್ತಿಗೆ ಒಂದೊಂದು ಸಿದ್ಧಾಂತವೆಂದೋ, ಅಥವಾ ಒಬ್ಬೊಬ್ಬ ಆಚಾರ್ಯರಿಗೆ, ವ್ಯಕ್ತಿಗಳ ಭೇದ ದಂತೆ, ವೇದಾರ್ಥಭೇದವೂ ಉಂಟೆಂದೂ ಒಪ್ಪಿದ್ದರೆ, ಮತ ಮತಗಳ ಜಗಳ ಎಂದೋ ಮುಗಿದು ಹೋಗುತ್ತಿತ್ತು ! ಹೀಗಲ್ಲದಿರುವುದಕ್ಕೆ ಪ್ರಧಾನ ಕಾರಣ, ವೇದಗಳಿಗೆಲ್ಲ ಏಕಾರ್ಥ ಉಂಟೆಂಬ ನಂಬಿಕೆಯೇ.

ಈ ಏಕಾರ್ಥತೆಯ ವಿಚಾರವನ್ನೂ ಮತ್ತು ಇದನ್ನು ತಿಳಿಯುವುದ ಕ್ಕಾಗಿ ಪಟ್ಟಶ್ರಮದ ಚರಿತ್ರೆಯನ್ನೂ ಸ್ವಲ್ಪ ನೋಡೋಣ. ನಮಗೆ ಈಗ ಸಿಕ್ಕಿರುವ ವೇದಾರ್ಥ ವಿವೇಚನೆಯ ಗ್ರಂಥಗಳಲ್ಲಿ ಯಾಸ್ಕ ಮಹರ್ಷಿಗಳ ನಿರುಕ್ತವೆಂಬುದು ಅತ್ಯಂತ ಹಳೆಯದು. ಮತ್ತು ಅತ್ಯಂತ ಮುಖ್ಯವಾದದ್ದು

ಪಾಣಿನಿಯು ವೇದಪುರುಷನನ್ನು ಸಮಸ್ತ ವೇದಾಂಗಗಳ ಸಮೇತ ಹೀಗೆ ವರ್ಣಿಸಿದ್ದಾನೆ:

"ಛಂದಸ್ಸುಗಳೇ ಇವನ ಪಾದಗಳು, ಕಲ್ಪಗಳೇ ಕೈಗಳು, ಜ್ಯೋತಿಷವು ಕಣ್ಣುಗಳು, ನಿರುಕ್ತವು ಕಿವಿಗಳು, ಶೀಕ್ಷಾಶಾಸ್ತ್ರವು ಮೂಗು, ಮುಖವು ವ್ಯಾಕರಣ. ಹೀಗೆ, ಸಾಂಗ ವೇದಾಧ್ಯಯನ ಮಾಡಿದವನು ಬ್ರಹ್ಮಲೋಕದಲ್ಲಿ ಮಹತ್ವವನ್ನು ಪಡೆಯುತ್ತಾನೆ." ( ಪಾಣಿನಿ ಶಿಕ್ಷಾ, ೪೧, ೪೨ )

ಯಾಸ್ಕರ ಕಾಲ ಸುಮಾರು ಕ್ರಿ. ಪೂ. ಏಳನೇ ಶತಮಾನವಿರಬೇಕೆಂದು ಈಗಿನ ವಿದ್ವಾಂಸರು ಹೇಳುತ್ತಾರೆ. ಯಾಸ್ಕರೇ ತಮಗಿಂತ ಪೂರ್ವರಾದ ನಿರುಕ್ತಕಾರರುಗಳ ಹೆಸರುಗಳನ್ನು ಆಗಾಗ್ಗೆ ಎತ್ತಿದ್ದಾರೆ. ಆದ್ರಾಯಣ, ಔದುಂಬರಾಯಣ, ಔಪಮನ್ಯವ, ಔರ್ಣವಾವ ಕಾಥಕ್ಯ, ಕೌತ್ಸ, ಕೌಷ್ಟುಕಿ, ಗಾರ್ಗ್ಯ, ಗಾಲವ, ಚರ್ಮಶಿವ, ಕೈಟಕಿ, ವಾರ್ಷ್ಯಾಯಣಿ, ಶತಬಲಾಕ್ಷ, ಶಾಕಲ್ಯ, ಶಾಕಪೂಣಿ, ಸ್ಥೌಲಾಷ್ಠವಿ- ಎಂಬವರು ಈ ಮಹನಿಯರು ಇವರಲ್ಲಿ ಅನೇಕರನ್ನು ಯಾಸ್ಕರೇ ಐತಿಹಾಸಿಕರೆಂದೂ, ವೈಯಾಕರಣರೆಂದೂ, ಯಾಜ್ಞಿಕರೆಂದೂ, ನೈರುಕ್ತರೆಂದೂ ವಿಭಾಗಪೂರ್ವಕವಾಗಿ ನಿರ್ದೇಶಿಸಿ, ಇವರಿಗೆ ವೇದಾರ್ಥ ಪ್ರಯತ್ನದಲ್ಲಿ ಯಾವ ಕಡೆ ಒಲವಿದ್ದಿತೆಂಬುದನ್ನು ಎತ್ತಿ ತೋರಿಸಿದ್ದಾರೆ. ನಿರುಕ್ತವು ಯಾಸ್ಕರಿಗಿಂತ ಪ್ರಾಚೀನವಾದ ನಿಘಂಟು ಎಂಬ ಗ್ರಂಥದ ಸೂತ್ರರೂಪ ವ್ಯಾಖ್ಯಾನ, ಈಗ ನಮಗೆ ಅರ್ಥವಾಗದ ಅನೇಕ ಪದಗಳ ಅರ್ಥವಿವೇಚನೆಯಲ್ಲಿ ಈ ಗ್ರಂಥದ ಸಹಾಯವಿಲ್ಲದಿದ್ದರೆ, ಸಾಧ್ಯವೇ ಇಲ್ಲದಂತಾಗಿದೆ. ಇದೊಂದು ರೀತಿಯ ವೇದಭಾಷ್ಯವೂ ಹೌದು, ವೈದಿಕ ವ್ಯಾಕರಣವೂ ಹೌದು, ವೈದಿಕ ಸಾಹಿತ್ಯದ ವಿಮರ್ಶೆಯೂ ಹೌದು. ವೇದಗಳು, ಕವಿಸೃಷ್ಟವಲ್ಲವೆಂದೂ, ಅಪೌರುಷೇಯವೆಂದೂ ನಿರುಕ್ತವೂ ಎತ್ತಿ ತೋರಿಸುತ್ತದೆ. ವೇದಮಂತ್ರಗಳಿಗೆ ಯಾಸ್ಕರ ಕಾಲಕ್ಕೇ ಸುಲಭವಾಗಿ ಅರ್ಥ ಸಾಧ್ಯವಾಗಿರಲಿಲ್ಲವೆಂಬುದು ನಿರ್ವಿವಾದ. ಕೌತ್ಸನೆಂಬುವನು ವೇದಗಳಿಗೆ ಅರ್ಥವೇ ಇಲ್ಲವೆಂದು ಆ ಕಾಲದಲ್ಲಿಯೇ "ಅರ್ಥ" ಮಾಡುತ್ತಿದ್ದನೆಂದು ತಿಳಿದು ಬರುತ್ತದೆ. ನಿರುಕ್ತವೇ ಇವನ ವಾದವನ್ನು ಸಂಗ್ರಹಿಸಿ, ಉತ್ತರಿಸಿದೆ. ಮುಂದೆ ಬಂದ ಮೀಮಾಂಸಕರು, ಈ ಕೌತ್ಸನ

ದಾರಿಯನ್ನೆ ಹಿಡಿದರೆಂದೂ, ಇದೂ ಸಹ ಪ್ರಾಚೀನವಾದ ಮತವೆಂದೂ ತಿಳಿದು ಬರುತ್ತದೆ. ಬ್ರಾಹ್ಮಣಭಾಗಗಳನ್ನು ವೇದಸಂಹಿತೆಗಳ ವಿರುದ್ಧ ಎತ್ತಿ ಕಟ್ಟಿದ "ಮಹನೀಯ" ರಲ್ಲಿ ಕೌತ್ಸನದೇ ಪ್ರಾಯಶಃ ಮೊದಲ ಹೆಸರು. ವೇದಗಳಿಗೆ, ಕೇವಲ ಉಚ್ಚಾರಣೆಯೇ ಉಪಯೋಗವೆಂದೂ, ಮಂತ್ರಗಳಿಗೆ ಅರ್ಥವೇ ಇಲ್ಲವೆಂದೂ, ಇವನ ಪ್ರಧಾನ ವಾದ. ಯಾಸ್ಕರು, ಈ ವಾದಕ್ಕೆ ವಿಸ್ತಾರವಾದ ಉತ್ತರವನ್ನು ಕೊಟ್ಟಿದ್ದಾರೆ. ಲೋಕ ರೂಢಿಯಲ್ಲಿ ಇರುವ ಶಬ್ದಗಳನ್ನೇ ವೇದದಲ್ಲಿಯೂ ಬಳಸಿದೆಯಾದುದರಿಂದ ಅರ್ಥವಿಲ್ಲ ಎನ್ನಲು ಕಾರಣವಿಲ್ಲ. ಬ್ರಾಹ್ಮಣಗಳು ವೇದಾರ್ಥಕ್ಕೆ ಪ್ರಯತ್ನಿಸಿದ ಪ್ರಥಮ ವೇದ ಗ್ರಂಥಗಳು. ಪರಸ್ಪರ ವಿರೋಧದ ಮಾತುಗಳು ವೇದವಲ್ಲಿ ಇಲ್ಲವೇ ಇಲ್ಲ. ಇದು ಯಾಸ್ಕರ ವಾದಸರಣಿ.

ಯಾಸ್ಕರ ಕಾಲಕ್ಕೆ ಖಗೋಳ ಶಾಸ್ತ್ರವೂ, ಅಲಂಕಾರ ಶಾಸ್ತ್ರವೂ ವಿಸ್ತಾರವಾಗಿ, ಬೆಳೆದು ನಿಂತಿದ್ದವೆನ್ನಲು ಅನೇಕ ಪ್ರಮಾಣಗಳಿವೆ. ಅನೇಕ ವೈದಿಕ ಉಪಾಖ್ಯಾನಗಳಿಗೂ ಐತಿಹಾಸಿಕ ಘಟನೆಗಳಿಗೂ ಯಾಸ್ಕರು ಅರ್ಥ ಹೇಳಿದ್ದಾರೆ. ಯಾಸ್ಕರು ಹೇಳಿದುದನ್ನು ಮುಂದೆ ಬಂದವರು ಒಪ್ಪದೆ ಖಂಡಿಸಿದ ಪ್ರಸಂಗಗಳೂ ಇವೆ. ( ಶೌನಕರ ಬೃಹದ್ದೇವತೆ ಅಲ್ಲಲ್ಲಿ ಹೀಗೆ ಮಾಡಿದೆ.) ದೇವತಾವೈವಿಧ್ಯದ ವಿಷಯದಲ್ಲಿ ಯಾಸ್ಕರು ನಿಖರವಾಗಿ ಹೀಗೆ ಹೇಳುತ್ತಾರೆ. "ಮಹಾಭಾಗ್ಯಾತ್ ದೇವತಾಯಾ ಏಕಆತ್ಮಾ ಬಹುಧಾಸ್ತೂಯತೇ. ಏಕಸ್ಯ ಆತ್ಮನಃ ಅನ್ಯೇ ದೇವಾಃ ಪ್ರತ್ಯಂಗಾನಿಭವಂತಿ" ಎಂದರೆ "ಮಹಾಭಾಗ್ಯ" ದಿಂದ ಒಬ್ಬನೇ ಪರಮಾತ್ಮನ ದೊಡ್ಡತನವು ಅನೇಕ ರೂಪಗಳಲ್ಲಿ ಕೊಂಡಾಡಲ್ಪಟ್ಟಿದೆ. ದೇವರು ಒಬ್ಬನೇ. ಇತರ ದೇವತೆಗಳು ಅವನ ಬಿಡಿ ಬಿಡಿ ಅಂಗಗಳು. ಇದು ಯಾಸ್ಕರಿಗಿಂತಲೂ ಪ್ರಾಚೀನ ವಿಚಾರ ಧಾರೆಯಾಗಿದ್ದು ಭಾರತೀಯರ ಅನಾದಿಕಾಲದಿಂದ ಇಲ್ಲಿಯವರೆಗೆ ನಡೆದು ಕೊಂಡು ಬಂದ ಧೋರಣೆಯಾಗಿದೆ. ತಿರಸ್ಕಾರಭಾವದಿಂದ ಡಾ॥ ರಾಧಾಕೃಷ್ಣನ್ ಅವರು "ಋಗ್ವೇದವು ಬಹಳ ದೇವತೆಗಳನ್ನು ನಿರ್ಮಾಣ ಮಾಡುವ ದೊಡ್ಡ ಕಾರಖಾನೆ" ಎಂದು ಹೇಳಿರುವುದು, ಹಿಂದೆ ಹೇಳಿದ ಧೋರಣೆಗಿಂತ ಎಷ್ಟು ಕದೂರದಲ್ಲಿದೆ ಎಂಬುದನ್ನೂ ದುರದೃಷ್ಟಕರವೇಬುದನ್ನೂ ಕಾಣಬೇಕು. ಅಂದರೆ ದೇವತೆಗಳಿಗೆ ಪ್ರಕೃತಿನಿಯಮದಂತೆ, ಸ್ವಭಾವ, ಶಕ್ತಿ ಸಾಮರ್ಥ್ಯಗಳ

ಪ್ರತ್ಯೇಕವಾಗಿರುವುದನ್ನೂ ಯಾಸ್ಕರು ಎತ್ತಿ ತೋರಿಸಲು ಮರೆತಿಲ್ಲ, "ಇತರೇತರ ಜನ್ಮಾನಃ ಭವಂತಿ ಇತರೇತರ ಪ್ರಕೃತಯಃ" (ನಿರುಕ್ತ VII-4) ಹೀಗೆ ಮನೋಹರವಾದ ಸಮನ್ವಯ, ಏಕಾರ್ಥ ಪ್ರಯತ್ನ ಇಲ್ಲಿದೆ.

ಮಂತ್ರಗಳಲ್ಲಿ ಋಕ್ಕುಗಳಿಗೆ ಪರೋಕ್ಷ ಕೃತಗಳೆಂದೂ ಪ್ರತ್ಯಕ್ಷ ಕೃತ ಗಳೆಂದೂ, ಅಧ್ಯಾತ್ಮಿಕ್ಯಗಳೆಂದೂ ವ್ಯತ್ಯಾಸವನ್ನು ಯಾಸ್ಕರು ಹೇಳುತ್ತಾರೆ ಅಲ್ಲದೆ ಆತ್ಮವಿದರಿಗೆ ವೇದಾರ್ಥವು ಮೂರು ಹಂತಗಳಲ್ಲಿ ಆಗುವುದೆಂಬುದು ಇವರ ಅಭಿಪ್ರಾಯ—೧) ಅಧಿಯಜ್ಞ ೨) ಅಧಿದೈವ ೩) ಆಧ್ಯಾತ್ಮ ಹೀಗೆ ವೇದಾರ್ಥವನ್ನು ತಿಳಿದವರೂ ಸಹ ಯಾಜ್ಞಿಕರಾಗಿ, ನೈರುಕ್ತರಾಗಿ ಮತ್ತು ಆತ್ಮವಿತ್ತುಗಳಾಗಿ, ಮೂರು ಹಂತದಲ್ಲಿರುವರು. ಬ್ರಹ್ಮೈಕತ್ವವನ್ನು ಕಾಣು ವುದೇವೇದಾರ್ಥ ಪ್ರಯತ್ನದ ಪರಮ ಗುರಿ; ಆದರೆ ಕೆಳಗಿನ ಎರಡು ಮೆಟ್ಟಲು ಗಳು ನಿರರ್ಥಕವಲ್ಲ. ಪ್ರಾಯಶಃ ಈ ಮೂರು ವಿಧವಾದ ಅರ್ಥಗಳಿಗೇ ಪೂರ್ವಿಕರು, ತ್ರಯೀ" ಅಥವಾ "ತ್ರಿವಿದ್ಯಾ" ಎಂದು ಹೇಳುತ್ತಿದ್ದ ರೆಂದು ಕಾಣುತ್ತದೆ, ಪಾಶ್ಚಾತ್ಯರು ಇದನ್ನು ತಿಳಿಯದೇ ಮೊದಲ ಮೂರುವೇದಗಳೇ ಈ ತ್ರಯೀ ಎಂದೂ, ಅಥರ್ವವೇದವು, ಈ ಗುಂಪಿನಿಂದ ಹೊರಗಿಡಲ್ಪಟ್ಟಿದ್ದೆಂದೂ ವಾದ ಮಾಡುವುದು ಅಜ್ಞಾನದ ಮತ್ತೊಂದು ಸಾಕ್ಷಿ. ದೇವತೆಗಳನ್ನು ತ್ರಿಸ್ಥಾನೀಯರನ್ನಾಗಿ ವಿಂಗಡಿಸಿರುವುದೂ, ಅಗ್ನಿ ಗಳಲ್ಲಿ ಮೂರು ಬಗೆಯನ್ನು ಹೇಳಿರುವುದೂ, ಲೋಕಗಳಲ್ಲಿ ಮೂರನ್ನು ಪ್ರಧಾನವಾಗಿ ಎಣಿಸಿರುವುದೂ, ಮತ್ತು ಗೀತೆಯ ಭಾಷೆಯಲ್ಲಿ ಜೀವಿಗಳನ್ನು ತ್ರಿಗುಣಾತ್ಮಕರೆಂದು ವರ್ಣಿಸಿರುವುದೂ ಪ್ರಾಯಶ: ಈ ಹಿನ್ನೆಲೆಯಲ್ಲಿಯೇ.

ಛಂದಸ್ಸುಗಳಲ್ಲಿಯೂ, ಪ್ರಧಾನ ದೇವತಾತ್ರಯರಿಗೆ ಮತ್ತು ಲೋಕತ್ರ ಯಕ್ಕೆ ಹೊಂದಿಕೊಂಡಂತೆ, ಮೂರನ್ನೇ ಆರಿಸಿರುವುದೂ ಈ ಅರ್ಥವನ್ನೇ ಸಮರ್ಥಿಸುತ್ತಿದೆ.

ಪ್ರತಿಯೊಂದು ಯಜ್ಞವೂ ತ್ರಯೀವಿದ್ಯೆಯ ಸಂಕೇತವೇ. ಹೀಗೆ ವೇದಗಳಲ್ಲಿ ಮೂರು ಮಟ್ಟದ ವೇದಾರ್ಥ ಉಂಟೆಂಬುದು ಅನಾದಿಕಾಲ ದಿಂದ ಪ್ರಸಿದ್ಧ ಸಂಗತಿ. ಆದರೆ ಈಚೀನವರು, ಈ ಸಂಪ್ರದಾಯ ರಹಸ್ಯ ವನ್ನು ತಿಳಿಯದ, ವೇದಗಳೆಲ್ಲ ಅರ್ಥಶೂನ್ಯ ಸ್ತೋತ್ರಗಳೋ ಕ್ರಿಯೆಗಳೋ,

ಆಗಿವೆಯೆಂದು ವಾದ ಮಾಡುವುದು ಅವಿವೇಕದ ಪರಮಾವಧಿ. ಶ್ರೀ ಸಾಯಣಾಚಾರ್ಯರು ತಮ್ಮ ಚತುರ್ವೇದ ಭಾಷ್ಯಗಳಲ್ಲಿ ಇದೇ ಸಾಂಪ್ರದಾಯಿಕ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡು, ಒಂದೇ ಮಂತ್ರಕ್ಕೆ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆಯ ಅರ್ಥಗಳನ್ನು ವಿವರಿಸಿರುವುದು ಸುಪ್ರಸಿದ್ಧವಾಗಿದೆ. ಆದರೆ, ಸ್ವಯಂ ಯಜುಶ್ಶಾಖೆಯವರಾದ ಅವರು ಸಹಜವಾಗಿಯೋ ಏನೋ ಯಾಜ್ಞಿಕಾರ್ಥದ ಕಡೆಗೆ ಹೆಚ್ಚು ಒಲವನ್ನು ತೋರಿಸಿದಂತಿದೆ. ಆದಮಾತ್ರದಿಂದಲೇ ಅವರಿಗೆ ಮೇಲಿನ ಅರ್ಥಗಳು ಗೊತ್ತಿರಲಿಲ್ಲವೆಂದು ಹೇಳುವಂತಿಲ್ಲ. ಬರವಣಿಗೆಯಲ್ಲಿ ವೇದಾರ್ಥಗಳನ್ನೂ ಕ್ರೋಢೀಕರಿಸಲೇಬೇಕಾಗಿ ಬಂದ ದುಷ್ಕಾಲದಲ್ಲಿ ಯಜ್ಞಕ್ಕೆ ಉಪಯುಕ್ತವಾಗುವಷ್ಟು ಅರ್ಥಗಳನ್ನು ಮಟ್ಟಿಗೆ ಬರೆದಿಟ್ಟು ಆಧ್ಯಾತ್ಮಿಕ ಅರ್ಥವನ್ನು ಗುರುಮುಖದಿಂದಲೇ ತಿಳಿಯುವ ಅವಕಾಶವನ್ನು ಅನುಮೋದಿಸಿದರೆಂದು ಹೇಳಿದರೆ ಬಾಧಕವೇನು ?

ಪಾಶ್ಚಾತ್ಯರು ಇದನ್ನೂ ಗಮನಿಸದೆ ಸಾಯಣರನ್ನೂ ಅಭ್ಯಸಿಸಿ, ಅವರು ಬರೆದಷ್ಟನ್ನೇ ಭದ್ರವಾಗಿ ಹಿಡಿದು, ಅದನ್ನೇ ಅವರ ವಿರುದ್ಧವಾಗಿ ಉಪಯೋಗಿಸಿ, ಶುಷ್ಕ ಕ್ರಿಯೆಗಳ ಹೊರತು ( Dry ritualism ) ವೇದದಲ್ಲಿ ಮತ್ತೇನೂ ಇಲ್ಲವೆಂದು ವಾದಿಸಿರುವುದನ್ನು ಅರವಿಂದಘೋಷರೂ, ಸ್ವಾಮಿ ದಯಾನಂದರೂ ಮತ್ತು ಈಚಿನ ಅನೇಕ ವಿದ್ವಾಂಸರೂ ಮನಸ್ಸಿಗೆ ಒಪ್ಪುವಂತೆ ಖಂಡಿಸಿದ್ದಾರೆ.

ಇಷ್ಟಕ್ಕಿಂತ ಮೇಲೆ, ಸ್ವಯಂ ವೇದವೇ, ವೇದಾರ್ಥವನ್ನು ತಿಳಿಯದವನನ್ನು ಅಪಹಾಸ್ಯ ಮಾಡಿದೆ. ( ಋಕ್ ಸಂಹಿತೆ ಮಂಡಲ ೧೦, ಸೂಕ್ತ ೭೧ ಮ, ೪ ) ಈ ಮಂತ್ರವನ್ನು ಉದಾಹರಿಸಬಹುದು.

ಉತ ತ್ವಃ ಪಶ್ಯನ್ ನ ದದರ್ಶ ವಾಚಂ ಉತತ್ವಃ ಶೃಣ್ವನ್
ನ ಶೃಣೋತ್ಯೇನಾಂ ।
ಉತೋತ್ವಸ್ಮೈ ತನ್ವಂ ವಿಸಸ್ರೇ ಜಾಯೇವ ಪತ್ಯ ಉಶತೀ
ಸುವಾಸಾಃ ॥

"ಒಬ್ಬಾನೊಬ್ಬನು ಕಣ್ಣಿನಿಂದ ನೋಡಿದರೂ, ಏನೂ ಕಾಣಿಸಲಿಲ್ಲ. ಮತ್ತೊಬ್ಬನು, ಕೇಳಿದರೂ ಕೇಳಿದ ಪ್ರಯೋಜನವಾಗಲಿಲ್ಲ.

( ಆದರೆ ಇದು ಅವಿದ್ವಾಂಸನ ವಿಷಯು. ಕೇವಲ ಕಂಠಪಾಠ ಮಾತ್ರ ಮಾಡಿದವನ ಗತಿ. ) ಆದರೆ ಇನ್ನೊಬ್ಬನು ವಿಶೇಷ ಪ್ರಯತ್ನದಿಂದ ವೇದಾರ್ಥಕ್ಕೆ ಹಂಬಲಿಸಿದಾಗ, ವೇದವೇ ಸುವಸ್ತ್ರಾಲಂಕೃತಳಾದ ಪತ್ನಿಯಂತೆ, ಭೋಗ ಕಾಲದಲ್ಲಿ ಗಂಡನಿಗೆ ಮಾತ್ರ ತನ್ನ ಶರೀರವನ್ನು ತೋರಿಸುವಂತೆ ತನ್ನ ಸರ್ವಸ್ವವನ್ನೂ ಕೊಟ್ಟು ಆನಂದ ಪಡಿಸುವುದು."

ಈ ಸೂಕ್ತದಲ್ಲಿ ಬಹು ಮುಖ್ಯವಾದ ಕೆಲವು ಅಂಶಗಳಿವೆ. ಮೊದಲನೆಯವಾಗಿ, ವೇದದ ಭಾಷೆಯೇ, ಉದ್ದೇಶ ಪೂರ್ವಕವಾಗಿ, ಒಗಟಿಯ ರೂಪದಲ್ಲಿ ರಚಿಸಿದುದೆಂದು ತಿಳಿದು ಬರುತ್ತದೆ. ಋಷಿಗಳು ತಮ್ಮ ವಿಶೇಷ ಉಪಾಸನೆಯ ಮಾರ್ಗವನ್ನು ತಮಗೆ ಬಾಹ್ಯಪ್ರಜ್ಞೆ ಇದ್ದಾಗ ಬರೆದವರಲ್ಲ ಅವರ ಬೃಹಾನುಭವವೇ, ತಾನಾಗಿ ಹೊರ ಹೊರಟ ಭಾಷೆ ಅದು. ಸಹೃದಯನ ಹೊರತು ಅವು ಬೇರೆಯವರಿಗೆ ತಿಳಿಯುವಂತಿರಲ್ಲಿಲ್ಲ. ಅಪಾತ್ರನಿಗೆ, ವೇದಾರ್ಥ ದೊರೆಯಬಾರದೆಂಬ ಅಭಿಪ್ರಾಯವು, ಋಷಿಗಳಿಗೆ ಅಸಂಭವವಾಗಲಿ, ಅಸಾಧುವಾಗಲೀ ಅಲ್ಲ. ಲೋಕದಲ್ಲಿ ಕಣ್ಣಿಗೆ ಕಾಣುವ ವಸ್ತುಗಳನ್ನೇ ಸಾಂಕೇತಿಕವಾದ ಭಾಷೆಯಲ್ಲಿ ಬಳಸಿ, ಹೇಳಿರುವದರಿಂದ, ಸಾಮಾನ್ಯವಾಗಿ ಮೇಲೆ ಮಾತ್ರ ಕಾಣುವ ಅರ್ಥವು, ವಿಶೇಷ ಒಳ ಅರ್ಥಕ್ಕಿಂತ ಭಿನ್ನವಾಗಿರುವುದು ಸಹಜವಾಗಿದೆ. ಪ್ರಜಾಪತಿಯು ಆತ್ಮಜ್ಞಾನದ ವಿಷಯದಲ್ಲಿ ಇಂದ್ರವಿರೋಚನರಿಗೆ, ಒಂದೇ ಸಂದೇಶವನ್ನು ಕೊಟ್ಟರೂ, ವಿರೋಚನನಿಗೆ ತಿಳಿಯದಂತೆಯೂ, ಇಂದ್ರನ ಮಟ್ಟಿಗೆ, ತಿಳಿಯುವಂತೆಯೂ, ಚಮತ್ಕಾರವಾದ ಭಾಷೆಯಲ್ಲಿ ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು. ( ಛಾಂದೋಗ್ಯ ಉಪನಿಷತ್ತು, VIII, 7-15.) ಹೀಗೆ ಅರ್ಥವನ್ನು ಮುಚ್ಚಿ ಹೇಳಿರುವುದರಿಂದಲೇ ವೇದಕ್ಕೆ ಛದ್-ಧಾತುವಿನಿಂದ " ಹೊದ್ದಿಕೆ " ಎಂಬ ಅರ್ಥದಲ್ಲಿ ' ಛಂದಸ್ಸು ' ಎಂದು ಹೆಸರಾದಂತೆ, ತಿಳಿದು ಬರುತ್ತದೆ.

ಇದೂ ಸಹ, ಪತಿವ್ರತೆಯಾದ ಸ್ತ್ರೀಗೆ ವಸ್ತ್ರಾಲಂಕಾರದಂತೆ ಇದೆ, ಎಂಬುದು ಮೇಲಿನ ಸೂಕ್ತದ ಆಶಯು.

ಅಲ್ಲದೆ, ಚತುರ್ವಿಧ ಪುರುಷಾರ್ಥಗಳಲ್ಲಿ ಎಲ್ಲವೂ ಎಲ್ಲರಿಗೂ ಅಲ್ಲ. ಸಾಮಾನ್ಯನಿಗೆ, ಅವನ ಯೋಗ್ಯತಾನುಸಾರ ತ್ರಿವರ್ಗವೇ ( ಧರ್ಮ,

ಅರ್ಥ, ಕಾಮಗಳೇ ) ಗ್ರಾಹ್ಯ. ಅಥವಾ, ಒಬ್ಬನಿಗೇ ಬೇರೆ ಬೇರೆ ಕಾಲದಲ್ಲಿ ವಯಸ್ಸು, ಯೋಗ್ಯತೆಯನ್ನು ಅನುಸರಿಸಿ, ಬೇರೆ ಬೇರೆ ಪುರುಷಾರ್ಥಗಳು ರುಚಿಯಾಗಬಹುದು. ಬ್ರಹ್ಮನಿಷ್ಠನ ಹೊರತು ಮೋಕ್ಷ ವಿಚಾರವು ( ಅಧ್ಯಾತ್ಮವು ) ರುಚಿಸಲಾರದು. ಆದ್ದರಿಂದ ಅಧಿಕಾರಿಗೆ ಮಾತ್ರ ಹೆಚ್ಚಿನ, ಅರ್ಥವನ್ನು ಹೀಗೆ ರಕ್ಷಿಸಿ, ಉಳಿಸಿಕೊಟ್ಟ ಪೂರ್ವಿಕರನ್ನು ಮೆಚ್ಚತಕ್ಕದ್ದೇ ಹೊರತು ನಿಂದಿಸತಕ್ಕದ್ದಲ್ಲ.

ಭಗವಂತನು ಗೀತೆಯಲ್ಲಿ " ತ್ರೈಗುಣ್ಯವಿಷಯಾ ವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ " ಎಂಬ ಮಾತಿನಲ್ಲಿ ಈ ಸಂದೇಶವನ್ನೇ ಕೊಟ್ಟು, ತ್ರಿಗುಣಾತ್ಮಕರುಚಿಭೇದಗಳನ್ನು ಹೊಂದಿದವರಿಗೆ ಅಂತಹ ಫಲಗಳನ್ನು ಕೊಡುವ ವೈದಿಕಕಾಮ್ಯಕರ್ಮಾನುಷ್ಠಾನದ ಕಡೆಗೇ ಒಲವು ಇರುವುದೆಂದೂ, ಆದರೆ ಅರ್ಜುನನು ಅದಕ್ಕಿಂತ ಮೇಲೇರಬೇಕೆಂದೂ ಸಂದೇಶ ಕೊಟ್ಟಿರುವುದೂ ಗಮನೀಯ. ಇದು ವೇದನಿಂದಾಪರ ವಾಕ್ಯವಲ್ಲ. " ವೇದೈಶ್ಚ ಸರ್ವೈಃ ಅಹಮೇವ ವೇದ್ಯಃ " ಎಂದೂ " ವೇದಾಂತ ಕೃತ್ ವೇದವಿದೇವ ಚಾಹಂ " ಎಂದೂ ತನ್ನನ್ನು ತಾನೇ ವರ್ಣಿಸಿಕೊಂಡ ಶ್ರೀ ವಾಸುದೇವನು ವೇದನಿಂದಕನಲ್ಲ. ಆದ್ದರಿಂದ ವೇದದಲ್ಲಿ ತ್ರಿಗುಣಗಳನ್ನು ಪೋಷಿಸುವಂತೆ ಅರ್ಥಕೊಡುವ ವೇದ ಸಂದೇಶದ ಮಟ್ಟಕ್ಕಿಂತಲೂ, ಅರ್ಜುನನು ಮೇಲೇರಿ ಹೋಗಬೇಕೆಂಬುದು ಅವನ ಸಂದೇಶ.

ಹಾಗೆ ಮಾಡದೇ ಕೇವಲ ವೇದಾಧ್ಯಯನ ಮಾಡಿ ಅರ್ಥವನ್ನು ತಿಳಿಯದೆ ಇರುವವನು ಫಲಪುಷ್ಪಗಳನ್ನು ಹೊತ್ತೂ ತನಗೆ ಏನೊಂದೂ ಪ್ರಯೋಜನವನ್ನು ಪಡೆದುಕೊಳ್ಳದೆ ನಿಂತಿರುವ ಮರದಂತೆ ಆಗುತ್ತಾನೆ ಎಂದು ಯಾಸ್ಕ ಮಹರ್ಷಿಗಳು ನಿರುಕ್ತದಲ್ಲಿ ಹೇಳಿದ್ದಾರೆ :

" ಸ್ಥಾಣುರಯಂ ಭಾರಹಾರಃ ಕಿಲಾಭೂತ್
ಅಧೀತ್ಯವೇದಂ ನವಿಜಾನಾತಿ ಯೋಽರ್ಥಂ ।
ಯೋಽರ್ಥಜ್ಞ ಇತ್ ಸಕಲಂ ಭದ್ರಮಶ್ನುತೇ
ನಾಕಮೇತಿ ಜ್ಞಾನವಿಧೂತ ಪಾಪ್ಮಾ ॥" (1-18)

ಇಲ್ಲಿ ಇನ್ನೂ ಒಂದು ವಿಶೇಷಾರ್ಥವಿದೆ. ವೇದವು ಫಲಪುಷ್ಪ ಸಮೃದ್ಧವಾದ ವೃಕ್ಷ. ದಡ್ಡನು ಎಲೆಯನ್ನೋ, ಮಧ್ಯಮನು, ಹೂವನ್ನೋ, ಜಾಣನು ಹಣ್ಣನ್ನೋ ಅದರಿಂದ ಪಡೆದುಕೊಳ್ಳುವುದು. ಅವರವರ ಯೋಗ್ಯತೆಗೆ ಉಚಿತವಾಗಿದೆ. ಇಂತಹ ವೇದದಲ್ಲಿ, ಕೇವಲ ಯಾಜ್ಞಿಕನು ಮಂದನಿಗಿಂತ ವಾಸಿಯಾಗಿದ್ದರೂ, ಅತ್ಯುತ್ತಮನಲ್ಲ. ಏಕೆಂದರೆ, ಬರೀ ಹೂವಿನಿಂದ ಏನು ಪ್ರಯೋಜವ ? ವೇದವೇ ಈ ವಿಷಯವನ್ನು ಹೀಗೆ ಹೇಳುತ್ತದೆ.

"ಉತತ್ವಂ ಸಖ್ಯೇ ಸ್ಥಿರಪೀತಮಾಹುಃ
ನೈನಂ ಹಿನ್ವಂತ್ಯಪಿ ವಾಜಿನೇಷು ।
ಅಧೇನ್ವಾ ಚರತಿ ಮಾಯಯೈಷ
ವಾಚಂ ಶುಶ್ರುವಾಗ್ಂ ಅಫಲಾಂ ಅಪುಷ್ಪಾಂ ॥" (X-71-5)

"ವೇದಾರ್ಥದಲ್ಲಿ ಸ್ನೇಹವುಳ್ಳ ಕುಶಲನು ಅಮೃತಪಾನಮಾಡುತ್ತಾ ಎಂತಹ ಸಭೆಯಲ್ಲಿಯೂ ಇತರರಿಂದ ಗೆಲ್ಲಲು ಸಾಧ್ಯವಿಲ್ಲದವನಾಗುತ್ತಾನೆ. ಆದರೆ, ಸುಮ್ಮನೆ ವೇದವನ್ನು ಕಂಠಪಾಠಮಾಡಿ ಅರ್ಥ, ಜ್ಞಾನವಿಲ್ಲದವನು ಪುಷ್ಪ, ಫಲ ರಹಿತವಾದ ವಾಕ್ಯವನ್ನು ಉಚ್ಚರಿಸಿ, ಮಾಯಾ ಕಾಮಧೇನುವನ್ನು ನಂಬಿ ವ್ಯರ್ಥವಾಗಿ ಅನುಸರಿಸಿದಂತೆ ಆಗುತ್ತದೆ. ಅದರಿಂದ ಅಮೃತಲಾಭವಿಲ್ಲ."

ಈ ಉಪಮಾನವನ್ನೇ ಜ್ಞಾಪಿಸುವಂತೆ ಭಗವಂತನು ಗೀತೆಯಲ್ಲಿ ಕೇವಲ ಯಾಜ್ಞಿಕರನ್ನು ಕುರಿತು,

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿವಾದಿನಃ ॥

ಎಂದು ಮುಂತಾಗಿ ನಿಂದಿಸಿದ್ದಾನೆ. ಅಂದರೆ, ವೇದವಾಕ್ಯದಲ್ಲಿ "ಪುಷ್ಪ" ರೂಪವಾದ ಯಾಜ್ಞಿಕ ಅರ್ಥ ಒಂದೇ ಇದೆಯೆಂದೂ, ಇದಕ್ಕೆ ಮೇಲ್ಪಟ್ಟ ಹಣ್ಣಿನಂತಹ ಆಧ್ಯಾತ್ಮಿಕ ಅರ್ಥ ಒಂದು ಇಲ್ಲವೇ ಇಲ್ಲವೆಂದೂ ಹೇಳುವವರು ಕೇವಲ ಕಾಮಾತ್ಮರು ಎಂದು ಭಾವ.

ಯಾಸ್ಕರು ಇನ್ನೊಂದು ಉಪಮಾನದಲ್ಲಿ ಹೀಗೆ ಹೇಳಿದ್ದಾರೆ. "ಆರಿ ಹೋದ ಅಗ್ನಿಯ ಮೇಲೆ ಎಷ್ಟು ಒಣಗಿದ ಕಟ್ಟಿಗೆಯನ್ನು ಹಾಕಿದರೇನು ? ಹಾಗೆಯೇ ಅರ್ಥಜ್ಞಾನವಿಲ್ಲದ ವೇದಾಧ್ಯಯನ ನಿಷ್ಫಲ"—

ಯದ್ಗೃಹೀತಂ ಅವಿಜ್ಞಾತಂ ನಿಗದೇನೈವ ಶಬ್ದ್ಯತೇ ।
ಅನಗ್ನಾವಿವ ಶುಷ್ಕೈಧೋ ನ ತತ್ ಜ್ವಲತಿ ಕರ್ಹಿಚಿತ್ ॥ (I–18)

ಮೇಲೆ ಹೇಳಿದ ಮತ್ತೊಂದು ವೇದ ಸೂಕ್ತದಲ್ಲಿ, ಪತ್ನಿಯಂತೆ ವೇದವನ್ನು ಉಪಮಾನಿಸಿ ಗಂಡನಿಗೆ ಮಟ್ಟಿಗೆ ಶರೀರವನ್ನು ತೋರಿಸುವ ರೀತಿಯಲ್ಲಿ ವರ್ಣಿಸಿರುವುದರ ಉದ್ದೇಶ ಹೀಗಿದೆ : ವೇದಾರ್ಥವನ್ನು ಅರಿಯದ ಮನುಷ್ಯನು ಅನೇಕ ಶಾಸ್ತ್ರಗಳನ್ನು ಓದಿದ್ದರೂ, ಅವಿವಾಹಿತ ಪುರುಷನು ಅನೇಕ ಸ್ತ್ರೀಯರನ್ನು ಕಣ್ಣಿನಿಂದ ನೋಡಿದಷ್ಟೆ ಫಲ. ವೇದಾಧ್ಯಯನವನ್ನಷ್ಟೇ ಮಾಡಿದ್ದರೂ ವಿವಾಹಿತನಾಗಿ ತನ್ನ ಪತ್ನಿಯನ್ನು ಇತರ ಸ್ತ್ರೀಯರಿಂದ ಬೇರೆ ಎಂದು ತಿಳಿದಷ್ಟೇ ಲಾಭ : ವೇದಾರ್ಥಜ್ಞನಾದರೆ ಋತು ಕಾಲದಲ್ಲಿ ಸರ್ವಾಲಂಕಾರ ಭೂಷಿತಳಾದ ತನ್ನ ಪತ್ನಿಯನ್ನು ಏಕಾಂತದಲ್ಲಿ ಸಂಗಮಿಸಿದಂತೆ ರಹಸ್ಯಾರ್ಥಗಳನ್ನು ಅರಿತು ಆನಂದ ಪಟ್ಟುವನಾಗುತ್ತಾನೆ ಎಂಬುದು ಈ ದೃಷ್ಟಾಂತದ ಆದ್ಯಂತ ಅರ್ಥ.

ಋಗ್ವೇದದ ೧೦ನೇ ಮಂಡಲದ ೭೧ ನೇ ಸೂಕ್ತವು ಪೂರ್ಣವಾಗಿ ವೇದಾರ್ಥಜ್ಞನ ಪ್ರಶಂಶೆಯನ್ನೂ, ಅರ್ಥಾನಭಿಜ್ಞನ ನಿಂದೆಯನ್ನೂ ಮಾಡುತ್ತದೆ, "ವೇದವು ಸ್ನೇಹಿತನಂತೆ. ಮೈತ್ರೀಭಾವದಿಂದ ಮಾತ್ರ ಅದನ್ನು ಅನುಸರಿಸಬೇಕು. ಹೀಗಲ್ಲದೆ, ಉದಾಸೀನಭಾವದಿಂದ ನೋಡಿದರೆ, ಆ ಮನುಷ್ಯನಿಗೆ ಏನೂ ಲಾಭವಿಲ್ಲದೆ, ವೇದಶ್ರವಣವೂ ನಿಷ್ಫಲವಾಗಿ, ಸುಕೃತದ ಮಾರ್ಗವೇ ತಿಳಿಯುವುದಿಲ್ಲ. ಎಲ್ಲರಿಗೂ ಕಣ್ಣು, ಕಿವಿಗಳುಂಟು. ಆದರೆ ಅರ್ಥಗ್ರಹಣ ಶಕ್ತಿಯಲ್ಲಿ ಎಲ್ಲರಿಗೂ ಒಂದೇ ಸಾಮರ್ಥ್ಯವಿಲ್ಲ. ಇಂಥವರು ಬೇರೆ ಬೇರೆ ಆಳವುಳ್ಳ ನೀರಿನ ಕೊಳಗಳಂತೆ ಇರುತ್ತಾರೆ. ಸ್ನಾನಕ್ಕೆ ಯೋಗ್ಯವಾದ ನೀರು ಹೇಗೋ ಹಾಗೇ, ಗಂಭೀರ ಪ್ರಜ್ಞೆಯನ್ನುಳ್ಳ ಮನುಷ್ಯನ ಮಟ್ಟಿಗೆ ವೇದವಿತ್ ಆಗುತ್ತಾನೆ. ಇಂತಹ ಬ್ರಹ್ಮ ಜ್ಞಾನಿಗಳು, ಹೃದಯದಿಂದ ಧ್ಯಾನಿಸಿ, ನಿಷ್ಕರ್ಷೆ ಮಾಡಿಕೊಂಡ ವೇದಾರ್ಥದಲ್ಲಿ ಅಚಲಶ್ರದ್ಧೆಯು

ವರಾಗಿ, ಏಕಾಭಿಪ್ರಾಯವುಳ್ಳವರಾಗಿ ಅಜ್ಞಾನಿಗಳನ್ನು ಸರ್ವದಾ ದೂರ ವಾಗಿಟ್ಟಿರುತ್ತಾರೆ. ಅಜ್ಞಾನಿಗಳು ಇಹಪರಗಳಲ್ಲಿಯೂ ಪ್ರಯೋಜನವನ್ನು ಹೊಂದದೆ, ಕೇವಲ ಲೌಕಿಕಾರ್ಥದ ವ್ಯಾವಹಾರಿಕ ಬಳಕೆಯ ಮಾತುಗಳನ್ನೇ ನಂಬಿ, ಪಾಪಪೂರಿತರಾಗಿ, ಪಾಪ ಕಾರ್ಯದಲ್ಲೇ ತೊಡಗುತ್ತಾರೆ."

ಜ್ಞಾನಿಗಳಿಗೆ ಪ್ರಿಯವಾದ ವೇದದ ಗೂಢಾರ್ಥವೇ ಸೋಮ. ಅಂದರೆ ವೇದವೇ ಸೋಮವಂತೆ. ( "ಪಾವಮಾನೀಃಸ್ವಸ್ತ್ಯಯನೀಃ । ಋಷಿಭಿಃ ಸಂಭೃತಂ ರಸಂ ॥ .... '' ) ಇದನ್ನು ಸರಿಯಾಗಿ ಹಿಂಡಿ ಸೋಮಪಾನ ಮಾಡದ ವೈದಿಕನ ಜನ್ಮ ವ್ಯರ್ಥ. ಸುಶ್ರುತ ಸಂಹಿತೆಯಲ್ಲಿ, ಶಾಸ್ತ್ರಾಧ್ಯಯನ ಮಾಡಿ ಅರ್ಥವನ್ನು ತಿಳಿಯದವನನ್ನು, ಕತ್ತೆಯು ಚಂದನವನ್ನು ಹೊತ್ತಂತೆ ಎಂದು ವರ್ಣಿಸಿದ್ದಾರೆ.

ಯಥಾ ಖರಃ ಚಂದನ ಭಾರವಾಹೀ
ಭಾರಸ್ಯ ವೇತ್ತಾ ನ ತು ಚಂದನಸ್ಯ
ಏವಂ ಹಿ ಶಾಸ್ತ್ರಾಣಿ ಬಹೂನಿ ಅಧಿತ್ಯ
ಚಾರ್ಥೇಷು ಮೂಢಾಃ ಖರವದ್ವಹನ್ತಿ ॥ "

ವೇದಗಳಲ್ಲಿ ಹೀಗೆ ಆಧ್ಯಾತ್ಮಿಕಾರ್ಥದ ವಿಷಯಕ್ಕೆ ಸ್ವಯಂ ವೇದವೇ ಪ್ರಮಾಣವಾಗಿ ಸಂಪ್ರದಾಯತಿಳಿದವರಿಂದ ಪೋಷಿಸಲ್ಪಟ್ಟು ಬಂದಿದೇ ಸತ್ಯ ಸಂಗತಿ ಹೀಗಿದ್ದಾಗ್ಯೂ ಸಹ ನಮ್ಮವರೇ ಎನಿಸಿಕೊಂಡ ಕೆಲವರು, " ವೇದಗಳಿಗೆ ರಹಸ್ಯಾರ್ಥವಿಲ್ಲ " ವೆಂದೂ '' ವೈದಿಕ ಸಾಹಿತ್ಯದ ಪ್ರಗತಿ ಎಂಬುದು ಪ್ರಾರಂಭದ ಪರಿಪೂರ್ಣತೆಯಿಂದ ಮುಂದೆ ಬಂದ ಅಧಃ ಪಾತ ವಾಗಿರುವುದರ ಬದಲು, ಉಪನಿಷತ್ತುಗಳಲ್ಲಿ ಪರಿಪೂರ್ಣತೆಯನ್ನು ಹೊಂದಿದ ಪ್ರಾರಂಭದ ಶೈಶವದ ತೊದಲು ಮಾತಾಗಿರಬೇಕೆಂದೂ " ಮುಂತಾಗಿ ಬರೆದಿರುವುದು ಪುನಃ ಅಜ್ಞಾನವನ್ನೇ ತೋರಿಸುತ್ತದೆ.

ವೇದಗಳಲ್ಲಿ ಕರ್ಮಕಾಂಡ ಜ್ಞಾನಕಾಂಡಗಳೆಂಬ ವಿಭಾಗವೂ ಸಹ ಒಂದು ದೃಷ್ಟಿಯಿಂದ ಕೃತಕವಾದದ್ದೇ. ಉಪನಿಷತ್ತುಗಳು ಮಟ್ಟಿಗೆ ಜ್ಞಾನ ಕಾಂಡವೆಂದೂ ಉಳಿದಿದ್ದೆಲ್ಲ ಕರ್ಮ ಕಾಂಡವೆಂದೂ, ವೇದ ಶಬ್ದರಾಶಿಯನ್ನೇ ಒಡೆಯುವುದು ತರ್ಕ ಬದ್ಧವಲ್ಲ. ಏಕೆಂದರೆ ಹಲವಾರು ಉಪನಿಷತ್ತುಗಳು

ಸಂಹಿತಾ ಬ್ರಾಹ್ಮಣಗಳ ಮಧ್ಯೆಯೇ ಇವೆ. ಉದಾಹರಣೆಗೆ, ಶುಕ್ಲ ಯಜುರ್ವೇದ ವಾಜಸನೇಯ ಸಂಹಿತೆಯ ಈಶ ಉಪನಿಷತ್ತೂ, ಮತ್ತು ಶತಪಥ ಬ್ರಾಹ್ಮಣದ ಬೃಹದಾರಣ್ಯಕ ಉಪನಿಷತ್ತೂ, ಇತ್ಯಾದಿಗಳು. ಆದ್ದರಿಂದ ಭಾಗಭೇದಕ್ಕಿಂತಲೂ, ಭಾಷಾ ಶೈಲಿಭೇದದಿಂದ, ಸಂಹಿತಾ ಬ್ರಾಹ್ಮಣಾದಿ ವೇದವಿಭಾಗಕ್ಕೆ ಅರ್ಥ ಹೇಳುವುದು ಹೆಚ್ಚು ಸಮಂಜಸ ವಾಗುವುದು. ಯಾಜ್ಞಿಕೀ, ದೈವಿಕೀ, ಮತ್ತು ಆಧ್ಯಾತ್ಮಿಕೀ, ಅರ್ಥಗಳ, ಸಮ್ಮಿಶ್ರಿತ ಭಾಷೆಯ ವೇದರೂಪವೇ ಸಂಹಿತೆಯೆದೂ, ಇದರಲ್ಲಿ ಯಾಜ್ಞಿಕೀ ಅರ್ಥ ಪ್ರಧಾನವಾದ ಮತ್ತು ಸಂಹಿತಾ ವಿವರಣ ರೂಪವಾದ ಭಾಷೆಗೆ ಬ್ರಾಹ್ಮಣವೆಂದೂ, ಆಧ್ಯಾತ್ಮಿಕಾರ್ಥ ಪ್ರಧಾನವಾದ ಭಾಷೆಯನ್ನೊಳಗೊಂಡ ಭಾಗಗಳಿಗೆ ಆರಣ್ಯಕೋಪನಿಷತ್ತುಗಳೆಂದೂ ಹೇಳುವುದು ಹೆಚ್ಚು ಸಮಂಜಸ ವಾಗುವುದು. ಇವು ಪರಸ್ಪರ ವಿರುದ್ಧವಾದ ಭಾಷೆಗಳಲ್ಲ. ಯಜ್ಞವು ಭಗವಂತನ ಆರಾಧನಾ ಕ್ರಿಯೆ. ಸಾಮವು ತುಂಬು ಕಂಠದ ಅವನ ಸ್ತೋತ್ರ. ಋಕ್ ಎಂಬುದು ಅವನ ಸ್ತೋತ್ರದ ಸಾಹಿತ್ಯ ಭಾಗ. ಹೀಗಲ್ಲದೇ ವೇದ ಗಳಲ್ಲಿ ನಿರ್ದಿಷ್ಟವಾದ ಭಾಗಗಳನ್ನೇ ಕರ್ಮಕಾಂಡವೆಂದೂ ಜ್ಞಾನಕಾಂಡ ವೆಂದೂ, ದೈವತಾಕಾಂಡವೆಂದೂ, ಒಡೆದವರು, ಪ್ರಾಯಶಃ ಮೊದಮೊದ ಲಿಗೆ ಮೀಮಾಂಸಕರಿರಬೇಕು. ಮುಂದೆ ಬಂದ ವೇದಾಂತಿಗಳೂ ಕೆಲವರು, ಈ ಹಳ್ಳಕ್ಕೆ ಬಿದ್ದು, ಅವರು ಬ್ರಹ್ಮನಿರಾಕರಣೆ ಮಾಡಿದಂತೆ ಇವರು ಕರ್ಮ ನಿರಾಕರಣೆ ಮಾಡಿದುದು ದುರ್ದೈವದ ಸಂಗತಿ. ಕರ್ಮ ಬ್ರಹ್ಮಗಳಿಗೆ ವಿರೋಧವಿದ್ದಂತೆ, ಎಲ್ಲಿಯೂ ವೇದ ತಿಳಿಸಿಲ್ಲ. ವ್ಯಾಸರು ಬ್ರಹ್ಮಸೂತ್ರ ಗಳನ್ನು ತಾವು ರಚಿಸಿ, ಬ್ರಹ್ಮಾರಾಧನ ರೂಪವಾದ ಕರ್ಮಗಳಿಗೆ ಸೂತ್ರವನ್ನು ರಚಿಸುವಂತೆ ತಮ್ಮ ಪ್ರಧಾನ ಶಿಷ್ಯರಾದ ಜೈಮಿನಿ ಮಹರ್ಷಿಗಳಿಗೆ ಆಜ್ಞಾಪಿಸಿ ದುದರಿಂದ ಪೂರ್ವ ಮೀಮಾಂಸಾ ಸೂತ್ರಗಳು ಉದಿಸಿದವು. ಇದೇ ಪರಂ ಪರೆಯಲ್ಲಿ ಜೈಮಿನಿಗಳಾದ ಮೇಲೆ ಬಂದ ಬೋಧಾಯನ ಮಹರ್ಷಿಗಳೂ ಸಹ ಪೂರ್ವೋತ್ತರಮೀಮಾಂಸಾ ಶಾಸ್ತ್ರಗಳನ್ನು ಒಂದೇ ಶಾಸ್ತ್ರವೆಂದೂ ಪರಿಗಣಿ ಸಿದುದಲ್ಲದೆ ವಿಸ್ತಾರವಾದ ವೃತ್ತಿಯನ್ನೂ ಬರೆದುದಾಗಿಯೂ, ಇದನ್ನು ಸಂಕ್ಷೇಪಿಸಿ ವಿವರಿಸಿದ, ಟಂಕ, ದ್ರಮಿಡ, ಗುಹಾದೇವ, ಭಾರುಚಿ ಮೊದಲಾದ ವರ ರೀತಿಯನ್ನು ತಾವೂ ಅನುಸರಿಸುತ್ತಿರುವದಾಗಿಯೂ ಶ್ರೀ ರಾಮಾನುಜಾ

ಚಾರ್ಯರು ತಮ್ಮ ಶ್ರೀಭಾಷ್ಯದ ಆರಂಭದಲ್ಲಿ ಪ್ರಸ್ತಾಪಿಸಿ, ಬೋಧಾಯನ ವೃತ್ತಿಯಿಂದ, ಮತ್ತು ಟಂಕ ದ್ರವಿಡಾದಿಗಳಿಂದ ಅನೇಕ ವಾಕ್ಯಗಳನ್ನು ಉದಾಹರಿಸಿದ್ದಾರೆ, ಹೀಗೆ ಸಾಕಲ್ಯಾರ್ಥವಾಗಿ ವೇದ ಪ್ರಯೋಜನವನ್ನು ಯಜ್ಞರೂಪ ಅನುಷ್ಠಾನವನ್ನಾಗಿಯೂ, ಆಧ್ಯಾತ್ಮಿಕಾರ್ಥಜಿಜ್ಞಾಸಾರೂಪ ವಾದ ವೇದಾಂತವನ್ನಾಗಿಯೂ ಪರಿಗ್ರಹಿಸಬೇಕೇ ಹೊರತು ಕಾಂಡಗಳ ಗೊಂದಲದಲ್ಲಿ ಸಿಕ್ಕಿ ಹಾಕಿಕೊಂಡರೆ ಬ್ರಹ್ಮನಿರಾಕರಣವೋ, ಕರ್ಮನಿರಾ ಕರಣವೋ ಆಗುವದರಲ್ಲಿ ಸಂದೇಹವಿಲ್ಲ. ಇದು ಅಶಾಸ್ತ್ರೀಯವಾದುದರಿಂದ ಹಿಂದೆ ಹೇಳಿದಂತೆ, ಪುನರ್ವಿಮರ್ಶಿಸಬೇಕಾಗಿದೆ, ಅಲ್ಲದೇ ವೇದಗಳಲ್ಲಿ ಬರುವ ಕಥೆಗಳೆಲ್ಲವೂ ಸಹ ಮೇಲು ನೋಟಕ್ಕೆ ಒಂದರ್ಥವನ್ನೂ ಒಳಗೆ ಸಾಂಕೇತಿಕ ಸ್ವರೂಪದ ಗಹನ ಅರ್ಥವನ್ನೂ ಹೊಂದಿವೆ. ( ಮುಂದೆ ಗ್ರಂಥ ಶರೀರದಲ್ಲಿ ಬರುವ ಗರುಡನ ಕಥೆಯನ್ನು ನೋಡಿ ).

ದೇವತೆಗಳ ಸ್ವರೂಪದಲ್ಲಿಯೂ ಸಾಂಕೇತಿಕ ಅರ್ಥವಿದೆ. ಉದಾಹರಣೆಗೆ ಅಗ್ನಿಗೆ ನಾಲ್ಕು ಕೊಂಬುಗಳೆಂದೂ, ಮೂರು ಕಾಲುಗಳೆಂದೂ, ಎರಡು ತಲೆ ಗಳೆಂದೂ, ಏಳು ಕೈಗಳೆಂದೂ, ಇವನನ್ನು ಮೂರು ಹಗ್ಗಗಳಿಂದ ಕಟ್ಟಿ ಹಾಕಲಾಗಿದೆಯೆಂದೂ ಆದ್ದರಿಂದ ವೃಷಭದಂತೆ ಸರ್ವದಾ ಅಬ್ಬರಿಸುತ್ತಿರುವ ನೆಂದೂ ವೇದದಲ್ಲಿ ವರ್ಣಿಸಲಾಗಿದೆ. ಇದರಲ್ಲಿ ವಾಚ್ಯಾರ್ಥವನ್ನೇ ಗಮನಿಸುವ ಮೂಢನು, ಇಂತಹ ಪ್ರಾಣಿಯನ್ನು ಎಲ್ಲಿಯಾದರೂ ಹೊರಗಣ್ಣಿನಿಂದ ಕಾಣುವುದು ಶಕ್ಯವೇ, ಎಂಬುದನ್ನು ತಾನೇ ವಿವೇಚಿಸಬೇಕು. ( ಈ ವಿಷಯ ವನ್ನೂ, ಮಿತ್ರಿತರ ದೇವತೆಗಳ ಪರಿಚಯವನ್ನೂ ಮುಂದೆ ಸೂಕ್ತ ಸನ್ನಿವೇಶ ಗಳಲ್ಲಿ ಮಾಡಿಕೊಡಲಾಗುವುದು. ) ಹೀಗೆ ಪೌರಾಣಿಕ ಮತ್ತು ಕಥಾನಕ ಶೈಲಿ ಯಲ್ಲಿಯೂ ವೇದದ ಸಂದೇಶವು ಇರುವುದನ್ನೂ ಮತ್ತು ಇದು ಸ್ಪಷ್ಟವಾದ ತಾತ್ವಿಕ ವೇದ ಭಾಗಗಳಿಗೆ ವಿರುದ್ಧವಲ್ಲವೆಂಬುದನ್ನೂ ಮನಗಾಣಬೇಕು. ಪ್ರಕೃತ ಗ್ರಂಥದಲ್ಲಿ ವೇದ ಶಬ್ದದಿಂದ ಸಮಸ್ತ ವೇದರಾಶಿಯನ್ನೂ ಗ್ರಹಿಸಿ ವೇದಾರ್ಥವೆಂಬುದು ಹೇಗೆ ಸಂಹಿತೆಯಿಂದ ಉಪನಿಷತ್ತುಗಳವರೆಗೆ ವಿವಿಧ ಶೈಲಿಯ ಭಾಷೆಗಳಲ್ಲಿ ವ್ಯಕ್ತ ಪಟ್ಟಿದೆ, ಎಂಬುದನ್ನು ಉದಾಹರಣ ಪೂರ್ವಕ ವಾಗಿ ತೋರಿಸಲು ಪ್ರಯತ್ನಿಸಿದೆ.

ವೇದಗಳಲ್ಲಿ ವೇದೇತರ ಪ್ರಭಾವ ಇದೆಯೆಂದೂ, ಉಪನಿಷತ್ತುಗಳು ಕ್ಷತ್ರಿಯರಿಗೆ ಸೇರಿದ ವಿದ್ಯೆಯಾಗಿದ್ದು, ಬ್ರಾಹ್ಮಣರ "ಯಜ್ಞ" ವಿಧಾನಕ್ಕೆ ಪ್ರತಿಭಟನಾರೂಪ ಗ್ರಂಥಗಳೆಂದೂ ಪಾಶ್ಚಾತ್ಯರು ಭೂತ ಎಬ್ಬಿಸಿರುವುದೂ ಅವರ ದೃಷ್ಟಿ ಯಾವಕಡೆಗಿವೆ ಎಂಬುದನ್ನು ತಿಳಿಸುತ್ತಿದೆ. ಉದಾಹರಣೆಗೆ ಮುಂಡಕೋಪನಿಷತ್ತಿನಲ್ಲಿ ಜೈನಧರ್ಮದ ಪ್ರಭಾವವಿದೆಯೆಂದೂ, ಉಪನಿಷತ್ತಿನ ಹೆಸರಿನಲ್ಲಿರುವ "ಮುಂಡನ" ದ ಸೂಚನೆಯು "ತಲೆಬೋಳಿಸಿಕೊಳ್ಳು" ವ ಅರ್ಥ ಹೊಂದಿ, ಮುಂಡನ ಪ್ರಧಾನವಾದ ನಿರ್ವಾಣರೂಪ ಮೋಕ್ಷವನ್ನು ಬೋಧಿಸುವ ಜೈನಧರ್ಮದ ಪ್ರಭಾವಕ್ಕೆ ಸಾಕ್ಷಿಯಾಗಿದೆಯೆಂದೂ, "ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾಃ" ಇತ್ಯಾದಿ ವಾಕ್ಯಗಳಲ್ಲಿ ಯಜ್ಞ ನಿಂದನೆಮಾಡಿದೆಯೆಂದೂ ಕೆಲವು ಪಾಶ್ಚಾತ್ಯರು ವಾದಿಸಿದ್ದಾರೆ. ಸಂಪ್ರದಾಯದಲ್ಲಿ ತಲೆಬೋಳಿಸಿಕೊಂಡೇ ಈ ಉಪನಿಷತ್ತನ್ನು ಪಠಿಸಬೇಕೆಂದು ಎಲ್ಲಿಯೂ ಹೇಳಿಲ್ಲ ! ತಲೆಬೋಳಿಸಿಕೊಳ್ಳುವುದಕ್ಕೆ ಯಾರ ಅಭ್ಯಂತರವೂ ಇಲ್ಲ. ಇದಕ್ಕಾಗಿ ಉಪನಿಷತ್ತನ್ನೋದುವ ನೆಪವನ್ನು ಇಟ್ಟುಕೊಳ್ಳಬೇಕಾದದ್ದೂ ಇಲ್ಲ. ತಲೆಬೋಳಿಸದೇ ಉಪನಿಷತ್ತನ್ನೋದಬಾರದೆಂಬ ನಿಬಂಧನೆಯೂ ಇಲ್ಲ. ತಲೆಬೋಳಿಸಿಕೊಳ್ಳುವುದು ಜೈನಧರ್ಮದ್ದೇ ವೈಶಿಷ್ಟ್ಯವೂ ಅಲ್ಲ, ಋಷಿಗಳೂ, ದೀಕ್ಷಿತರೂ ಅಲ್ಲದ ವೈದಿಕರೂ ಕ್ಷೌರ ಮಾಡಿಸಿಕೊಳ್ಳುವುದಕ್ಕೆ ಜೈನಧರ್ಮ ಕಾರಣವಲ್ಲ. ಜಗತ್ತಿಗೆ ತಲೆಬೋಳಿಸಿಕೊಳ್ಳುವುದನ್ನು ಜೈನಧರ್ಮವೇ ಕಾಣಿಕೆಯನ್ನಾಗಿತ್ತಿದೆ ಎಂದು ವಾದಿಸುವುದು ಹಾಸ್ಯಾಸ್ಪದವಾದೀತು.

ಇನ್ನು "ಪ್ಲವಾಹ್ಯೇತೇ ಅದೃಢಾಃ ಯಜ್ಞರೂಪಾಃ" ಎಂಬ ಉಪನಿಷದ್ವಾಕ್ಯವು ಯಜ್ಞನಿಂದಾಪರವಾದುದಲ್ಲ. "ಯಜ್ಞದಲ್ಲಿ ಪಶುಹಿಂಸೆಯಾಗುತ್ತದೆ" ಯೆಂಬ ಜೈನಧರ್ಮದ ದೃಷ್ಟಿಯ ಅಹಿಂಸಾ" ಭಾವದ, ವಾದದ, ಹಿನ್ನೆಲೆಯಲ್ಲಿ ಈ ಮಾತು ಬಂದಿಲ್ಲ. "ಅದೃಢಾಃ" ಎಂದರೆ ಭದ್ರವಲ್ಲದ್ದು ಎಂದು ಅರ್ಥವೇ ಹೊರತು, "ತೂತು ಬಿದ್ದಿರುವುದು" (leaky) ಎಂದು ಅನೇಕ ಪಾಶ್ಚಾತ್ಯರು ಭಾಷಾಂತರಿಸಿರುವಂತೆ ಅರ್ಥ ಬರುವುದಿಲ್ಲ. ಅಲ್ಲದೇ ಇದೇ ಉಪನಿಷತ್ತಿನಲ್ಲಿಯೇ ಈ ವಾಕ್ಯವು ಎಲ್ಲಿ ಬರುವುದೋ ಅದೇ ಖಂಡದ ಪ್ರಾರಂಭದಲ್ಲಿ (II-I) :

" ವೇದಮಂತ್ರಗಳಲ್ಲಿ ಮೇಧಾವಿಗಳಾದ ಋಷಿಗಳೇ ಯಾವ ಕರ್ಮಾಚರಣೆಗಳನ್ನು ಕಂಡುಕೊಂಡು ಯಾಜ್ಞಿಕ ಸಂದೇಶಕೊಟ್ಟರೊ, ಅಂಥಾ ಯಜ್ಞಾಚರಣೆಗಳು ವಿಸ್ತಾರವ್ಯಾಪ್ತಿಯನ್ನು ಪಡೆದಿವೆ. ಅವುಗಳನ್ನು ಸತ್ಯಕಾಮರಾದ ನೀವು ನಿಯತವಾಗಿ, ಬಿಡದೇ, ಆಚರಿಸಿ. ಇದು ಸುಕೃತಲೋಕಕ್ಕೆ ಸಾಧನ."

ಎಂದೂ ಹೇಳಿರುವುದನ್ನು ಅನೇಕರು ಏಕೆ ಮರೆತಿದ್ದಾರೋ ತಿಳಿಯದು, ದಡ್ಡನಿಗೆ ಹೇಗೂ ಒಂದು ದಾರಿಯನ್ನು ಹೇಳಿ ತೋರಿಸಲು ಈ ವೇದವಾಕ್ಯ ಪ್ರವರ್ತಿಸಿಲ್ಲ. ಏಕೆಂದರೆ ನಿತ್ಯನೈಮಿತ್ತಿಕಗಳಾದ ಯಜ್ಞಗಳನ್ನು ಮಾಡದವನನ್ನು ( ಅವನು ಯಾರೇ ಆಗಿರಲಿ ) ಮುಂದಿನ ಮಂತ್ರಗಳಲ್ಲಿ ನಿಂದಿಸಲಾಗಿದೆ. ಅಲ್ಲದೆ ವೇದೋಕ್ತ ಕರ್ಮಾಚರಣೆಯನ್ನು ಮಾಡುವವನು ಅರ್ಚಿರಾದಿಮಾರ್ಗದಲ್ಲಿ ಭಗವಂತನ ಸಾನ್ನಿಧ್ಯವನ್ನು ( " ಯತ್ರದೇವನಾಂ ಪತಿರೇಕೋಽಧಿವಾಸಃ") ಸೇರುತ್ತಾನೆ, ಎಂದು ವರ್ಣಿಸಿದೆ. ಇದೇ ಉಪನಿಷತ್ತಿನ ಕೊನೆಯಲ್ಲಿ

> ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ
> ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯಂತಃ।
> ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ
> ಶಿರೋವ್ರತಂ ವಿಧಿವತ್ ಯೈಸ್ತು ಚೀರ್ಣಂ ॥ "

ಎಂದರೆ " ಯಾವನು ನಿತ್ಯನೈಮಿತ್ತಿಕ ಕರ್ಮಾಚರಣೆಗಳನ್ನು ಸಂಗರಹಿತನಾಗಿ ಆಚರಣೆ ಮಾಡುವುದರ ಮೂಲಕ ಕ್ರಿಯಾವಂತನೂ, ಶ್ರೋತ್ರಿಯನೂ, ಬ್ರಹ್ಮನಿಷ್ಠನೂ ಆಗಿ, ಸ್ವಯಂ ಸಮಸ್ತಯಜ್ಞಸ್ವರೂಪನೂ ಏಕರ್ಷಿಯೂ ಆದ ಪರಮಾತ್ಮನನ್ನು ಕುರಿತು ಹೋಮ ಮಾಡುವವನೋ, ಇಂತಹ ಅಗ್ನಿಯನ್ನು ತಲೆಯ ಮೇಲೆ ಹೊತ್ತು ವಿಧಿವತ್ತಾಗಿ ಶಿರೋವ್ರತವನ್ನು ಆಚರಿಸುವನೋ, ಅಂತಹವನು ಮಾತ್ರ ಇಲ್ಲಿ ಉಪದೇಶ ಮಾಡಿದ ಬ್ರಹ್ಮವಿದ್ಯೆಗೆ ಪಾತ್ರನಾದಿರುವನು. ಅವನಿಗೆ ಮಾತ್ರ ಇದನ್ನು ಹೇಳಬೇಕು."

ಎಂದು ಪ್ರಾಚೀನ ಋಕ್ಕಿನಂತೆ ವಿಧಿಸಿದೆ. ಕರ್ಮ ಬ್ರಹ್ಮವಿರೋಧದ ಪ್ರಸ್ತಾಪವೇ ಇಲ್ಲಿಲ್ಲದುದು ಅಷ್ಟೇ ಅಲ್ಲದೆ ಸಮನ್ವಯವನ್ನೇ ಬೋಧಿಸಿರುವುದನ್ನು ಗಮನಿಸಬೇಕಾಗಿದೆ. ಪರಮಾತ್ಮನನ್ನೇ "ಏಕರ್ಷಿ" ಯೆಂದೂ ಸಂಬೋ

ಧಿಸಿ, ಯಜ್ಞೇಶ್ವರನೆಂಬ ಅರ್ಥದಲ್ಲಿ ಕರೆದಿರುವುದರಿಂದ ಈ "ಅಗ್ನಿ"ಯನ್ನು ತಲೆಯ ಮೇಲೆ ಧರಿಸುವ ಶಿರೋವ್ರತಸ್ಥನಿಗೇ ಪ್ರಾಶಸ್ತ್ಯ ಹೇಳಿರುವುದರಿಂದ, ಈ ಉಪನಿಷತ್ತಿನಲ್ಲಿ ಎಲ್ಲಿಯಾದರೂ "ಯಜ್ಞನಿಂದೆ"ಯ ಧ್ವನಿಯನ್ನು ಕಾಣುವವರು ಉಪನಿಷತ್ತಿನ ನೇರಸಂದೇಶಕ್ಕೆ ವಿರೋಧವಾಗಿ ಅರ್ಥ ಮಾಡಿದಂತಾಗುವುದು.

"ಅದೃಢಾಃ" ಎಂದು ಏತಕ್ಕಾಗಿ ಹೇಳಿದರೆಂದರೆ, ಈ ಯಜ್ಞಗಳನ್ನು ಭಗವತ್ಪರವಾಗಿ ಆಚರಿಸುವುದರ ಬದಲು, ಕಾಮ್ಯಕರ್ಮಗಳನ್ನಾಗಿ ಆಚರಿಸಿದ ಪಕ್ಷದಲ್ಲಿ ಅನರ್ಥವಾಗಬಹುದೆಂಬ ಭಯದಿಂದ. (ವಾಯುರ್ನಾವಮಿ-ವಾಂಭಸಿ-ಗೀತಾ). ಅಲ್ಲದೇ, ಇತರ ಉಪನಿಷತ್ತುಗಳಲ್ಲಿಯೂ "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಗಂ ಸಮಾಃ", ( ಈಶ ), ಎಂದು ಮನುಷ್ಯನು ಯಜ್ಞಾದಿ ಕರ್ಮಗಳನ್ನು ಆಚರಿಸುತ್ತಲೇ ನೂರುವರ್ಷ ಬಾಳಲು ಇಚ್ಛಿಸಬೇಕೆಂದು ವಿಧಿಸಿರುವುದರಿಂದ ಇದು ಉಪನಿಷನ್ಮತಕ್ಕೆ ವಿರುದ್ಧವಲ್ಲದ್ದು ಅಷ್ಟೇ ಅಲ್ಲದೆ ಇದನ್ನು ಉಲ್ಲಂಘಿಸುವುದು ವೇದ ವಿರುದ್ಧವಾದೀತು. ಏನೇ ಸಂದೇಹಗಳು ಉಂಟಾದರೂ ಅವುಗಳನ್ನು ಬ್ರಹ್ಮಸೂತ್ರಕ್ಕೆ ಅನುಗುಣವಾಗಿಯೇ ನಿಶ್ಚಯಿಸ ಬೇಕಾದದ್ದು ಇದೆ ವ್ಯಾಸರು ಬ್ರಹ್ಮವಿದ್ಯಾಂಗವಾದ ಕರ್ಮಾಚರಣೆಗಳನ್ನು ಮನುಷ್ಯನು ಸಾಯುವವರೆಗೂ ಮಾಡಬೇಕೆಂದು "ಅಪ್ರಯಾಣಾತ್ ತತ್ರಾಪಿ ಹಿ ದೃಷ್ಟಂ॥"(IV-1-12 ) ಎಂಬ ಸೂತ್ರದಲ್ಲಿಯೂ ಹೇಳಿದ್ದಾರೆ. ಇದನ್ನು ನಿತ್ಯವೂ ಆವೃತ್ತಿ ಮಾಡುತ್ತಲೇ ಇರಬೇಕೆಂದೂ, "ಆವೃತ್ತಿಃ ಅಸಕೃದುಪದೇಶಾತ್" (IV-1-1) ಎಂಬ ಸೂತ್ರದಲ್ಲಿಯೂ ಹೇಳಿದ್ದಾರೆ. ಯಜ್ಞಾದಿಕರ್ಮಗಳೂ ಬ್ರಹ್ಮವಿದ್ಯೆಗೆ ಕಾರಣವೆಂದೂ ಆದ್ದರಿಂದ ಇವುಗಳನ್ನು ಆಶ್ರಯಿಸಿಯೇ, "ದೂರ ಪ್ರಯಾಣ ಮಾಡುವವನು ಕುದುರೆಯನ್ನು ಆಶ್ರಯಿಸಿ ಹೋಗುವಂತೆ ಆಚರಿಸಬೇಕೆಂ"ದೂ "ಸರ್ವಾಪೇಕ್ಷಾ ಚ ಯಜ್ಞಾದಿ ಶ್ರುತೇಃ ಅಶ್ವವತ್॥" (III-4-26) ಎಂಬಲ್ಲಿಯೂ ಹೇಳಿದ್ದಾರೆ. "ಯಾವಜ್ಜೀವಂ ಅಗ್ನಿಹೋತ್ರಂ ಜುಹೋತಿ", "ತಮೇತಂ ವೇದಾನುವಚನೇನ ಬ್ರಾಹ್ಮಣಾಃ ವಿವಿದಿಷಂತಿ, ಯಜ್ಞೇನ, ದಾನೇನ, ತಪಸಾ ಅನಾಶಕೇನ", ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಮುಮುಕ್ಷುವೂ, ಯಜ್ಞಾದಿಗಳನ್ನು ಬ್ರಹ್ಮವಿದ್ಯಾಂಗವಾದಿ

ತನ್ನ ಅಂತ್ಯ ಕಾಲದವರೆಗೂ ಮಾಡಬೇಕೆಂಬುದು ಸಕಲ ಆಶ್ರಮಿಗಳಿಗೂ ಹೇಳಿದುದೆಂದು "ವಿಹಿತತ್ವಾಚ್ಚ, ಆಶ್ರಮಕರ್ಮಾಪಿ" (III-4-32) ಎಂಬ ಸೂತ್ರದಲ್ಲಿಯೂ ಹೇಳಿದ್ದಾರೆ. ಆದರಿಂದ ವೇದಗಳಲ್ಲಿ ಎಲ್ಲಿಯೂ ವೇದಕರ್ಮ ಪ್ರತಿಷೇಧ ರೂಪವಾದ, ಅಪಸ್ವರದ ಧ್ವನಿಯಾಗಲೀ ವೇದೇತರ ಪ್ರಭಾವದ ಅವಕಾಶವಾಗಲೀ ಇಲ್ಲ.

ಆದರೆ ವೇದೇತರ ಮತಗಳು ಯಾವಾಗ, ಉದಿಸಿದುವು ? ಈ ವೇದ ವಿಚಾರಗಳ ಸಮಕಾಲದಲ್ಲಿಯೇ ಅವು ಇದ್ದಿರಬಹುದಾದ ಸಾಧ್ಯತೆ ಇಲ್ಲವೇ ? ಎಂದು ಕೇಳಿದರೆ, ಇದು, ಮತ್ತೊಂದು ವಿಚಾರ. ವೇದವಿದ್ಯಾ ಬೆಳವಣಿಗೆಯ ಎಲ್ಲ ಮೆಟ್ಟಲುಗಳಿಗೂ ಪ್ರತಿಯಾಗಿ ವೇದವಿರುದ್ಧ ವಿಚಾರಗಳು ಇದ್ದಿರಬಹುದು, ಇಲ್ಲದೆಯೂ ಇರಬಹುದು, ಅವುಗಳೆಲ್ಲವೂ ವೇದದಲ್ಲಿ ಪ್ರತಿಬಿಂಬಿಸಲ್ಪಡಬೇಕಾದ ಅವಶ್ಯಕತೆಯಿಲ್ಲ, ಉದಾಹರಣೆಗೆ, ಜಗತ್ತು ಸೃಷ್ಟಿಯೇ ಆಗಿಲ್ಲವೆಂಬವಾದವಾಗಲೀ, ದೇವರೇ ಇಲ್ಲವೆಂಬ ವಾದವಾಗಲೀ, ಜಡಪ್ರಕೃತಿಯೇ ಜಗತ್ತಿನ ಸಮಸ್ತ ಮೂಲ ಕಾರಣವೆಂಬುದಾಗಲೀ, ಎಷ್ಟು ಹಳೆಯುದೆಂಬುದನ್ನು ನಿರ್ಣಯಿಸವುದು ಕಷ್ಟ. ಈ ದುರ್ವಾದಗಳು ವೇದದ ಹೆಸರಿನಲ್ಲಿಯೇ ಅಪಪ್ರಚಾರ ರೂಪವಾಗಿ ಅಲ್ಲಲ್ಲಿ ಬಂದಾಗ ಮಾತ್ರ ವೇದಗಳಲ್ಲಿ ಇವುಗಳನ್ನು ಪ್ರಸ್ತಾಪಿಸುವ ಮತ್ತು ಖಂಡಿಸುವ ಪ್ರಯತ್ನಗಳು ಇರಬಹುದಾದ ಸಾಧ್ಯತೆಯಿದೆ. ಉದಾಹರಣೆಗೆ ಸಾಂಖ್ಯ ಮತದ "ಪ್ರಧಾನ" ವಾದವೂ, ಚಾರ್ವಾಕರ ಶರೀರವೇ ಆತ್ಮ ಎಂಬವಾದವೂ ಛಾಂದೋಗ್ಯ ಉಪನಿಷತ್ತಿನಲ್ಲಿ ಸದ್‌ವಿದ್ಯಾ ಪ್ರಕರಣದಲ್ಲಿಯೂ, ಇಂದ್ರ ವಿರೋಚನ ಉಪಾಖ್ಯಾನದಲ್ಲಿಯೂ, ಪ್ರಸ್ತಾಪಿಸಲ್ಪಡುತ್ತವೆ. ಇಲ್ಲಿಯೂ, ಇವು ಪೂರ್ವ ಪಕ್ಷದಲ್ಲಿಯೇ ಹೊರತು ವೇದದ ಪ್ರಧಾನ ವಿಚಾರಧಾರೆಯಾಗಿ ಜೀರ್ಣವಾದಂತೆಯಾಗಲೀ, ಅಥವಾ ಹಳೆಯ ವಿಚಾರಕ್ಕೆ ಬದಲು, ಹೊಸದಾಗಿ ಮಂಡಿಸಲ್ಪಟ್ಟಂತೆಯಾಗಲೀ, ಎಲ್ಲಿಯೂ ಬಂದಿಲ್ಲವಾದುದರಿಂದ ವೇದೇತರ ತತ್ತ್ವ ವಿಚಾರವನ್ನು ವೇದದಲ್ಲಿಯೇ ಪ್ರತಿಷ್ಠಿಸಲು ಪ್ರಯತ್ನಿಸುವ, ಪಾಶ್ಚಾತ್ಯರ ಪ್ರಯತ್ನವನ್ನು ಕುತಂತ್ರವೆಂದು ಕರೆಯದೆ ವಿಧಿಯಿಲ್ಲದಾಗಿದೆ.

ಇನ್ನು ಬ್ರಾಹ್ಮಣ ಕ್ಷತ್ರಿಯರ ವೈಚಾರಿಕ, ತಾಕಲಾಟ ಉಪನಿಷತ್ ತತ್ವ ಧಾರೆಯಲ್ಲಿ ಕಾಣುತ್ತದೆಂಬ ವಾದವೂ, ಹೀಗೆಯೇ ನಿರಾಧಾರವಾದುದು. ಇದೇ ಗ್ರಂಥದಲ್ಲಿ ಚರ್ಚಿಸಲಾಗುವ ಪ್ರವಾಹಣ ಜೈವಲಿಯು ಪಂಚಾಗ್ನಿ ವಿದ್ಯೆಯೇನೋ ಇಲ್ಲಿ ಬ್ರಾಹ್ಮಣನಿಗೆ ಕ್ಷತ್ರಿಯನಿಂದ ಉಪದೇಶಿಸಲ್ಪಟ್ಟಿರುವುದು ನಿಜ. ಆದರೆ ಕ್ಷತ್ರಿಯನು ಅಬ್ರಾಹ್ಮಣನಾಗಿರಲಿಲ್ಲ. ಮತ್ತು ಬ್ರಾಹ್ಮಣ ವಿರೋಧಿಯೂ ಆಗಿರಲಿಲ್ಲ.

ಶ್ರದ್ಧಧಾನಃ ಶುಭಾಂ ವಿದ್ಯಾಂ ಆದದೀತ ಅವರಾದಪಿ ।
ಅನ್ತ್ಯಾದಪಿ ಪರಂಧರ್ಮಂ ಸ್ತ್ರೀರತ್ನಂ ದುಷ್ಕುಲಾದಪಿ ॥
(ಮನು II-238)

ಎಂಬ ಮನುಸ್ಮೃತಿವಚನದಂತೆ, ಶ್ರದ್ಧಾಯುಕ್ತನಾದವನು ಶುಭವಾದ ವಿದ್ಯೆಯನ್ನು ತನ್ನ ಕೆಳಗಿನ ವರ್ಣದವನಿಂದಾದರೂ, ಮೋಕ್ಷೋಪಾಯವಾದ ಆತ್ಮಜ್ಞಾನವನ್ನು (ಪರಂ 'ಧರ್ಮ' —ಎಂಬುದಕ್ಕೆ ಇದು ಕುಲ್ಲೂಕ ಭಟ್ಟರ ವ್ಯಾಖ್ಯಾನ) ಅಂತ್ಯವರ್ಣದವನಿಂದಲಾದರೂ, ಪಡೆಯಬಹುದೆಂದು, ಆರ್ಷವಾದ ವಿಶೇಷ ಅವಕಾಶವಿದೆ, ಮನುವಚನವೆಂದರೆ "ಯನ್ಮನುರವದತ್ ತದ್ಭೇಷಜಂ ಭೇಷಜತಾಯಾಃ " ಎಂಬ ಶ್ರುತಿ ವಾಕ್ಯದಂತೆ, ಮನುಸಂಮ್ಮತವಾದ ಆಚಾರವು ಶಿಷ್ಟಾಚಾರವೂ ಸಂಪ್ರದಾಯ ಪರಿಗೃಹೀತವೂ ಆದುದರಿಂದ, ಮನುವಚನವನ್ನು ವೇದವಿರುದ್ಧವಾಗಿ ಬಳಸಲು ಅವಕಾಶವಿಲ್ಲ. ಹೀಗೆ ಉತ್ತಮವಾದ ವಿದ್ಯೆಯನ್ನು ಯಾವನಿಂದಲಾದರೂ ಪಡೆಯಬಹುದೆಂಬ ಮನುಸ್ಮೃತಿಯ ಆದೇಶವು, ಮನುವಿಗೆ ಹಿಂದಿನ ಸನಾತನಕಾಲದಿಂದಲೂ ನಡೆದುಕೊಂಡು ಬಂದಿದ್ದು, ಮನುವಿನಿಂದ ಕ್ರೋಢೀಕರಿಲ್ಪಟ್ಟುದೇ ಆಗಿದೆ.

ಆದರೆ ಎಲ್ಲ ಬ್ರಾಹ್ಮಣರೂ, ಎಲ್ಲ ಕ್ಷತ್ರಿಯರಿಗಿಂತಲೂ ಉತ್ತಮ ಜ್ಞಾನವುಳ್ಳವರಾಗಿದ್ದರು ಎಂದಾಗಲೀ, ಕ್ಷತ್ರಿಯರು ಅಸೂಯೆಯಿಂದ ತಮ್ಮ ತಮ್ಮಲ್ಲಿರಬಹುದಾದ ವಿದ್ಯೆಯನ್ನು ಬ್ರಾಹ್ಮಣರಿಗೆ ಕೊಡಲು ಇಚ್ಛಿಸುತ್ತಿರಲಿಲ್ಲವೆಂದಾಗಲೀ ಈ ಪ್ರಕರಣದಿಂದಲೂ, ಅಥವಾ ಮತ್ತೆ ಯಾವ ಪ್ರಕರಣದಿಂದಲೂ ಸಿದ್ಧಪಡುವುದಿಲ್ಲ. ಪ್ರವಾಹಣನು ಗೌತಮನಿಗೆ ಉಪದೇಶ

ಕೊಡಲು ಸಂಕೋಚದಿಂದ ಹಿಂಜರಿಯುತ್ತಾನೆಯೇ ಹೊರತು ಅಸೂಯೆಯಿಂದ ಅಲ್ಲ, ಎಂದು ಉಪನಿಷತ್ತಿನ ಸರಿಯಾದ ಹಿನ್ನೆಲೆ ಇರುವಂತಿದೆ. ಆದುರಿದಂದ, ಬ್ರಾಹ್ಮಣ-ಕ್ಷತ್ರಿಯ ತಾಕಲಾಟಕ್ಕೆ ಅವಕಾಶವಿಲ್ಲ. ವಸಿಷ್ಠ-ವಿಶ್ವಾಮಿತ್ರರಲ್ಲಿ ಯಾವುದೋ ವೈಯಕ್ತಿಕ ವೈರದ ನಿಮಿತ್ತ ತಾಕಲಾಟವಿದ್ದ ಮಾತ್ರಕ್ಕೆ ಎಲ್ಲ ಬ್ರಾಹ್ಮಣರಿಗೂ, ಮತ್ತು ಎಲ್ಲ ಕ್ಷತ್ರಿಯರಿಗೂ, ಸಹಸ್ರಾರು ವರ್ಷಗಳವರೆಗೆ ತಾಕಲಾಟವಿತ್ತೆಂದು ಬಗೆಯುವುದು ಅವಿವೇಕವೋ ಹುಚ್ಚೋ ಆದೀತು, ಹಾಗಾಗಿದ್ದಿದ್ದರೆ ಜನಕರಾಜನು ಬ್ರಹ್ಮವಾದಿಗಳ ಸಭೆಯನ್ನು ಏರ್ಪಡಿಸುತ್ತಿದ್ದು, ಬ್ರಾಹ್ಮಣರನ್ನು ಗೌರವಿಸುತ್ತಿದ್ದನೇಕೆ ? ಯಾಜ್ಞವಲ್ಕರ ಶಿಷ್ಯನಾಗುತ್ತಿದ್ದನೇಕೆ ? ಇದೇ ಕಥೆಯಲ್ಲಿ, ಅನೇಕ ಬ್ರಾಹ್ಮಣರೇ ಯಾಜ್ಞವಲ್ಕರಿಗಿಂತ ಬ್ರಹ್ಮಜ್ಞಾನದಲ್ಲಿ ಅನಧಿಕರಾಗಿದ್ದರೆಂದೂ ತಿಳಿದು ಬರುವಂತೆಯೇ ಪ್ರವಾಹಣನ ಕಥೆಯಲ್ಲಿಊ ಬ್ರಹ್ಮವಿದ್ಯೆಗಾಗಿ ಬ್ರಾಹ್ಮಣ, ಕ್ಷತ್ರಿಯರೆಂಬ ಭೇದವಿಲ್ಲದ. (ಯಾಜ್ಞವಲ್ಕರ ಕಥೆಯಲ್ಲಿ ಸ್ತ್ರೀ ಪುರುಷರೆಂಬ ಭೇದವಿಲ್ಲದೇ ) ಜ್ಞಾನದಾಹದಿಂದ ಹಾತೊರೆಯುತ್ತಿದ್ದ ಸಮರಸಭಾವನೆಯ, ಸುವರ್ಣಕಾಲವೊಂದು ಚಿತ್ರಿಸಲ್ಪಟ್ಟಿದೆಯೇ ಹೊರತು, ಬ್ರಹ್ಮ-ಕ್ಷತ್ರಗಳ ತಾಕಲಾಟದ್ದಲ್ಲ.

ಪಾಶ್ಚಾತ್ಯರ ಚರಿತ್ರೆಯಲ್ಲಿ ರಾಜಕೀಯ ಅಧಿಕಾರಕ್ಕಾಗಿ ಧರ್ಮಶಕ್ತಿ, ಧರ್ಮಾತೀತಶಕ್ತಿಗಳಿಗೂ ಆಗಾಗ ನಡೆಯುತ್ತಿದ್ದ ಕಲಹಗಳನ್ನೇ ಮನಸ್ಸಿನಲ್ಲಿಟ್ಟುಕೊಂಡು "ತಾನು ಕಳ್ಳ ಪರರನ್ನು ನಂಬ" ಎಂಬಂತೆ ನಮ್ಮ ದೇಶದಲ್ಲಿಯೂ ಪ್ರಾಚೀನಕಾಲದಲ್ಲಿ ಹೀಗೆಯೇ ಆಗಿರಬೇಕೆಂದು ಪಾಶ್ಚಾತ್ಯರು ಸಂಶಯ ಪಡುವುದು ಅವರ ಮನಸ್ಸಿನ ಸಂಕುಚಿತತೆಗೆ ನಿದರ್ಶನವಾಗಿದೆ, ಹೀಗೆ ವೇದಗಳಲ್ಲಿ ವರ್ಣಕಲಹದ ಪ್ರಶ್ನೆಗೆ ಅವಕಾಶವೇ ಇಲ್ಲ.

ಇನ್ನು ಆರ್ಯ-ದ್ರಾವಿಡ ವಿಚಾರವೂ ಹೀಗೆಯೇ. ಆರ್ಯ ಶಬ್ದಕ್ಕೆ ಸಾಂಸ್ಕೃತಿಕ ಅರ್ಥ ವ್ಯಾಪ್ತಿ ಇದೆಯೇ ಹೊರತು ಜನಾಂಗವೆಂಬ ಅರ್ಥವಲ್ಲ ಎಂಬುದು ಈಗಿನ ಅನೇಕ ವಿದ್ವಾಂಸರ ಸರಿಯಾದ ಮತ. 'ದಸ್ಯು' ಶಬ್ದವು ಅನಾರ್ಯ ಎನ್ನುವ ಅರ್ಥದಲ್ಲಿ ಬಳಸಲ್ಪಟ್ಟಿರುತ್ತದೆ. ರಕ್ತ ಸಂಬಂಧದಿಂದ ಒಂದಾದಿ "ಆರ್ಯ"ರಾದಿದ್ದವರೂ ಸಂಸ್ಕೃತಿಯಲ್ಲಿ ವಿಭಿನ್ನರಾಗಿ ಆದುದರಿಂದ ಪರಸ್ಪರ ಆರ್ಯ-ಅನಾರ್ಯರಾಗಿ ಇರುತ್ತಿದ್ದುದು ಸರ್ವಸಾಧಾರಣವಾಗಿತ್ತು.

ಇದು ವೇದದಿಂದ ಹಿಡಿದು ಇತಿಹಾಸ– ಪುರಾಣ ಕಾಲದವರೆಗೂ, ಅಲ್ಲಿಂದ ಈ ದಿನದವರೆಗೂ, ನಡೆದು ಬಂದ ವಿಷಯ. ಈಗ " ದ್ರಾವಿಡ " ನೆಂದು ಪಾಶ್ಚಾತ್ಯರಿಂದ ಭಾವಿಸಲ್ಪಡುವ ರಾವಣನು ಜಾತಿಯಲ್ಲಿ ಬ್ರಾಹ್ಮಣನಾಗಿದ್ದು ತನ್ನನ್ನು "ಆರ್ಯ" ನೆಂದು ಭಾವಿಸಿಕೊಂಡು ತನಗೆ ವಿರುದ್ಧ ಸಂಸ್ಕಾರ ಸಂಪನ್ನನಾದ ವಿಭೀಷಣನನ್ನು "ಅನಾರ್ಯ" ನೆಂದು ಧಿಕ್ಕರಿಸಿ ಆಡಿದ ವಿಷಯ ತು ಗಳು ರಾಮಾಯಣದಲ್ಲಿವೆ. ದಶರಥನು ತನ್ನ ಪತ್ನಿಯಾದ ಕೈಕೇಯಿಯನ್ನು "ಅನಾರ್ಯೆ" ಎಂದು ಬಯ್ಯುತ್ತಾನೆ ರಾಮಾಯಣದಲ್ಲಿ "ದ್ರಾವಿಡ" ಎಂಬ ಶಬ್ದವೇ ಇಲ್ಲ. ವೇದದಲ್ಲೂ ಇಲ್ಲ. ಈ ವಿಶಯಗಳು ಪಾಶ್ಚಾತ್ಯರ ಕಣ್ಣಿಗೆ ಏಕೆ ಕಾಣಿಸಲಿಲ್ಲವೋ ತಿಳಿಯದು. ವೇದದಲ್ಲಿಯ ದಾಸ ಅಥವಾ ದಸ್ಯು ಶಬ್ದವು "ಅಸಂಸ್ಕೃತ" ಮತ್ತು "ಅಸ್ವತಂತ್ರ" ಎಂಬ ಅರ್ಥದಲ್ಲಿ ಬಂದಿರುವುದನ್ನು ಮನ ಗಾಣಬೇಕು. ಸಂಸ್ಕೃತಿಯ ಮೂಲಕ ಮಾತ್ರ ಮನುಷ್ಯನು ಸ್ವತಂತ್ರನಾಗ ಬಲ್ಲನು ಎಂಬ ವಿಚಾರ ಧಾರೆ (ಸನತ್ಕುಮಾರರ ಉಪದೇಶವನ್ನು ನೋಡಿ) ವೇದದಲ್ಲಿ ಬಹುಮುಖ್ಯವಾದದ್ದು. ಮೋಕ್ಷವನ್ನೇ ಈ ಪರಮ ಸ್ವಾತಂತ್ರ್ಯ ವೆಂಬುದಾಗಿ ಶ್ರುತಿಯು ಅನೇಕ ಕಡೆಗಳಲ್ಲಿ ವರ್ಣಿಸಿದೆ. "ಆಪ್ನೋತಿ ಸ್ವಾ ರಾಜ್ಯಂ" ಎಂಬ ತೈತ್ತಿರೀಯ ಶ್ರುತಿವಾಕ್ಯವನ್ನೂ ''ಸಸ್ವರಾಡ್ ಭವತಿ" ಇತ್ಯಾದಿ ವಿಪುಲ ವೇದವಾಕ್ಯಗಳನ್ನೂ ಗಮನಿಸಿದರೆ, "ಆರ್ಯ" ಶಬ್ದಕ್ಕೂ ''ಸ್ವರಾಜ್ಯ" ಕಲ್ಪನೆಗೂ ಇರುವ ಸಂಬಂಧ ತಿಳಿದು, ಈ ಸಂಸ್ಕಾರ ಹೊಂದ ದವನನ್ನು (ರಕ್ತದಿಂದ ಸಂಬಂಧ ಪಟ್ಟವನಾಗಿದ್ದಾಗ್ಯೂ) ಅನಾರ್ಯನೆಂದೋ ದಸ್ಯು ಎಂದೋ ಕರೆದಿರುವುದರಲ್ಲಿ ದೋಷ ಕಾಣಲಾರದು. ಶುನಶ್ಶೇಫನ ಕಥೆಯಲ್ಲಿ ಬರುವ ಅಜೀಗರ್ತನಂತಹ ಸಂಸ್ಕಾರಶೂನ್ಯ ಬ್ರಾಹ್ಮಣರು ವ್ರಾತ್ಯರು ಅಲ್ಲಲ್ಲಿ ಇದ್ದದ್ದು ವೇದದಿಂದಲೇ ತಿಳಿದು ಬರುತ್ತದೆ. ವೇದ ವ್ರತ ಭ್ರಾಷ್ಟರನ್ನು, ವೇದಸಂಸ್ಕಾರ ವಿರೋಧಿಗಳನ್ನು, " ವ್ರಾತ್ಯ "ರೆಂದು ಕರೆ ದಿರುವುದು ಎದ್ದು ಕಾಣುತ್ತದೆ. ಇವರನ್ನೂ ಶುದ್ಧೀಕರಿಸಲು ಪ್ರಯತ್ನ ನಡೆದುದಾಗಿಯೂ ಸಹ ತಿಳಿದು ಬರುತ್ತದೆ ಆದರಿಂದ ಈ ಎಲ್ಲ ಸಮಸ್ಯೆ ಗಳನ್ನೂ ಪರಕೀಯರ ದೃಷ್ಟಿ ಕೋನದಿಂದ ನೋಡದೇ ವೇದದ ಹಿನ್ನೆಲೆ ಯಲ್ಲಿಯೇ ನೋಡಬೇಕಾದುದು ಅವಶ್ಯ.

ವೇದಗಳಲ್ಲಿ ಚಾರಿತ್ರಿಕಾಂಶಗಳು, ಸಾಮಾಜಿಕಾಂಶಗಳು ಅಲ್ಲಲ್ಲಿ ಬಂದಿದ್ದರೂ, ಅವು ತಮ್ಮಷ್ಟಕ್ಕೆ ತಾವೇ ಈಗಿನ ಐತಿಹಾಸಿಕ ಸಾಮಾಜಿಕ ದೃಷ್ಟಿಗಳಿಂದ ಬಂದುವಲ್ಲ. ವೇದವು ಚರಿತ್ರೆ ಎಂಬ ರೂಪದಲ್ಲಿ ಬರೆಯಲಿಟ್ಟಿಲ್ಲ. ಚಾರಿತ್ರಿಕಾಂಶಗಳಲ್ಲಿ ಧಾರ್ಮಿಕ ಮತ್ತು ಆಧ್ಯಾತ್ಮಿಕ ಅಂಶಗಳನ್ನು ಕುರಿತು ಮತ್ತು ಅವುಗಳ ಮೂಲಕ ನಿತ್ಯವಾದ ಜೀವನದ ಸತ್ಯವನ್ನು ಸಾಂಕೇತಿಕ ಭಾಷೆಯಲ್ಲಿ ಹೇಳಲು, ವೇದವು ಹೊರಟಿದೆ, ಇಲ್ಲಿರುವುದನ್ನೆಲ್ಲ ಅಕ್ಷರಶಃ ವಾಚ್ಯರೂಪದಲ್ಲಿ ಅಷ್ಟೇ ಗ್ರಹಿಸಿದರೆ, ವೇದವು ಅರ್ಥಶೂನ್ಯವಾಗಿ ಕಾಣುವುದು. ಅಗ್ನಿ, ವಾಯು, ಪರ್ಜನ್ಯ, ಇಂದ್ರ, ವರುಣರನ್ನು ಕೇವಲ ಪ್ರಕೃತಿಯ ಶಕ್ತಿಗಳೇ ಎಂದು ಬಗೆದು ವೇದವು ಪ್ರಕೃತಿ ವರ್ಣಪರವಾದ ಕಾವ್ಯವೆಂದೂ, ಪಾಶ್ಚಾತ್ಯರು ಬರೆದು ಅಪಹಾಸ್ಯಕ್ಕೆ ಗುರಿಯಾಗಿರುವುದು ಎಲ್ಲರಿಗೂ ತಿಳಿದಿದೆ. ಮತ್ತು ಈ ದೃಷ್ಟಿಯಿಂದ ಹೊರಟರೆ, ಎಲ್ಲ ವೇದ ಸೂಕ್ತಗಳಿಗೂ ಒಂದೇ ಅರ್ಥ ಹೇಳುವುದೂ ಅಸಾಧ್ಯವೆಂಬುದನ್ನೂ, ಗಮನಿಸಬೇಕಾಗಿದೆ. ಆದ್ದರಿಂದ ಇಲ್ಲಿ ಪ್ರಕೃತಿಯ ವಿವಿಧ ಅಂಶಗಳನ್ನು ಸಂಕೇತಗಳನ್ನಾಗಿ ಬಳಸಿರುವುದನ್ನೂ ಹೇಗೆ ಕಾಣುತ್ತೇವೆಯೋ ಹಾಗೇ ಚಾರಿತ್ರಿಕ, ಮತ್ತು ಸಾಮಾಜಿಕ ವಿಷಯಗಳಲ್ಲಿಯೂ ಗ್ರಹಿಸತಕ್ಕದ್ದು.

ಉದಾಹರಣೆಗೆ, ಋಕ್ ಸಂಹಿತೆಯ "ಅಕ್ಷಸೂಕ್ತ" ವನ್ನು ಪರಿಶೀಲಿಸಿದ ಪಾಶ್ಚಾತ್ಯರು ಈ ಸೂಕ್ತದಿಂದ, ಆರ್ಯರಲ್ಲಿಯೂ ಜೂಜಾಟದ ಪದ್ಧತಿ ಇದ್ದಿತೆಂಬುದನ್ನಷ್ಟೇ ಕುರಿತು ಬಹಳ ಅಪಪ್ರಚಾರ ಮಾಡಿದ್ದಾರೆ; "ಆರ್ಯ" ರ ಕಾಲದಲ್ಲಿ ಎಲ್ಲರೂ ಒಂದೇ ವಿಧವಾದ, ಸಂಸ್ಕಾರವುಳ್ಳವರಾಗಿದ್ದರೆಂದು ಯಾರೂ ಹೇಳುವ ಅಗತ್ಯವಿಲ್ಲ. ಮನುಷ್ಯನು ಬಹಳ ಮಟ್ಟಿಗೆ ಎಲ್ಲಕಾಲದಲ್ಲಿಯೂ ಮನುಷ್ಯನೇ ಆಗಿದ್ದನೆಂದು ವೇದವು ತಿಳಿಸಿಕೊಡುವ ಅಗತ್ಯವಿಲ್ಲ. ಆದ್ದರಿಂದ ಇಂತಹ ಅನುಪಯುಕ್ತವೂ ತೀರ ಸಾಮಾನ್ಯವೂ, ಕ್ಷುಲ್ಲಕವೂ ಆದ ವಿಷಯಗಳನ್ನು ವೇದವು ನಮಗೆ ತಿಳಿಸಲು ಹೊರಟಿದೆಯೋ ಎಂಬುದು, ನಾವು ಮೊದಲು ಮನದಟ್ಟು ಮಾಡಿಕೊಳ್ಳಬೇಕಾದ ವಿಷಯ. ಅಕ್ಷಸೂಕ್ತದಲ್ಲಿ ಕೇವಲ ಜೂಜಾಟದ ಪ್ರಸಂಗ ವರ್ಣನೆ ಅಷ್ಟೇ ಇದ್ದ ಪಕ್ಷದಲ್ಲಿ ಪಗಡೆ-ದಾಳಗಳ ಗತಿಯನ್ನು ಸೋಮರಸದ ಪ್ರವಾಹದ ಗತಿಗೆ ಹೋಲಿಸಿದುದೇಕೆ? ಜೂಜುಗಾರನು ತನ್ನ ಪತ್ನಿಯು ತನ್ನ

ಮೇಲೆ ಕೋಪಗೊಂಡಿಲ್ಲವೆಂದೂ ತನಗೆ ಹಿತಕಾರಿಯೇ ಆಗಿದ್ದಾಳೆಂದೂ ಹೇಳಿಕೊಂಡದ್ದೇಕೆ ? ಅವುಗಳ ಮೇಲೆ ೫೩–ಎಂಬ ಸಂಖ್ಯೆಗಳು ಇದ್ದುವೆಂದು ವರ್ಣಿಸಿರುವುದೇಕೆ ? (ತ್ರಿಪಂಚಾಶಃ.) ಅವುಗಳನ್ನು ಸತ್ಯಾತ್ಮಕ ಧರ್ಮವುಳ್ಳ ಜಗತ್ಪ್ರೇರಕನಾದ ಸೂರ್ಯದೇವನಿಗೆ ಹೋಲಿಸಿ "೫೩" ಎಂಬ ಸಂಖ್ಯೆಯ ಸಾಮ್ಯತೆಯನ್ನು ಹೇಳಿರುವುದೇಕೆ ? ಇವುಗಳು ಎಂತಹ ಕ್ರೂರಿಯ ಕ್ರೋಧಕ್ಕೂ ಹೆದರಲಾರವೆಂದೂ, ರಾಜನೂ ಇವುಗಳಿಗೆ ತಲೆಬಗ್ಗುವನೆಂದೂ ವರ್ಣಿಸಿರುವುದೇಕೆ? ಇದೇ ಸೂಕ್ತದ ಕೊನೆಯಲ್ಲಿ ದಾಳಗಳಿಗೆ ದೊಡ್ಡಸಂಘವೂ ಗಣವೂ ಇರುವುದಾಗಿ ಹೇಳಿ, ಸೇನಾನಿಯೂ, ಪ್ರಭುವೂ, ಆದ "ದಾಳರಾಜ" ನಿಗೆ ಎರಡೂ ಕೈಗಳ ಹತ್ತು ಬೆರಳುಗಳನ್ನೂ ಜೋಡಿಸಿ ಋಷಿಯು ಕೈ ಮುಗಿಯುವುದೇಕೆ ? ಅಲ್ಲದೇ, ಜೂಜುಗಾರನಿಗೆ, ಆ ದಾಳಗಳಿಗೆ ಮರ್ಯಾದೆ ತೋರಿಸಿ ನಡೆದುಕೊಳ್ಳುವಂತೆ ಬೋಧಿಸಿರುವುದೇಕೆ ? ದಾಳಗಳನ್ನು ತನಗೆ ಮಿತ್ರನಾಗುವಂತೆ, ತನ್ನನ್ನು ಸುಖಪಡಿಸುವಂತೆ ಪ್ರಾರ್ಥಿಸಿರುವುದಾದರೂ ಏಕೆ ? ಈ ಪ್ರಶ್ನೆಗಳಿಗೆಲ್ಲ ಸಮರ್ಪಕವಾದ ಉತ್ತರವನ್ನು ಹೇಳಿದ ಹೊರತು, ಸೂಕ್ತಕ್ಕೆ ಸರಿಯಾದ ಅರ್ಥವಾಗುವುದಿಲ್ಲ. ಈ ಸೂಕ್ತಕ್ಕೆ ಪಗಡೆ ದಾಳವನ್ನೇ ಋಷಿ ಎಂಬುದಾಗಿಯೂ, ಅಕ್ಷಕೃಷಿ ಪ್ರಶಂಸೆಯನ್ನು ದೇವತೆಯನ್ನಾಗಿಯೂ ಹೇಳಿರುವುದರ ಔಚಿತ್ಯವನ್ನೂ ಗಮನಿಸತಕ್ಕದ್ದು. ಎರಡು ದಾಳಗಳು ವರ್ಷದ ಎರಡು ಅಯನಗಳೆಂದೂ, ಉತ್ತರಾಯಣ–ದಕ್ಷಿಣಾಯನ, ಅವುಗಳ ಮೇಲಿನ ೫೩ ಎಂಬ ಸಂಖ್ಯೆಗೆ ವರ್ಷದ ೫೩ ವಾರಗಳೆಂದೂ, ಅವುಗಳ ದಾಳಗಳ, ಓಟವೇ ಕಾಲಪ್ರವಾಹವೆಂದೂ, ಆದ್ದರಿಂದ ಇವುಗಳ ಗತಿಯು ಸೋಮರಸ ಪ್ರವಾಹಕ್ಕೆ ಸಮವಾದುದೆಂದೂ, ಹೀಗೆ ಇವುಗಳ (ದಾಳಗಳ) ಗಣಕ್ಕೆ ಅಧಿಪತಿಯೆಂದರೆ ಅಯನಗಳಿಗೂ, ಹಗಲು ರಾತ್ರಿಗಳಿಗೂ, ಪಕ್ಷಗಳಿಗೂ, ಅಧಿಪತಿಯಾದ ಕಾಲ ಸ್ವರೂಪನಾದ ಭಗವಂತನನ್ನೇ ಸೂರ್ಯನೆಂಬುದಾಗಿ ಸಂಕೇತಿಸಿ, ಒಟ್ಟಿನಲ್ಲಿ ಋಷಿಯು ತನ್ನ ಜೀವನವು ಸತ್ಯ–ಋತ, ಧರ್ಮಗಳಿಗೆ, ಮೀರದಂತೆ, ಪ್ರಾರ್ಥಿಸಿದುದಾಗಿ, ಸೂಕ್ತದಲ್ಲಿ ಕಾಣಬರುವುದು. ಇಂತಹ ಸೂಕ್ಷ್ಮ ವಿಚಾರಧಾರೆಗಳನ್ನು ಜನಸಾಮಾನ್ಯರಿಗೆ ಪರಿಚಿತವಾದ ಸಂಕೇತಗಳ, ವ್ಯವಹಾರಗಳ, ಮೂಲಕ ಬೋಧಿಸಲು ವೇದವು ಉದ್ಯುಕ್ತವಾಗಿದೆಯೇ ಹೊರತು, ಅನಾಗರಿಕವೆಂದು ಭಾವಿಸಲಾದ ಒಂದಾನೊಂದು ಅನಾದಿಕಾಲದಲ್ಲಿ

ಅವಿವೇಕಿಗಳಾದ ಕೆಲವರು ತಮ್ಮ ಚಿಕ್ಕಂದಿನಿಂದಲೂ ತಮಗೆ ಮುಖ್ಯವೆಂದು ಅನಿಸಿದ ವಿಷಯಗಳನ್ನೆಲ್ಲ ಅಸಂಬದ್ಧವಾಗಿ ಬರೆದಿಟ್ಟುಕೊಂಡು, ಅದನ್ನೇ ತಮ್ಮ ಪವಿತ್ರ ಗ್ರಂಥವೆಂಬುದನ್ನಾಗಿ ಭಾವಿಸಿ, ರಚಿತವಾದುದಲ್ಲ ವೇದ. ಇದನ್ನು ಭಾರತೀಯರಾದ ನಾವು, ಮನದಟ್ಟುಮಾಡಿಕೊಂಡ ಹೊರತು, ಅಪಾರವಾದ ಈ ಜ್ಞಾನ ನಿಧಿಯನ್ನು ವಸ್ತುತಃ ಹೊಂದಿದ್ದರೂ, ಅರ್ಥತಃ ಕಳೆದು ಕೊಳ್ಳುವ ಸಂಭವವಿದೆ.

ಹೀಗೆ ವೇದದ ಬಗೆಗೆ ಪ್ರಚಲಿತವಾದ ಅಪಪ್ರಚಾರ ಧಾರೆಯನ್ನು ನಿವಾರಿಸಿಕೊಂಡ ಮೇಲೆ ವೇದದಲ್ಲಿ ಪ್ರಧಾನವಾಗಿ ಭೋಧಿಸಲ್ಪಟ್ಟ ಮತ್ತು ಭಾರತೀಯ ಸಂಸ್ಕೃತಿಯ ರೂಢ ಮೂಲವಾದ ವಿಚಾರಗಳ, ಸ್ಥೂಲ ಪರಿಚಯವನ್ನು ಸಂಗ್ರಹವಾಗಿ ಹೀಗೆ ಮಾಡಿಕೊಡಬಹುದು.

ವೇದಗಳಲ್ಲಿ ನಮಗೆ ಮೊದಲು ಎದ್ದು ಕಾಣುವ ಸಂಗತಿ ವಿಶ್ವದ ಅನಂತತೆ, ಮಾನವ ಜೀವನದ ಉದಾರ ಧ್ಯೇಯ. ಮತ್ತು ಮಾನವನ ವ್ಯಕ್ತಿತ್ವದ ಗೌರವದ ಕಲ್ಪನೆಗಳು. ಮಾನವನು ಜೀವನದಲ್ಲಿ ಹೊಣೆಗಾರಿಕೆಯಿಂದ ಬಾಳಬೇಕೆಂಬುದು ವೇದದ ಸ್ಪಷ್ಟ ಸಂದೇಶವಾಗಿದೆ. ಪ್ರಸಿದ್ಧ "ಸಂವನನ" ಸೂಕ್ತದಲ್ಲಿ ಹೀಗೆ ಆದೇಶ ಕೊಟ್ಟಿದೆ :

"ಹೇ ಮಾನವರೇ ನೀವು ಯಾವಾಗಲೂ ಜೀವನದ ಗತಿಯನ್ನೂ, ಒಟ್ಟಿಗೇ ಕೂಡಿ ನಡೆಯಿರಿ. ಕೂಡಿಯೇ ಪರಸ್ಪರ ಮೈತ್ರೀಭಾವದಿಂದ ಮಾತನಾಡಿರಿ. ನಿಮ್ಮ ಮನಸ್ಸುಗಳೂ ಭಿನ್ನಾಭಿಪ್ರಾಯಗಳನ್ನು ತ್ಯಜಿಸಿ ಏಕ ರೂಪದ ಮಾರ್ಗದಲ್ಲಿ ಪ್ರವರ್ತವಾಗಲೀ, ದೇವತೆಗಳೆಲ್ಲರೂ ಒಟ್ಟುಗೂಡಿ ಹೇಗೆ ತಮ್ಮ ತಮ್ಮ ಹವಿರ್ಭಾಗಗಳನ್ನು, ಒಂದೇ ಯಜ್ಞ ವೇದಿಕೆಯ ಮೇಲೆ ಸ್ವೀಕರಿಸುತ್ತಾರೆಯೋ ಹಾಗೆಯೇ ನೀವೂ ಐಶ್ವರ್ಯವನ್ನು ಐಕಮತ್ಯದಿಂದ ಹಂಚಿಕೊಳ್ಳಿ. ದೇವತೆಗಳಿಗೆ ನೀವು ಮಾಡುವ ಸ್ತೋತ್ರವೂ ಒಂದೇ ಕರ್ಮದಲ್ಲಿ ಪ್ರವೃತ್ತವಾಗಿದ್ದು ಎಲ್ಲರಿಗೂ ಮಂಗಳವನ್ನು ಕೋರುವಂತಿರಲಿ. ಅದರಿಂದ ಬರತಕ್ಕ ಫಲವೂ ಸರ್ವಸಮಾನವಾಗಿರಲಿ. ದೇವತೆಗಳ ಅನುಗ್ರಹದಿಂದ ನಿಮ್ಮ ಮನಃಪ್ರವೃತ್ತಿಯೂ, ವಿವೇಕ ಜ್ಞಾನವೂ ವ್ಯತ್ಯಾಸವಾಗದೆ ಒಂದೇ ರೀತಿಯಲ್ಲಿರಲಿ. ಜೀವನವೆಂಬ ಯಜ್ಞದಲ್ಲಿ, ಯಜಮಾನರಾಗಿ

ರುವ ಸಮಸ್ತ ಮಾನವರೇ, ನಿಮ್ಮಲ್ಲಿ ಐಕ್ಯಮತ್ಯವಿರಲಿ. ನಿಮ್ಮ ಉದ್ದೇಶ, ಅಪೇಕ್ಷೆ, ಮತ್ತು ಹೃದಯದಲ್ಲಿ ಗೂಢವಾಗಿರುವ ಆಲೋಚನೆಗಳು, ಪರಸ್ಪರ ವಿರೋಧವಿಲ್ಲದ್ದ, ತ್ರಿಕರಣಗಳಲ್ಲಿಯೂ ಏಕರೂಪದಿಂದ ಇರಲಿ." (ಸಂಗಚ್ಛಧ್ವಂ, ಸಂವದಧ್ವಂ ಸಂವೋ ಮನಾಂಸಿ ಜಾನತಾಂ । ದೇವಾಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ ॥.... ಇತ್ಯಾದಿ ಋಕ್ ಸಂಹಿತೆ, ಮಂಡಲ ೧೦, ಸೂ. ೧೯೧).

ಇದು ಋಗ್ವೇದದ ಕೊನೆಯ ಮಂತ್ರವಾದುದರಿಂದ ಇದನ್ನೇ ವೇದದ ಸಂದೇಶವೆಂದು ಬಗೆದರೆ ತಪ್ಪಾಗಲಾರದು. ಮನುಷ್ಯನು ಯಜ್ಞದಲ್ಲಿಯೇ ಹುಟ್ಟಿ ಯಜ್ಞದಲ್ಲಿಯೇ ಬೆಳೆದು, ಯಜ್ಞದಲ್ಲಿಯೇ ಲಯವಾಗುವನು. ಯಜ್ಞವು ಅರ್ಪಣೆಯ ಸಂಕೇತ, ಅರ್ಪಣೆಯಿಲ್ಲದೆ ಸೃಷ್ಟಿಯಿಲ್ಲ. ಮಾನವನ ಜೀವನಕ್ಕಿಂತ ಅವನ ಅರ್ಪಣಾಶಕ್ತಿ ದೊಡ್ಡದು,

ಋತವೆಂಬುದು ಸರ್ವವ್ಯಾಪಿಯಾದ ವಿಶ್ವನಿಯಮ, ಇದರ ಶಾಶ್ವತ ವಾಸಸ್ಥಾನವೇ ಅಮೃತಲೋಕ. (ಸದನಂ ಋತಸ್ಯ). ನಾವು ಇಲ್ಲಿ ವಾಸಿಸುವ ಈ ಭೂಲೋಕವೂ ಸಹ ಋತದ ಅಂಗವೇ ಆಗಿದ್ದರೂ, ಅಪರಿಪೂರ್ಣವಾದುದು. ಇಲ್ಲಿಂದ ಅಲ್ಲಿಗೆ" ಸೇರುವ ಮಾರ್ಗವೂ ಕೂಡ ಋತವೇ ಹೀಗೆ ಮತ್ಯವಿನಿಂದ ಅಮೃತಕ್ಕೂ, ಕತ್ತಲೆಯಿಂದ ಬೆಳಕಿಗೂ, ಅಸತ್ತಿನಿಂದ ಸತ್ತಿಗೂ ನಮ್ಮನ್ನು ಭಗವಂತನು ಕರೆದೊಯ್ಯಲಿ ಎಂಬುದೇ ವೇದದ ದಿವ್ಯ ಸಂದೇಶ. ಅಮೃತತ್ವಕ್ಕೆ ಎಲ್ಲರೂ ಯತ್ನಿಸಬೇಕೆಂದು ಸಹ ವೇದವು ಕರೆ ಕೊಟ್ಟಿದೆ.

ಸಾಧನೆಯ ಸ್ವರೂಪದಲ್ಲಿ ಮಾನವನ ಪ್ರಯತ್ನ ಒಂದು ಅಂಶವಾದರೆ, ಭಗವಂತನ ಕೃಪೆಯೆಂಬುದು ಅದಕ್ಕಿಂತ ಮುಖ್ಯವಾದ ಇನ್ನೊಂದು ಅಂಶ. ಭಗವಂತನ ಹೊರತು ಮಾನವನಿಗೆ ಗತಿಯೇ ಇಲ್ಲವೆಂದು ವೇದವು ಸ್ಪಷ್ಟವಾಗಿ ತಿಳಿಸುತ್ತದೆ. ಅವನೇ ತಂದೆ, ತಾಯಿ ಸಕಲವಿಧ ಬಂಧು "ಯೋ ನಃ ಪಿತಾ ಜನಿತಾ ಯೋ ವಿಧಾತಾ, ಧಾಮಾನಿ ವೇದ ಭುವನಾನಿ ವಿಶ್ವಾ।ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಾಂತ್ಯನ್ಯಾ॥ (X-82-3) ಎಂಬುದಾಗಿ ಭಗವಂತನು ಕೊಂಡಾಡ

ಲ್ಪಟ್ಟಿದ್ದಾನೆ. ಸಕಲ ವಿಧದಲ್ಲಿಯೂ ಮಾನವನನ್ನು ಕೈಹಿಡಿದು ಸನ್ಮಾರ್ಗ ದಲ್ಲಿ ಕರೆದೊಯ್ಯುವ ಮಿತ್ರನೂ, ಪೋಷಕನೂ, ಸರ್ವಜ್ಞನೂ ಮಹಾಮಹಿ ಮನೂ, ವಾಚಾಮ ಗೋಚರನೂ, ಸರ್ವಾಂತರ್ಯಾಮಿಯೂ, ಹೀಗೆ ಸಮಸ್ತ ಕಲ್ಯಾಣ ಗುಣನಿಧಿಯೂ, ಆಗಿರತಕ್ಕ ಪರಮಾತ್ಮನ ಹೊರತ ಮಾನವನಿಗೆ ಬೇರೆ ಸಹಾಯವಿಲ್ಲ.

ಹೀಗೆ ವೇದಾಂತದಲ್ಲಿ ಯಾವ ಪರತತ್ವವನ್ನು ಜಗತ್ಕಾರಣವೆಂದೂ, ಬ್ರಹ್ಮವೆಂದೂ, ಆತ್ಮನೆಂದೂ ಕರೆದಿದೆಯೋ, ಅವನನ್ನೇ ಇಲ್ಲಿ ಸಕಲ ದೇವತೆ ಗಳ ಅಂತರ್ಯಾಮಿಯೆಂದೂ ಆಯಾ ದೇವತೆಗಳ ಶರೀರಾತ್ಮಭಾವದಿಂದ ವರ್ಣಿಸಿದೆ. ಸಮಸ್ತ ಕ್ರಿಯೆಗಳೂ ಯಜ್ಞ ರೂಪವಾಗಿ ಈ ಭಗವಂತನ ಆರಾಧನರೂಪವಾಗಿವೆ. ಯಜ್ಞ, ದಾನ, ತಪಸ್ಸು, ಇವು ಪರಮಾತ್ಮನನ್ನು ಕಾಣುವ ಸಾಧನೆಗಳು.

ನಿತ್ಯ ಜೀವನವು ದೇವಾಸುರ ಶಕ್ತಿಗಳ ಹೋರಾಟ. ವೇದದಲ್ಲಿ ಋಷಿ ಗಳು, ತಮ್ಮ ಶತ್ರುಗಳನ್ನು ಗೆಲ್ಲುವಂತೆ, ದೇವತೆಗಳಿಗೆ ಮಾಡಿದ ಪ್ರಾರ್ಥನೆಯು ಈ ಸಾಂಕೇತಿಕ ಅರ್ಥವನ್ನು ಹೊಂದಿದೆ. ಇದನ್ನೇ ಮುಂದೆ ಬಂದ ಇತಿಹಾಸ ಪುರಾಣಗಳೂ ಸಹ ಇದೇ ರೀತಿಯಲ್ಲಿ ವರ್ಣಿಸಿವೆ. ಜಗತ್ ಸೃಷ್ಟಿ ವಿಚಾರವಾಗಿ ವೇದದಲ್ಲಿ ಅನೇಕ ದಿವ್ಯ ಸೂಕ್ತಗಳಿವೆ, ದೇವಯಾನ ಪಿತೃಯಾಣಾದಿ ಮಾರ್ಗ ಗಳೂ, ದಿವ್ಯ ಲೋಕಗಳೂ, ಪರಮಪದವೂ, ದೇಹಾತಿರಿಕ್ತ ಆತ್ಮನೂ, ಸತ್ಯವೆಂಬುದನ್ನು ವೇದ ಎತ್ತಿ ಹಿಡಿದಿದೆ. ಪಾಪ ಪುಣ್ಯ ಸ್ವರೂಪಗಳನ್ನೂ ಸುಖ ದುಃಖಾದಿಗಳಿಗೆ ಅವು ಹೇಗೆ ಮೂಲದೆಂಬುದನ್ನೂ, ಸೂಚಿಸಿ ನಿತ್ಯ ಜೀವನದ ಪರಿಶುದ್ಧತೆಯು ಮಾನವನ ಪರಿಪೂರ್ಣತೆಗೆ ಮುಖ್ಯ ಕಾರಣವೆಂಬು ದನ್ನೂ ಹೇಳಿದೆ. ಜೀವನದಲ್ಲಿ ಸುಖ, ಸಮೃದ್ಧಿ, ಶಾಂತಿಗಳು ಅವಶ್ಯಕವೆಂದೂ ದ್ರವ್ಯ, ಸಂತಾನ, ಪಶುಸಮೃದ್ಧಿ, ದೀರ್ಘಾಯುಷ್ಯಗಳು, ದಿವ್ಯ ಜೀವನಕ್ಕೆ ವಿರೋಧ ಅಲ್ಲವೆಂದೂ ಮತ್ತು ಅತ್ಯಂತ ಅವಶ್ಯವೆಂದೂ, ಆಧ್ಯಾತ್ಮಿಕ ಮತ್ತು ಐಹಿಕ ಜೀವನಗಳ ಸುಂದರ ಸಮನ್ವಯವನ್ನು ವೇದ ಮಾಡಿಕೊಟ್ಟಿದೆ. ಪ್ರವೃತ್ತಿ, ನಿವೃತ್ತಿ ಮಾರ್ಗಗಳ ತಾಕಲಾಟ ಇಲ್ಲಿ ಇಲ್ಲ. ಕರ್ಮ ಸಿದ್ಧಾಂತವು ಋಕ್ ಸಂಹಿತೆಯಲ್ಲಿ ಒಟ್ಟಿನಲ್ಲಿ ಪರೋಕ್ಷವಾಗಿಯೂ ಸೂಕ್ಷ್ಮವಾಗಿಯೂ

ಸೂಚಿಸಲ್ಪಟ್ಟುದ್ದು ಇದೇ ವೇದರಾಶಿಯ ಇತರ ಭಾಗಗಳಲ್ಲಿ ಸುಂದರವಾ
ವಿಸ್ತೃತವಾಗಿದೆ. ವೈದಿಕ ಧರ್ಮವನ್ನು ತಿರಸ್ಕಾರಭಾವದಿಂದ ಕಾಣ
ಹೊರಟ ಅನೇಕ, ಜೈನ, ಬೌದ್ಧಾದಿ ನಾಸ್ತಿಕದರ್ಶನಗಳೂ ಈ
ಕರ್ಮ ಸಿದ್ಧಾಂತವನ್ನೂ ಎತ್ತಿ ಹಿಡಿದವೆಂದಮೇಲೆ ಭಾರತೀಯ
ತತ್ವ ಶಾಸ್ತ್ರದಲ್ಲಿ ಈ ಸಿದ್ಧಾಂತಕ್ಕೆ ಎಂತಹ ಸ್ಥಾನವಿದೆ ಎಂಬುದು ತಿಳಿ
ಯುತ್ತದೆ. ಕರ್ಮವು ಬರೀಯ ಹಣೇಬರಹವಲ್ಲ. ಅಪಪ್ರಚಾರ ಮಾಡು
ವರು ಮಾಡಿಕೊಳ್ಳಲಿ; ತಿಳಿಯಬೇಕೆನ್ನುವವರಿಗೆ ಈ ಸಿದ್ಧಾಂತ ಹೀಗೆ
ಹೇಳುತ್ತದೆ:—

ಜೀವನದ ಭೂತ ಭವಿಷ್ಯದ್ ವರ್ತಮಾನಗಳು ಒಂದಕ್ಕೊಂದು ಕೊಂಡಿ
ಯಂತೆ ಹೆಣೆದುಕೊಂಡು, ವರ್ತಮಾನ ಕಾಲದಲ್ಲಿ ನಾವು ಏನನ್ನು ಮಾಡುತ್ತೇ
ವೆಯೋ ಅದನ್ನು ಅವಲಂಬಿಸಿ ಪುಣ್ಯಪಾಪಾದಿ ಫಲಗಳನ್ನು ಮುಂದೆ ಕೊಡು
ತ್ತವೆ. ಹಿಂದೆ ಮಾಡಿದ, ಇನ್ನು ಬದಲಾಗದ, ಪ್ರಾರಬ್ಧ ಕರ್ಮಗಳು ಸುಖ
ದುಃಖ ಮಿಶ್ರಿತವಾಗಿರುವಂತೆಯೇ, ಈಗ ಮಾಡತಕ್ಕ ಸತ್ಕಾರ್ಯಾಚರಣೆ
ಯಿಂದಹಿಂದಿನ ಕರ್ಮ ಸಂಚಯದ ಒಟ್ಟಾರೇ ಸ್ವರೂಪವನ್ನು ನಮಗನುಕೂಲ
ವಾಗುವಂತೆ ಮಾಡಿಕೊಳ್ಳುವ ಹಕ್ಕೂ ಮನುಷ್ಯನಿಗೆ ಇದ್ದೇ ಇದೆ. ಇದರಿಂದಲೇ
ಈಗ ಮಾಡಬೇಕಾದ ನಿತ್ಯ ನೈಮಿತ್ತಿಕ ಕರ್ಮಗಳಿಗೆ, ಬಹಳ ಮಹತ್ವವಿದೆ
ಯೆಂದು ವೇದ ಹೇಳುತ್ತದೆ.

ಸತ್ಯವೆಂಬುದು ಜೀವನದ ಹಿಂದು ಮುಂದು ಮತ್ತು ಈಗ, ಇವುಗಳ
ಒಟ್ಟು ಸ್ವರೂಪ. ಇದು ಜೀವನದ ವ್ಯಕ್ತಾಂಶ. ಇದರದೇ ಅವ್ಯಕ್ತಾಂಶಕ್ಕೆ
ಋತವೆಂದು ಹೆಸರು, ಸತ್ಯಕ್ಕೆ ಮಿತ್ರನೂ ಋತಕ್ಕೆ ವರುಣನೂ ಸಾಂಕೇತಿಕ
ಒಡೆಯರು.

ವೇದಗಳಲ್ಲಿ ಶಾಂತಿಗಾಗಿ ವ್ಯಕ್ತವಾಗಿರುವ ಹಂಬಲ ವಿಶ್ವದ
ಮತ್ತಾವ ಸಾಹಿತ್ಯದಲ್ಲಿಯೂ ಬಂದಂತಿಲ್ಲ. ಶಾಂತಿಪಾಠವಿಲ್ಲದೆ ವೇದ
ಪಠಣದ ಆರಂಭ ಮುಕ್ತಾಯಗಳು ಆಗುವಂತಿಲ್ಲ. ಒಂದು ದೃಷ್ಟಿ
ಯಿಂದ "ಓಂ ಶಾಂತಿಃ ಶಾಂತಿಃ" ಎಂಬುದೂ ವೇದದ ಸಂದೇಶ.

ಮೋಕ್ಷವೆಂಬುದು ಜೀವನದ ಪರಿಪೂರ್ಣತೆಯ ಕೊನೆಯ ಮೆಟ್ಟಲು. ಇದಕ್ಕಾಗಿ ಹಂಬಲಿಸುವುದೆಂದರೆ ಪರಿಪೂರ್ಣತೆಗಾಗಿ ಹಂಬಲಿಸುವುದೇ ಹೊರತು ಐಹಿಕ ಜೀವನದಿಂದ ಪಲಾಯನ ಮಾಡುವುದಲ್ಲ. ಈ ಸ್ಪಷ್ಟ ಮೋಕ್ಷ ಕಲ್ಪನೆಯಾದ ಹೊರತು ವೇದದಲ್ಲಿ ಏನನ್ನೂ ಸರಿಯಾಗಿ ಕಾಣುವಂತಿಲ್ಲ.

ಜೀವನದಲ್ಲಿ "ಅನ್ಯಾಯ" ಅಥವಾ "ಕೆಟ್ಟದ್ದು" (Evil) ಎಂಬ ಅಂಶ, ಮಾನವನ ಕರ್ಮದ ಮತ್ತು ಕರ್ಮ ಸ್ವಾತಂತ್ರ್ಯದ ಫಲರೂಪವಾಗಿದೆ, ಪಾಶ್ಚಾತ್ಯ ಧರ್ಮಗಳಲ್ಲಿ ತಿಳಿದಿರುವಂತೆ, ದೇವರಿಗೆ ಪ್ರತಿಸ್ಪರ್ಧಿಯಾದಿ ಸರ್ವದಾ ಸೃಷ್ಟಿಗೆ ಅಶುಭವನ್ನೇ ಎಣಿಸುತ್ತಿರುವ ಸೈತಾನನೆಂಬುವವನ ಕಲ್ಪನೆ ಇಲ್ಲಿ ಇಲ್ಲ. ಭಗವಂತನು ಗೀತೆಯಲ್ಲಿ ಹೇಳಿರುವಂತೆ, ಕಾಮಕ್ರೋಧಗಳೇ ಜೀವನದ ನಿತ್ಯ ವೈರಿಗಳು. ಇವನ್ನೂ ಯಜ್ಞದಲ್ಲಿ ಅಜ್ಯ ಮತ್ತು ಪಶುಗಳನ್ನಾಗಿ ಅರ್ಪಿಸಿ ಶಾಂತಿ ಹೊಂದಬೇಕೆಂಬುದು ವೇದದ ಸಂದೇಶ, ವಿವಿಧ ಜನರಿಗೆ ಈ ಒಂದೇ ಗುರಿಯನ್ನು ಮುಟ್ಟಲು ಅವರವರಿಗೆ ತಕ್ಕಂತೆ, ವರ್ಣ ವ್ಯವಸ್ಥೆಯೂ, ಚತುರ್ವಿಧ ಪುರುಷಾರ್ಥಗಳೂ, ಆಶ್ರಮ ವ್ಯವಸ್ಥೆಯೂ ಇವೆ.

ವೇದವು ಸಮಾಜವು ಅವ್ಯವಸ್ಥಿತವಾಗಿರಬೇಕೆಂದು ಎಲ್ಲಿಯೂ ಹೇಳಿಲ್ಲ. ಸ್ಪರ್ಧಾತ್ಮಕ ಸಮಾಜವೇ (Competetive Society), ಮಾನವನ ಪ್ರಗತಿಗೆ ಹೆಚ್ಚು ಅವಕಾಶ ನೀಡುವುದೆಂಬ ಈಚಿನವರ ವಾದವು ವೇದ ಮಾರ್ಗಕ್ಕೆ ಸಂಪೂರ್ಣ ವಿರೋಧವಾಗಿದೆ. ಇತಿಹಾಸ ಪುರಾಣಗಳಲ್ಲಿ ಇಂತಹ ಸ್ಪರ್ಧೆಯ ಮನೋಭಾವದಿಂದ ಜನರು, ಒಬ್ಬರನ್ನೊಬ್ಬರು ನುಂಗಿ ಹಾಕಿ ಸಮುದ್ರದ ಮೀನುಗಳಂತೆ ಹೇಗೆ ಆಗುವರೆಂಬುದನ್ನು ವರ್ಣಿಸಿ ಇದು ಶ್ರೇಯಸ್ಕರವಲ್ಲವೆಂದು ತಿಳಿಸಿದೆ. ಆದ್ದರಿಂದ ಸಹಕಾರಾತ್ಮಕವಾದ ಸಮಾಜವೇ (Cooperative Society) ಋತ ಸತ್ಯಗಳ, ಆಧಾರದ ಮೇಲೆ, ಧರ್ಮದ ಬುನಾದಿಯ ಮೇಲೆ ಶಾಶ್ವತವಾಗಿ ನಡೆಯುವುದು ಭಗವಂತನ ಸಂಕಲ್ಪಕ್ಕೆ ಅನುಗುಣವಾಗಿದೆ ಎಂದು ವೇದ ತಿಳಿಸುತ್ತದೆ.

ವೇದ ದರ್ಶನವು ಕೇವಲ ನಂಬಿಕೆಯಲ್ಲ (Faith). ಇದು ತತ್ವಶಾಸ್ತ್ರದ ಮೂಲವಾದ ಸ್ವಯಂ ಅನುಭೂತಿಯೂ ಹೌದು, ಮತ್ತು ಆದರಿಂದ ಉದಿ

ಸಿದ ಸುಬದ್ಧವಾದ ವಿಚಾರಶಾಸ್ತ್ರವೂ ಹೌದು. ಅನುಭವ ಮತ್ತು ತರ್ಕ ಗಳಿಗೆ, ಇಲ್ಲಿ ತಾಕಲಾಟವಿಲ್ಲ. ಅನಾದಿಕಾಲದಿಂದ ಸನಾತನ ಋಷಿಗಳ ದಿವ್ಯ ದೃಷ್ಟಿಗೆ ಗೋಚರವಾದ ಮತ್ತು ಅವರಿಗಿಂತಲೂ ಮೇಲ್ಪಟ್ಟ ಗಹನ ವಿಚಾರ ಗಳು ಭಗವತ್ಪ್ರೇರಿತವಾಗಿ ಅವರಿಗೆ ಬಾಹ್ಯ ಪ್ರಜ್ಞೆ ಇಲ್ಲದ ಕಾಲದಲ್ಲಿ ಅವರ ಬಾಯಿಂದ ತಾವಾಗಿ ಹೊರಬಿದ್ದು ವೇದವು ಅಪೌರುಷೇಯವಾಗಿದೆ. ಹೀಗೆ ವೇದವು ಶಾಸ್ತ್ರವಾಗಿ, ಪ್ರಮಾಣವಾದಾಗ ಅದರ ಸೂಕ್ತಿಗಳು, ಅನು ಲ್ಲಂಘನೀಯ ಎಂದು ಹೇಳುವುದರ ಅರ್ಥ ಇಷ್ಟೇ: ನಮ್ಮ ಅನು ಕೂಲಕ್ಕೆ ಸರಿ ಹೊಂದಿಲ್ಲವೆಂಬ ಕಾರಣದಿಂದ ತಲೆಕೆಟ್ಟ ಯಾವ ಮನುಷ್ಯನೂ ವೇದವನ್ನು ತನ್ನ ದಾರಿಗೆ ಎಳೆಯದಿರಲೆಂದು.

ಒಂದು ದೃಷ್ಟಿಯಿಂದ ವೇದದ ಅನುಭವವು ಋಷಿಗಳ "ಪ್ರತ್ಯಕ್ಷ" ಅನುಭೂತಿಯೇ. ಅವರಿಗೆ ಪ್ರತ್ಯಕ್ಷವಾದದ್ದು ನಮಗೆ ಪರೋಕ್ಷವಾಗಿ "ಶ್ರುತಿ" ಯಾಗಿದೆ. ಹೀಗೆ ಚಿಕ್ಕ ವಯಸ್ಸಿನಲ್ಲಿ ವೇದವನ್ನು ಅಭ್ಯಾಸಮಾಡುವ ವಟು ವಿಗೆ ಪ್ರಾರಂಭದಲ್ಲಿ ಶ್ರುತಿಯಾಗಿದ್ದದ್ದು ಮುಂದೆ ಪ್ರತ್ಯಕ್ಷವಾಗುವದು. ಅಂದರೆ ವೇದಾರ್ಥದ ಗತಿಯು ಕಿವಿಯಿಂದ ಕಣ್ಣಿನ ಕಡೆಗೆ ಇದೆ. ಕಿವಿ ಕಣ್ಣುಗಳಲ್ಲಿ ವಿರೋಧವಿರಬಾರದು. "ಕೇಳುವುದೇ ಕಿವಿ, ನೋಡುವುದೇ ಕಣ್ಣು" ಇತ್ಯಾದಿಯಾಗಿ ದಾಸರು ಹಾಡುವುದು ಇದನ್ನೇ, ಇಲ್ಲಿ ವೈಯಕ್ತಿಕ ದೃಷ್ಟಿಕೋನಕ್ಕೆ ಅವಕಾಶವಿಲ್ಲ. ಇದೇ ವೇದರಾಶಿಯನ್ನೇ ಒಂದು ಸಮಗ್ರ ದೃಷ್ಟಿಕೋನವೆಂದು, ಬಹು ದೊಡ್ಡ ಅರ್ಥದಲ್ಲಿ ಹೇಳಬಹುದು

ಯಾಗ, ಯೋಗಗಳು, ತತ್ವ ದರ್ಶನಗಳು, ತರ್ಕ ಅನುಭೂತಿಗಳು, ಶಾಸ್ತ್ರ ಮತ್ತು ಸಾಮಾನ್ಯ ಪ್ರಜ್ಞೆಯೂ, ಪರಸ್ಪರ ಭೂಷಣಗಳಾಗಿ, ಪೂರಕ ಗಳಾಗಿ, ಜೀವನ ಸರ್ವಾಂಗ ಸುಂದರವಾಗಬೇಕೆಂಬುದು ವೇದದ ಆಶಯ. ಇದು (ಜೀವನಗತಿಯು) ಪೌರಾತ್ಯ, ಅಥವಾ ಪಾಶ್ಚಾತ್ಯ, ಎಂಬ ಭೇದ ದಿಂದ ಭಿನ್ನವಾಗುವಂತಿಲ್ಲ. ಜಗತ್ತಿನ ಎಲ್ಲ ಮಾನವರಿಗೂ ಸಾಮಾನ್ಯ ಧರ್ಮವೂ, ಗತಿಯೂ, ಹೇಗೆ ಸಿದ್ಧವೋ ಹಾಗೆಯೇ ವೇದದರ್ಶನವು ಸ ಲರಿಗೂ ಹಿತವಾಗಿ ಸರ್ವಸಾಮಾನ್ಯವಾಗಿದೆ.

— ಶ್ರೀ ಕೃಷ್ಣಾರ್ಪಣಮಸ್ತು —

॥ ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ॥

# ೧. ಪಂಚಾಗ್ನಿ ವಿದ್ಯೆ ಮತ್ತು ಯಜ್ಞತತ್ತ್ವ

ವೇದಾಂತದ ಮೂಲ ಪ್ರಶ್ನೆ ಜಗತ್ ಸೃಷ್ಟಿಯನ್ನು ಕುರಿತದ್ದೇ ಆಗಿದೆ, ವೇದಾಂತವೆಲ್ಲ ಒಂದು ಬಗೆಯ ಜಗತ್ಕಾರಣವಾದ. ಶ್ರುತಿಯಲ್ಲಿ ಇದರ ಬಗೆಗೆ ಮೇಲಿಂದ ಮೇಲೆ ಉಕ್ತವಾಗಿರುವ ವಿಚಾರ ಧಾರೆಯನ್ನು ಹೀಗೆ ಕಥೆಯ ಮೂಲಕ ಸಂಗ್ರಹಿಸಬಹುದು.

ಸಾಮ ವೇದದ ಛಾಂದೋಗ್ಯ ಉಪನಿಷತ್ತಿನಲ್ಲಿ (V-3) ಈ ಕಥೆಯಿದೆ. ಆರುಣೇಯನಾದ ಶ್ವೇತಕೇತು ಪಂಚಾಲರ ಸಭೆಗೆ ಬರುತ್ತಾನೆ. ಆಗ ರಾಜನಾಗಿದ್ದವನು ಪ್ರವಾಹಣ ಜೈವಲಿ ಎಂಬವನು. ಆ ಕಾಲದಲ್ಲಿ ಕ್ಷತ್ರಿಯರೂ ಬ್ರಹ್ಮ ವಿದ್ಯೆಯಲ್ಲಿ ನಿಷ್ಣಾತರಾಗಿದ್ದರೆಂದು ಕಥೆ ತಿಳಿಸುತ್ತದೆ. ಸಭೆಗೆ ಬಂದ ಬ್ರಾಹ್ಮಣ ಕುಮಾರನನ್ನು ಕಂಡು ರಾಜನು ಪ್ರಶ್ನಿಸುತ್ತಾನೆ. : " ಕುಮಾರ ! ನಿನ್ನ ತಂದೆ ನಿನಗೆ ಅನುಶಾಸನ (ಬ್ರಹ್ಮೋಪದೇಶ) ಮಾಡಿದ್ದಾನೆಯೆ ? " ಶ್ವೇತಕೇತುವು ಹೌದೆಂದು ಉತ್ತರಿಸುತ್ತಾನೆ. ಆಗ ರಾಜನು ಬ್ರಹ್ಮಜ್ಞಾನಿಯು ಆವಶ್ಯವಾಗಿ ತಿಳಿದಿರಬೇಕಾದ, ಮುಖ್ಯವಾದ ಐದು ಗಹನ ವಿಚಾರಗಳ ಬಗೆಗೆ ಅವನಿಗೆ ಪ್ರಶ್ನೆ ಹಾಕುತ್ತಾನೆ.

೧) ಇಲ್ಲಿಂದ (ಈ ಲೋಕದಿಂದ) ಜನರು ಎಲ್ಲಿಗೆ ಹೋಗುತ್ತಾರೆ ? (ಮೃತರಾದ ಮೇಲೆ)

೨) ಸತ್ತವರು ಪುನಃ ಹೇಗೆ ಹಿಂತಿರುಗುತ್ತಾರೆ ?

೩) ದೇವಯಾನ ಪಿತೃಯಾಣಗಳು ಒಂದನ್ನೊಂದು ಎಲ್ಲಿ ಅಗಲುತ್ತವ ? ( ಅವುಗಳ ವ್ಯತ್ಯಾಸವೇನು . )

೪) ಪಿತೃ ಲೋಕವು ಏತಕ್ಕಾಗಿ ತುಂಬುತ್ತಿಲ್ಲ ?

೫) ಐದನೆಯ ಆಹುತಿಯಲ್ಲಿ ನೀರು (ಆಪವು) ಹೇಗೆ ಪುರುಷನೆಂಬ ಹೆಸರನ್ನು ಪಡೆಯುತ್ತದೆ. ? "

ಈ ಪ್ರಶ್ನೆಗಳಲ್ಲಿ ಒಂದಕ್ಕಾದರೂ ಶ್ವೇತಕೇತುವಿಗೆ ಉತ್ತರ ತಿಳಿದಿರಲಿಲ್ಲ. ಬ್ರಹ್ಮಜ್ಞಾನಿಯೆಂದು ಅಹಂಕಾರ ಮಟ್ಟಿಗೆ ತುಂಬಿದ್ದಿತು. ರಾಜನು ಶ್ವೇತ ಕೇತುವನ್ನು ಕುರಿತು :

" ಈ ಪ್ರಶ್ನೆಗಳಿಗೆ ಉತ್ತರ ಗೊತ್ತಿಲ್ಲದೆ ಬ್ರಹ್ಮಜ್ಞಾನಿಯೆಂಬುದಾಗಿ ಏತಕ್ಕೆ ಹೇಳಿಕೊಳ್ಳುವೆ ? " ಎಂದು ಕೇಳಿದನು.

ಅಪಮಾನಿತನಾದ ಶ್ವೇತಕೇತು ತಂದೆಯಬಳಿಗೆ ಬಂದು ಅವನನ್ನು ಹೀಯಾಳಿಸುತ್ತಾನೆ.

" ಭಗವನ್ ! ನನಗೆ ಸರಿಯಾಗಿ ಉಪದೇಶಿಸದಯೇ ಉಪದೇಶ ಮಾಡಿರುವುದಾಗಿ ಹೇಳಿದೆಯಲ್ಲ ? ಆ ಕ್ಷತ್ರ ಬಂಧುವು * ನನಗೆ ಹಾಕಿದ ಐದು ಪ್ರಶ್ನೆಗಳಿಗೆ ಒಂದಕ್ಕೂ ಉತ್ತರ ಕೊಡಲಾಗಲಿಲ್ಲ. " ಎಂದು ಪ್ರಶ್ನೆಗಳನ್ನು ವಿವರಿಸುತ್ತಾನೆ.

ತಂದೆಯು " ನನಗೇ ಈ ಪ್ರಶ್ನೆಗಳಿಗೆ ಉತ್ತರ ಗೊತ್ತಿಲ್ಲ. ಗೊತ್ತಿದ್ದರೆ ನಿನಗೆ ಹೇಳದೇ ಇರುತ್ತಿದ್ದನೆ ? " ಎಂದು ಹೇಳುತ್ತಾನೆ. ನಂತರ ಇಬ್ಬರೂ ರಾಜನ ಬಳಿಗೆ ಬರುತ್ತಾರೆ. ಆತಿಥ್ಯವಾದ ಮೇಲೆ ಬೆಳಗಿನ ರಾಜ ಸಭೆಯಲ್ಲಿ ರಾಜನು ವಿನಯಾನ್ವಿತನಾಗಿ ಪ್ರಾರ್ಥಿಸುತ್ತಾನೆ.

" ಭಗವನ್ ! ಮನುಷ್ಯ ಸಂಬಂಧವಾದ ಯಾವ ಧನವನ್ನು ಬೇಕಾದರೂ ಕೇಳು. " (ಇದರರ್ಥ ಕ್ಷತ್ರಿಯನು ಬ್ರಾಹ್ಮಣನಿಗೆ ಬ್ರಹ್ಮ ವಿದ್ಯೆಯನ್ನು ಕೊಡಲು ಸಮರ್ಥನಲ್ಲ ಎಂಬುದಾಗಿ. ) ಆದರೆ ಶ್ವೇತಕೇತುವಿನ ತಂದೆಗೆ ಆ ಮಾನುಷ ವಿತ್ತವು ಬೇಕಾಗಿರಲಿಲ್ಲ.

ಈ ವಿದ್ಯೆಯನ್ನು ಹೇಗಾದರೂ ಪಡೆಯಬೇಕೆಂಬ ಆಕಾಂಕ್ಷೆಯಿಂದ ರಾಜನನ್ನು ಪ್ರಾರ್ಥಿಸುತ್ತಾನೆ :

---

* ಇದು ತಿರಸ್ಕಾರ ವಾಚಕ ಶಬ್ದ. ಕ್ಷತ್ರಿಯಾಧಮ— ಎಂದಂತೆ.

" ನನ್ನ ಕುಮಾರನಿಗೆ ಯಾವ ಪ್ರಶ್ನೆಗಳನ್ನು ಕೇಳಿದೆಯೊ ಅವುಗಳಿಗೇ ಉತ್ತರವನ್ನು ಅನುಗ್ರಹಿಸು " ಎಂದು.

ಆದರೆ ಗುರುಕುಲ ವಾಸವಿಲ್ಲದೆ ಅಪರಿಚಿತನೂ, ಅಪರೀಕ್ಷಿತನೂ ಆದ ಶಿಷ್ಯನಿಗೆ ಉಪದೇಶಮಾಡುವ ಪದ್ಧತಿ ಆ ಕಾಲದಲ್ಲಿ ಇರಲಿಲ್ಲವಾಗಿ ರಾಜನು ಗೌತಮನನ್ನು (ಉದ್ದಾಲಕ ಆರುಣಿಯನ್ನು) "ನಮ್ಮಲ್ಲಿ ದೀರ್ಘಕಾಲ ವಾಸ ಮಾಡಬೇಕಾಗುತ್ತದೆ " ಎಂದು ಆಜ್ಞಾಪಿಸಿದನು. ನಂತರ ಈ ವಿದ್ಯೆಗೆ ಪೀಠಿಕೆಯಾಗಿ ಹೇಳುತ್ತಾನೆ, " ಈ ವಿದ್ಯೆಯನ್ನು ಪಡೆಯುವ ಬ್ರಾಹ್ಮಣರಲ್ಲಿ ನೀನೇ ಮೊದಲಿಗನು. ಈ ವರೆಗೂ ಇದು ಕ್ಷತ್ರಿಯರಿಗೆ ಮಾತ್ರ ತಿಳಿದಿದ್ದಿತು " ಎಂದು. (ಅನೇಕ ವರ್ಷಗಳಾದ ಮೇಲೆ) ರಾಜನು ಗೌತಮನಿಗೆ ಉಪದೇಶಿಸಿದ ಬ್ರಹ್ಮವಿದ್ಯೆಯ ಸಾರಾಂಶವಿದು:

ದ್ಯುಲೋಕವೆಂಬುದೇ ಅಗ್ನಿ ಆದಿತ್ಯನೇ ಇದಕ್ಕೆ ಸಮಿತ್ತು, ಅವನ ರಶ್ಮಿಗಳೇ ಅದರ ಹೊಗೆ, ಹಗಲು ಇದರ ಜ್ವಾಲೆ. ಚಂದ್ರನು ಕೆಂಡ, ನಕ್ಷತ್ರಗಳು ಕಿಡಿಗಳು. ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯನ್ನು ಆಹುತಿಯನ್ನಾಗಿ ಹೋಮ ಮಾಡುತ್ತಾರೆ. ಇದರಿಂದ ಸೃಷ್ಟಿಯ ಮೊದಲನೆಯ ಮೆಟ್ಟಲಿನಲ್ಲಿ ಸೋಮರಾಜನು ಹುಟ್ಟುತ್ತಾನೆ. ನಂತರ ಎರಡನೆಯ ಅಗ್ನಿಯಾದ ಪರ್ಜನ್ಯನಲ್ಲಿ ದೇವತೆಗಳು ಈ ಹಿಂದೆ ಹುಟ್ಟಿದ ಸೋಮರಾಜನನ್ನು ಅರ್ಪಿಸುತ್ತಾರೆ. ಈ ಅಗ್ನಿಗೆ ವಾಯುವೇ ಸಮಿತ್ತು. ಮೇಘವು ಹೊಗೆ, ಮಿಂಚು ಜ್ವಾಲೆ, ಸಿಡಿಲು ಕೆಂಡ, ಗುಡುಗುಗಳು ಕಿಡಿಗಳು, ಈಗ ಈ ಎರಡನೆಯ ಮೆಟ್ಟಲಲ್ಲಿ ಹುಟ್ಟುವುದು ಮಳೆ. ಪೃಥ್ವಿಯು ಮೂರನೆಯ ಅಗ್ನಿ. ಸಂವತ್ಸರ ಇದಕ್ಕೆ ಸಮಿತ್ತು. ಆಕಾಶವೇ ಹೊಗೆ. ರಾತ್ರಿಯು ಜ್ವಾಲೆ, ದಿಕ್ಕುಗಳು ಕೆಂಡಗಳು, ಅವಾಂತರ ದಿಕ್ಕುಗಳು ಕಿಡಿಗಳು. ದೇವತೆಗಳು ಈ ಪೃಥ್ವಿಯಲ್ಲಿ ಮಳೆಯನ್ನು ಅರ್ಪಿಸುತ್ತಾರೆ, ಈಗ ಹುಟ್ಟುವುದು ಅನ್ನ.

ಪುರುಷನು ನಾಲ್ಕನೆಯ ಅಗ್ನಿ. ವಾಕ್, ಅವನಿಗೆ ಸಮಿತ್ತು. ಪ್ರಾಣವು ಹೊಗೆ. ನಾಲಿಗೆಯೇ ಜ್ವಾಲೆ, ಕಣ್ಣುಗಳು ಕೆಂಡ, ಕಿವಿಗಳು ಕಿಡಿಗಳು. ಈ ಪುರುಷಾಗ್ನಿಯಲ್ಲಿ ದೇವತೆಗಳು ಅನ್ನವನ್ನು ಹೋಮ ಮಾಡುತ್ತಾರೆ. ಈಗ

ಉತ್ಪನ್ನವಾಗುವುದು, ರೇತಸ್ಸು (ವೀರ್ಯ). ಕೊನೆಯದಾದ ಐದನೆಯ ಅಗ್ನಿಯು ಸ್ತ್ರೀ. ಈ ಅಗ್ನಿಯಲ್ಲಿ ದೇವತೆಗಳು ಪುರುಷ ರೇತಸ್ಸನ್ನು ಹೋಮ ಮಾಡುತ್ತಾರೆ. ಹೀಗೆ ಈ ಐದನೆಯ ಆಹುತಿಯಲ್ಲಿ ಆಪವು (ಪುರುಷ ವೀರ್ಯ) ಪುರುಷ ರೂಪವಾಗಿ ಪುರುಷ ವಾಕ್ಕಿನೊಡನೆ ಉದ್ಭವವಾಗುತ್ತದೆ. ಇದು ಜರಾಯುವಿನಿಂದ ಆವೃತವಾಗಿ ಒಂಭತ್ತೋ-ಹತ್ತೋ ತಿಂಗಳುಗಳ ವರೆಗೆ ಒಳಗಿದ್ದು, ಹುಟ್ಟಿ, ಆಯುಸ್ಸು ಇರುವವರೆಗೆ ಬದುಕಿರುತ್ತದೆ. ಪರ ಲೋಕಕ್ಕೆ ಹೋಗುವ ಕಾಲದಲ್ಲಿ ಯಾವ ಅಗ್ನಿಯಿಂದ ಬಂದಿದ್ದಾನೊ ಆ ಅಗ್ನಿಗೇ ಅವನು ಮರಳುತ್ತಾನೆ

ಬ್ರಹ್ಮವಿದನು ಹೀಗೆ ಅರಿತಿದ್ದರೆ, ಮತ್ತು ಶ್ರದ್ಧೆಯಿಂದ ಅರಣ್ಯದಲ್ಲಿ ತಪಸ್ವಿಯಾಗಿ ಬಾಳಿದ್ದರೆ, ಉತ್ಕ್ರಮಣಕಾಲದಲ್ಲಿ ಅರ್ಚಿರ್ದೇವತೆಯನ್ನು (ಬೆಳಕು ಎಂಬ ದೇವತೆಯನ್ನು) ಸೇರಿ ಮುಂದೆ ಹಗಲು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ದೇವತೆಗಳದ್ವಾರ ಆದಿತ್ಯನಲ್ಲಿ ಪ್ರವೇಶಿಸಿ, ಮುಂದೆ ಚಂದ್ರ ಮತ್ತು ವಿದ್ಯುದ್ದೇವತೆಗಳೆಡೆಗೆ ಬಂದು ಸೇರುತ್ತಾನೆ. ಅಲ್ಲಿ ಅವನನ್ನು "ಅಮಾನವ"ನಾದ ಪುರುಷನೊಬ್ಬನು (ದೇವದೂತನು) ಪರ ಬ್ರಹ್ಮನ ಬಳಿಗೆ ಸ್ವಾಗತಿಸುತ್ತಾನೆ. ಇದೇ ದೇವಯಾನ ಮಾರ್ಗ, ಹಾಗಲ್ಲದ ಗ್ರಾಮಗಳಲ್ಲಿಯೇವಾಸಿಸುತ್ತ ಇಷ್ಟಾಪೂರ್ತಾದಿಗಳನ್ನು ಮಾಡಿಕೊಂಡು ಬ್ರಹ್ಮ ವಿದ್ಯೆಯಕಡೆಗೆ ಲಕ್ಷ್ಯ ಕೊಡದೆ ಮೃತರಾಗುವರು, ಧೂಮಾಭಿಮಾನಿ ದೇವತೆಯನ್ನು ಸೇರಿ, ರಾತ್ರಿ, ಕೃಷ್ಣ ಪಕ್ಷ, ದಕ್ಷಿಣಾಯನ, ದೇವತೆಗಳನ್ನು ಹೊಂದಿ (ಸಂವತ್ಸರ ದೇವತೆಯನ್ನು ಕಾಣದೆ) ಪಿತೃಲೋಕವನ್ನೂ ಆಕಾಶ ವನ್ನೂ, ಸೋಮನನ್ನೂ ಸೇರುತ್ತಾರೆ. ಸೋಮನು ದೇವತೆಗಳ ಅನ್ನ. ಹೀಗೆ ಅಲ್ಲಿದ್ದು ಕರ್ಮವು ಕ್ಷೀಣವಾದ ಮೇಲೆ ಬಂದ ಮಾರ್ಗದಿಂದಲೇ ಹಿಂತಿರುಗಿ ಆಕಾಶ, ವಾಯು, ಧೂಮ, ಮೋಡಗಳ ಮೂಲಕ ಮಳೆಯಾಗಿ ಭೂಮಿಯನ್ನುಸೇರಿ ಕರ್ಮಕ್ಕೆ ಅನುಗುಣವಾಗಿ ಭತ್ತ, ಗೋದಿ, ಮೂಲಿಕೆ, ಮರಗಳು ಹೀಗೆ ವೈವಿಧ್ಯಮಯವಾದ ಔಷಧಿ ವನಸ್ಪತಿಗಳ ರೂಪದಲ್ಲಿ ಹುಟ್ಟುತ್ತಾರೆ. ಧರ್ಮ ಕರ್ಮ ಸಂಯೋಗದಿಂದ, ಆಹಾರ ರೂಪದಲ್ಲಿ ಬ್ರಾಹ್ಮಣ ಯೋನಿಯನ್ನೊ, ಕ್ಷತ್ರಿಯ ಯೋನಿಯನ್ನೊ, ವೈಶ್ಯ ಯೋನಿ

ಯನ್ನೋ ಪಡೆಯುತ್ತಾರೆ. ಈ ಪುಣ್ಯ ಶಾಲಿಗಳನ್ನು ಶ್ರುತಿಯು "ರಮಣೀಯ ಚರಣ"ರೆಂಬುದಾಗಿ ವರ್ಣಿಸುತ್ತದೆ. ಹಾಗಲ್ಲದೆ ಪಾಪ ಫಲ ಬಹಳ ಉಳಿದಿದ್ದರೆ, "ಕಪೂಯ ಚರಣ" ರಾಗಿ ನಾಯಿ, ಹಂದಿ, ಅಥವಾ ಚಂಡಾಲ ಯೋನಿಯಲ್ಲಿ ಹುಟ್ಟುತ್ತಾರೆ. ಈ ಎರಡೂ ಪಥಗಳಲ್ಲಿ ಯಾವುದೊಂದರಿಂದಲೂ ಹೋಗಲಾರದವರು ಪುನಃ ಪುನಃ ಹುಟ್ಟು ಸಾವುಗಳಿಗೇ ಮರಳುವ ಕ್ಷುದ್ರ ಜಂತುಗಳಾಗುತ್ತಾರೆ. ಈ ಕಾರಣದಿಂದಲೇ ಪಿತೃಲೋಕವು ಯಾವಾಗಲೂ ತುಂಬುವುದಿಲ್ಲ. ಈ ವಿಷಯದಲ್ಲಿ ಈ ಶ್ರುತಿಗಿಂತ ಪ್ರಾಚೀನವಾದ ಈ ಕೆಳಕಂಡ ಅರ್ಥ ಬರುವ ಶ್ಲೋಕ ಒಂದಿದೆ "ಚಿನ್ನವನ್ನು ಕದಿಯುವವರು, ಹೆಂಡವನ್ನು ಕುಡಿಯುವವರು, ಗುರು ಪತ್ನಿ ಸಂಗಮ ಮಾಡುವವರು, ಮತ್ತು ಇವರೊಡನೆ ವ್ಯವಹರಿಸುವವರು ಪತಿತರಾಗುವರು." ಇಂತು ಈ ಪಂಚಾಗ್ನಿ ವಿದ್ಯೆಯನ್ನು ಅರಿತ ಜ್ಞಾನಿಯು ಮಹಾ ಪಾತಕಿಗಳೊಂದಿಗೆ ವರ್ತಿಸಿದರೂ ಪಾಪಲೇಪವನ್ನು ಹೊಂದುವುದಿಲ್ಲ. ಶುದ್ಧನೂ ಪೂತನೂ ಆದ ಅವನು ಪರಮಾತ್ಮನ ಪುಣ್ಯ ಲೋಕವನ್ನೇ ಸೇರುತ್ತಾನೆ.

ಪ್ರಸಿದ್ಧವಾದ ಈ ಉಪದೇಶಕ್ಕೆ ಪಂಚಾಗ್ನಿ ವಿದ್ಯೆ ಎಂದು ಹೆಸರು. ಇದನ್ನು ವೇದ ವ್ಯಾಸರು ಬ್ರಹ್ಮ ಸೂತ್ರದಲ್ಲಿ :

"ತದಂತರ ಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನ ನಿರೂಪಣಾಭ್ಯಾಂ" ಎಂಬ ಸೂತ್ರದಲ್ಲಿ (III-I-I) ಚರ್ಚಿಸಿರುತ್ತಾರೆ.

"ದೇಹಾಂತರಕ್ಕೆ ಪ್ರವೇಶಿಸುವ ಜೀವಾತ್ಮನು ತನ್ನ ಭೂತ ಸೂಕ್ಷ್ಮಗಳೊಂದಿಗೆ ಒಡಗೂಡಿಯೇ ಹೋಗುತ್ತಾನೆ. ಏಕೆಂದರೆ (ಉಪನಿಷತ್ತಿನಲ್ಲಿ) ಪ್ರಶ್ನೆ ಮತ್ತು ಪ್ರತಿ ವಚನಗಳಿಂದ (ಹೀಗೆಯೇ ಉಕ್ತವಾಗಿದೆ.)"

ಮತ್ತು ದೇವಯಾನ ಪಿತೃಯಾಣ ವಿಷಯಗಳನ್ನು ಬ್ರಹ್ಮಸೂತ್ರದಲ್ಲಿ (೪ನೇ ಅಧ್ಯಾಯದ ೨ನೇ ಪಾದದಲ್ಲಿ) ಚರ್ಚಿಸಲಾಗಿದೆ.

ಬ್ರಹ್ಮಜ್ಞಾನಿಯು ಹೃದಯದ ನೂರನೆಯದಕ್ಕಿಂತ ಮೇಲಿನದಾದ ನಾಡಿಯ ಮೂಲಕವೇ ಉತ್ಕ್ರಮಿಸುತ್ತಾನೆ. ಅಂತ್ಯಕಾಲದಲ್ಲಿ ಅವನಿಗೆ ಈ ನಾಡಿಯು ಹೇಗೆ ಗೋಚರಿಸುವುದು ಎಂಬ ವಿಷಯಕ್ಕೆ ಸಂಶಯ ಅನಗತ್ಯ.

ಏಕೆಂದರೆ ಪರಮಪುರುಷನನ್ನು ಸತತವೂ ಆರಾಧಿಸಿ ಈ ಪರಮಾರ್ಥದಲ್ಲಿ ಅತ್ಯಂತ ಆಸಕ್ತನಾದ ಜ್ಞಾನೀಭಕ್ತನಿಗೆ ಅವನ ವಿದ್ಯಾ ಸಾಮರ್ಥ್ಯದಿಂದಲೂ ಪರಮಾತ್ಮನ ಅನುಗ್ರಹದಿಂದಲೂ ಅವನ ಹೃದಯವು ಪ್ರಕಾಶಿಸಿ ತನ್ನ ನಿರ್ಗಮನದ ನಾಡಿಯನ್ನು ಗುರುತು ಹಚ್ಚುವ ಸಾಮರ್ಥ್ಯವಿರುತ್ತದೆ.

ಇಂತಹ ಜ್ಞಾನಿಯು ಒಂದು ವೇಳೆ ರಾತ್ರಿಯಲ್ಲಿ ಮೃತನಾದಾಗ್ಯೂ ಅವನು ಬೆಳಕಿನ ದಾರಿಯಲ್ಲೇ ಹೊರಡುತ್ತಾನೆ. ರಾತ್ರಿಯಲ್ಲೂ ಸೂರ್ಯ ರಶ್ಮಿಗಳು ಭೂಮಿಯನ್ನು ಆವರಿಸಿಕೊಂಡೇ ಇರುತ್ತವೆ. (ಕಾಸ್‌ಮಿಕ್ ರೇಸ್). ಹೀಗೆಯೇ ದಕ್ಷಿಣಾಯನದಲ್ಲಿ ಮೃತನಾದರೂ ಸಹ ಜ್ಞಾನಿಗೆ ಪುನರಾವರ್ತಿ ಇಲ್ಲದ ಬ್ರಹ್ಮಲೋಕ ಪ್ರಾಪ್ತಿಉಂಟು. ಈ ವಿಷಯವನ್ನು ಭಗವದ್ಗೀತೆಯಲ್ಲಿ "ಅಗ್ನಿ ಜ್ಯೋತಿರಹಃ ಶುಕ್ಲಃ" ಇತ್ಯಾದಿ ೮ ನೇ ಅಧ್ಯಾಯದ ಶ್ಲೋಕಗಳಲ್ಲಿ ಹೇಳಲಾಗಿದೆ. ಇದೇ ಸೃಷ್ಟಿ ಕ್ರಮವನ್ನು ಭಗವಂತನು "ಯಜ್ಞಚಕ್ರ" ಎಂಬುದಾಗಿ ೩ ನೇ ಅಧ್ಯಾಯದಲ್ಲಿ ಹೇಳಿದ್ದಾನೆ.

ತೈತ್ತಿರೀಯ ಉಪನಿಷತ್ತಿನಲ್ಲಿ ಸಮಸ್ತ ಜೀವನವನ್ನೂ ಐದು ಬಗೆಯ ಮಹಾಯಜ್ಞಗಳಾಗಿ, ಅಧಿಲೋಕ, ಅಧಿಜ್ಯೌತಿಷ, ಅಧಿವಿದ್ಯ, ಅಧಿಪ್ರಜ, ಅಧ್ಯಾತ್ಮ ಎಂಬುದಾಗಿ ವರ್ಣಿಸಿರುವುದನ್ನೂ ಇಲ್ಲಿ ಗಮನಿಸಬಹುದು.

(೧) ಪೃಥ್ವಿಯು ಪೂರ್ವಾರಣಿಯಾಗಿಯೂ, ದ್ಯುಲೋಕವು ಉತ್ತರಾರಣಿಯಾಗಿಯೂ, ಆಕಾಶವು ಇವುಗಳ ಸಂಧಿಯಾಗಿಯೂ, ವಾಯುವು ಸಂಧಾನವಾಗಿಯೂ, ನಡೆಯುವುದೇ—ಅಧಿಲೋಕ ಯಜ್ಞ.

(೨) ಅಗ್ನಿಯು ಪೂರ್ವಾರಣಿಯಾಗಿಯೂ, ಆದಿತ್ಯನು ಉತ್ತರಾರಣಿಯಾಗಿಯೂ, ಆಪವುಸಂಧಿಯಾಗಿಯೂ, ವಿದ್ಯುತ್ತು ಸಂಧಾನವಾಗಿಯೂ, ನಡೆಯುವುದೇ ಅಧಿಜ್ಯೌತಿಷ್ಯತಿಷವೆಂಬ ಯಜ್ಞ.

(೩) ಆಚಾರ್ಯನು ಪೂರ್ವ (ಅರಣಿ) ರೂಪವಾಗಿಯೂ, ಶಿಷ್ಯನು ಉತ್ತರ (ಅರಣಿ) ರೂಪವಾಗಿಯೂ, ವಿದ್ಯೆಯು ಸಂಧಿಯಾಗಿಯೂ, ಪ್ರವಚನವು ಸಂಧಾನವಾಗಿಯೂ ನಡೆಯುವುದು ಅಧಿವಿದ್ಯಾಯಜ್ಞವೆನಿಸುವುದು.

(೪) ತಾಯಿಯು ಪೂರ್ವಾರಣಿಯಾಗಿ, ತಂದೆಯೇ ಉತ್ತರಾರಣಿಯಾಗಿ, ಹುಟ್ಟುವ ಪ್ರಜೆಯೇ (ಮಗುವೇ) ಸಂಧಿಯಾಗಿ, ಪ್ರಜನನ ಕ್ರಿಯೆಯೇ ಸಂಧಾನವಾಗಿ ನಡೆಯುವ ಯಜ್ಞವೇ ಅಧಿಪ್ರಜವೆನಿಸುವುದು.

(೫) ಕೆಳ ದವಡೆಯೇ ಪೂರ್ವಾರಣಿಯಾಗಿಯೂ, ಮೇಲ್ದವಡೆಯೇ ಉತ್ತರಾರಣಿಯಾಗಿಯೂ, ವಾಕ್ಕು ಸಂಧಿಯಾಗಿಯೂ, ನಾಲಗೆಯೇ ಸಂಧಾನವಾಗಿಯೂ ನಡೆಯುವ ವೇದಾಧ್ಯಯನ ಯಜ್ಞವೇ ಅಧ್ಯಾತ್ಮವೆನಿಸುವುದು.

ಶ್ರುತಿಯು ಈ ಯಜ್ಞಗಳನ್ನು "ಮಹಾ ಸಂಹಿತೆ" ಗಳೆಂದು ಕರೆದಿದೆ–ಇವು ಐದೂ, ಯಜ್ಞತತ್ತ್ವದ "ಅಧಿಕರಣ"ಗಳಂತೆ. ಹೀಗೆಯೇ ಶ್ರುತಿಯ ಇತರ ಕಡೆಗಳಲ್ಲಿಯೂ ಸೃಷ್ಟಿಯ ಮರ್ಮವನ್ನು ಕುರಿತ ಅನೇಕ ಮಾರ್ಮಿಕ, ಸಾಂಕೇತಿಕ ವರ್ಣನೆಗಳಿವೆ. ನಿರಂತರ ಸೃಷ್ಟಿ ಪ್ರವಾಹವೇ ಯಜ್ಞ. ವೇದೋಕ್ತವಾದ ಯಜ್ಞತತ್ತ್ವ ವೈದಿಕ ಧರ್ಮದ ಅಡಿಗಲ್ಲಾಗಿದೆ. ಎಲ್ಲ ವೇದಗಳ ಉಸಿರಾಗಿರುವ ಈ ತತ್ತ್ವವು ಯಜುರ್ವೇದದಲ್ಲಿ ಪ್ರಧಾನವಾಗಿ ಮಾರ್ಮಿಕ ಭಾಷೆಯಲ್ಲಿ ಪ್ರತಿಪಾದಿತವಾಗಿದೆ. ಇದರ ಸಾರಸಂಗ್ರಹವನ್ನು ಇಲ್ಲಿ ಹೀಗೆ ಮಾಡಬಹುದು.

## ಯಜುರ್ವೇದದಲ್ಲಿ ಯಜ್ಞ ತತ್ತ್ವ

ವೇದಗಳಲ್ಲಿ ಯಜುರ್ವೇದಕ್ಕೆ ಪ್ರಾಚೀನಕಾಲದಿಂದಲೂ ಪ್ರಾಮುಖ್ಯವುಂಟು. ತೈತ್ತಿರೀಯ ಉಪನಿಷತ್ತಿನಲ್ಲಿ ಮನೋಮಯನಾದ ಆತ್ಮನಿಗೆ ಯಜುರ್ವೇದವನ್ನೇ ತಲೆಯೆಂದೂ, ಋಕ್ಸಾಮಗಳು ರೆಕ್ಕೆಗಳೆಂದೂ, ವಿಧಿ ನಿಷೇಧ ರೂಪವಾದ ರಹಸ್ಯಾದೇಶವೇ ಆತ್ಮವೆಂದೂ ಹೇಳಿದೆ : "ತಸ್ಯ ಯಜುರೇವ ಶಿರಃ । ಋಗ್ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ ।." ವೇದ ಭಾಷ್ಯಕಾರರು "ಭಿತ್ತಿಸ್ಥಾನೀಯೋ ಯಜುರ್ವೇದಃ ಚಿತ್ರಸ್ಥಾನಾವಿತರೌ"— ಎಂದರೆ "ಯಜುರ್ವೇದವು ಗೋಡೆಯಂತೆ. ಉಳಿದವು ಅದರ ಮೇಲಿನ ಚಿತ್ರಗಳಂತೆ" ಎಂದು ಯಜುರ್ವೇದದ ಪ್ರಶಂಸೆ ಮಾಡಿದ್ದಾರೆ, "ಯಜನಾದ್ಧಿಯಜುರ್ವೇದಃ" "ಯಜ್" ಎಂಬ

ಧಾತುವಿಗೆ ಸ್ಥೂಲವಾಗಿ "ಅರ್ಪಿಸು ಪೂಜಿಸು" ಎಂದರ್ಥ. "ಜೀವನದ ನಾನಾಗತಿಗಳೂ ಯಜುಸ್ಸಿನ ತತ್ತ್ವದಲ್ಲೇ ಪರ್ಯವಸಾನವಾಗುವು" ವೆಂದು ತೈತ್ತಿರೀಯ ಬ್ರಾಹ್ಮಣ ಹೇಳುತ್ತದೆ: "ಸರ್ವಾಗತಿರ್ಯಾಜುಷೀಹೈವ ಶಶ್ವತ್." ಜೀವನದ ಕಾರ್ಯಗಳೆಲ್ಲ ಯಜ್ಞ, ಕಾರ್ಯ ಕ್ಷೇತ್ರವೆಲ್ಲ ಯಜ್ಞ ಭೂಮಿ, ಜೀವಿಗಳೆಲ್ಲ ಯಜಮಾನರು. ಅತಿಸ್ಥೂಲ ಬಾಹ್ಯ ಕ್ರಿಯೆಯಿಂದ ಹಿಡಿದು ಅತಿಸೂಕ್ಷ್ಮ ಅಧ್ಯಾತ್ಮ ವ್ಯಾಪಾರದವರೆಗೆ ಎಲ್ಲವೂ ಯಜ್ಞ. ಸೃಷ್ಟಿ ಸ್ಥಿತಿಲಯಗಳೂ ಯಜ್ಞವೇ. ಇದರ ಅನಾದಿ ಪ್ರವರ್ತಕನೇ ಪ್ರಜಾಪತಿ. ಇವನು ಜಗತ್ತಿನ ಒಡೆಯ: ಆಕಾಶ ಇವನ ಮಹಿಮೆ; ನಕ್ಷತ್ರ ಇವನ ರೂಪ, ಸೂರ್ಯ ತೇಜಸ್ಸು" ಎಂದು ತೈತ್ತಿರೀಯ ಸಂಹಿತೆ [VII—೨ 16 17] ವರ್ಣಿಸುತ್ತದೆ: "ಯ ಆತ್ಮದಾ, ಬಲದಾ, ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯದೇವಾಃ। ಯಸ್ಯಛಾಯಾಮೃತಂ ಯಸ್ಯಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ॥ ತಸ್ಯತೇ ದ್ಯೌರ್ಮಹಿಮಾ, ನಕ್ಷತ್ರಾಣಿ ರೂಪ ಮಾದಿತ್ಯಸ್ತೇಜಃ ತಸ್ಮೈತ್ವಾ ಮಹಿಮ್ನೇ ಪ್ರಜಾಪತಯೆ ಸ್ವಾಹಾ॥" ಪರಾತ್ಪರ ನಾದ ಈತನು ಸೃಷ್ಟಿಗೆ ಪೂರ್ವದಲ್ಲಿ ನೀರಿನ ಮೇಲೆ ತಾವರೆಯ ಎಲೆಯಲ್ಲಿ ಮಲಗಿದ್ದನೆಂದೂ ಅವನ ಮನಸ್ಸಿನಲ್ಲಿ ಸೃಷ್ಟಿ ಸಂಕಲ್ಪವಾಯಿತೆಂದೂ, ತಪಸ್ಸು ಮಾಡಿ ತನ್ನ ಶರೀರದಿಂದಲೇ ವಿಶ್ವವನ್ನು ಸೃಷ್ಟಿಸಿದನೆಂದೂ ತೈತ್ತೀರಿಯ ಆರಣ್ಯಕ ಹೇಳುತ್ತದೆ: "ಆಪೋವಾ ಇದಮಾಸನ್ ಸಲಿಲಮೇವ । ಸ ಪ್ರಜಾಪತಿ ರೇಕಃ ಪುಷ್ಕರ ಪರ್ಣೇ ಸಮಭವತ್ । ತಸ್ಯಾಂತರ್ಮನಸಿಕಾಮಃ ಸಮ ವರ್ತತ । ಇದಗ್ಂ ಸೃಜೇಯಮಿತಿ । ಸತಪೋತಪ್ಯತ । ಸತಪಸ್ತಪ್ತ್ವಾ । ಶರೀರಮಧೂನುತ । ಸಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರ ಪಾತ್ ।" ಹೀಗೆ ಸೃಷ್ಟಿ ಎಲ್ಲವೂ ಈ ಮಹಾ ಪುರುಷನ ಯಜ್ಞ. ಋಗ್ವೇದದ ಪುರುಷ ಸೂಕ್ತವು ಯಜುರ್ವೇದದಲ್ಲೂ ಪುನರುಕ್ತವಾದಿ ಇದರ ಅಡಿಗಲ್ಲಾಗಿದೆ. ಸರ್ವ ಪ್ರಾಣಿ ಸಮಷ್ಟಿರೂಪಿಯೂ, ಬ್ರಹ್ಮಾಂಡ ದೇಹಿಯೂ ಆದ ಈ ವಿರಾಟ್ಪುರುಷನನ್ನೇ ದೇವತೆಗಳು ಯಜ್ಞಹವಿಸ್ಸನ್ನಾಗಿ ಅರ್ಪಿಸಿದರು: "ಯತ್ಪುರುಷೇಣಹವಿಷಾ । ದೇವಾ ಯಜ್ಞಮತನ್ವತ ।" ಅನಾದ್ಯನಂತ ಕಾಲವೆಲ್ಲವೂ ಋತುರೂಪಿಯಾಗಿ ಇದರಲ್ಲಿ ಅಡಕವಾಯಿತು: "ವಸಂತೋ

ಅಸ್ಯಾಸೀದಾಜ್ಯಂ । ಗ್ರೀಷ್ಮ ಇಧ್ಮಃ । ಶರದ್ಧವಿಃ ।'' ಗಾಯತ್ರಿಯೇ ಮೊದಲಾದ ಏಳು ಛಂದಸ್ಸುಗಳೂ ಪರಿಧಿಗಳು. "ದ್ವಾದಶಮಾಸಾಃ ಪಂಚರ್ತವಃ। ತ್ರಯ ಇಮೇ ಲೋಕಾಃ । ಅಸಾವಾದಿತ್ಯ ಏಕವಿಗ್ಂಶಃ" ಎಂಬ ಕ್ರಮದಲ್ಲಿ ಹನ್ನೆರಡು ತಿಂಗಳೂ, ಐದು ಋತುಗಳೂ, ಮೂರು ಲೋಕಗಳೂ, ಒಬ್ಬ ಸೂರ್ಯನೂ ಸೇರಿ ಇಪ್ಪತ್ತೊಂದು ತತ್ತ್ವಗಳು ಸಮಿತ್ತುಗಳಾದವು. ಹೀಗೆ ಯಜ್ಞಾರ್ಪಿತವಾದ ಪುರುಷನೇ ಸೃಷ್ಟಿಯಾಗಿ ಆವಿರ್ಭವಿಸುತ್ತಾನೆ. ಅವನ ಮುಖದಿಂದ, ತೋಳಿನಿಂದ, ತೊಡೆಯಿಂದ, ಕಾಲುಗಳಿಂದ, ನಾಲ್ಕು ವರ್ಣಗಳೂ, ಮನಸ್ಸಿನಿಂದ ಚಂದ್ರನೂ, ಕಣ್ಣುಗಳಿಂದ ಸೂರ್ಯನೂ, ಮುಖದಿಂದ ಇಂದ್ರಾಗ್ನಿಗಳೂ ಪ್ರಾಣದಿಂದ ವಾಯುವೂ, ನಾಭಿಯಿಂದ ಅಂತರಿಕ್ಷವೂ, ತಲೆಯಿಂದ ದೇವಲೋಕವೂ, ಕಾಲಿನಿಂದ ಭೂಮಿಯೂ, ಕಿವಿಯಿಂದ ದಿಕ್ಕುಗಳೂ... ಹೀಗೆ ಭೂತಭವ್ಯವಾಗಿ, ಅಮೃತತ್ತ್ವಕ್ಕೆ ಈಶನಾಗಿ ಸಮಸ್ತ ಚರಾಚರ ವಸ್ತುಶರೀರನಾಗಿ ಪರಮಪುರುಷನೇ ಸೃಷ್ಟಿ ಪ್ರವರ್ತಕನಾದನು. ಇವನನ್ನು ತಿಳಿಯುವುದು ಹೊರತು ಅಮೃತತ್ತ್ವಕ್ಕೆ ಬೇರೆ ದಾರಿಯೇ ಇಲ್ಲ "ನಾನ್ಯಃಪಂಥಾ ಅಯನಾಯ ವಿದ್ಯತೇ ॥" ಹೀಗೆ ಯಜ್ಞದಿಂದಲೇ ದೇವತೆಗಳು ಯಜ್ಞ ಮಾಡಿದರು: "ಯಜ್ಞೇನ ಯಜ್ಞಮಯಜನ್ತ ದೇವಾಃ ।" ಜನ್ಮರಹಿತನಾದ ಪರಮನೇ ಅನೇಕ ರೂಪಿಯಾಗುತ್ತಾನೆ: "ಅಜಾಯಮಾನೋ ಬಹುಧಾವಿಜಾಯತೇ ॥" ಹೀಗೆ ಯಜ್ಞವೆಂದರೆ ಸೃಷ್ಟಿ ಎಂದಂತಾಯಿತು. ಶುಕ್ಲ ಯಜುರ್ವೇದದ ಶತಪಥ ಬ್ರಾಹ್ಮಣದಲ್ಲಿ ಈ ಪುರುಷನನ್ನು ನಾರಾಯಣನೆಂದು ಕರೆದು, ಈ ಪುರುಷ ಯಜ್ಞವನ್ನು ಪಾಂಚರಾತ್ರ ಯಜ್ಞವೆಂದು ನಿರ್ದೇಶಿಸಿ ಸೃಷ್ಟಿ ಕ್ರಮವನ್ನು ವಿವರಿಸಲಾಗಿದೆ: "ಪುರುಷೋ ಹ ನಾರಾಯಣೋಕಾಮಯತ । ಅತಿತಿಷ್ಠೇಯಗ್ಂ ಸರ್ವಾಣಿ ಭೂತಾನಿ ಅಹಮೇವ ಇದಗ್ಂ ಸರ್ವಗ್ಂ ಸ್ಯಾಮಿತಿ । ಸ ಏತಂ ಪುರುಷಮೇಧಂ ಪಂಚರಾತ್ರಂ ಯಜ್ಞ ಕ್ರತುಮಾಪಶ್ಯತ್, ತಮಾಹರತ್ ತತ್ತೇನಾಯಜತ, ತೇನೇಷ್ಟ್ವಾ, ಅತ್ಯತಿಷ್ಠತ್ ಸರ್ವಾಣಿ ಭೂತಾನಿ ಇದಗಂ ಸರ್ವಮಭವತ್ ॥" (XIII–6.1) ಯಜ್ಞವೆಂದರೆ ಪುರುಷ, "ಯಜ್ಞೋ ವೈ ಪುರುಷಃ". ಯಜ್ಞವೆಂದರೆ ವಿಷ್ಣು. "ಯಜ್ಞೋ ವೈ ವಿಷ್ಣುಃ" ಸೃಷ್ಟಿಯಜ್ಞದ ಅನಂತರ, ಸೃಷ್ಟವಾದ ವಿಶ್ವದ, ಪೃಥ್ವಿಯ

ಸ್ಥಿತಿಗಾಗಿಯೂ ಈತನು ಶ್ರಮ ಪಡಬೇಕಾಯಿತು. ವರಾಹ ರೂಪಿಯಾಗಿ ಭೂಮಿಯನ್ನು ನೀರಿನಿಂದ ಉದ್ಧರಿಸಿದ ಕಥೆಯನ್ನು ತೈತ್ತಿರೀಯ ಬ್ರಾಹ್ಮಣ ಹೀಗೆ ಹೇಳುತ್ತದೆ. "ಸ ವರಾಹೋ ರೂಪಂ ಕೃತ್ವೋಪನ್ಯಮಜ್ಜತ್ । ಸ ಪೃಥಿವೀಮಧ ಆರ್ಛತ್ ॥" ಆದ್ದರಿಂದ ಅವನು ಪೃಥ್ವೀ ಪತಿಯಾದ ನೆಂದು ಶತಪಥ ಬ್ರಾಹ್ಮಣ ಹೇಳುತ್ತದೆ. "ಸೋಽಸ್ಯಾಃ ಪತಿಃ ಪ್ರಜಾಪತಿಃ" ಇವನ ಮಕ್ಕಳೇ ಆದ ದೇವಾಸುರರಲ್ಲಿ ಅಮೃತತ್ವಕ್ಕೆ ಭಾರೀ ಕಲಹವೇ ಆಯಿತು. ವಿಶ್ವದ ಸ್ಥಿತಿಯೇ ಶೋಚನೀಯವಾದಾಗ ಈತನು ಮತ್ತೆ ಮತ್ತೆ ಯಜ್ಞವಾಗಿ ಹುಟ್ಟಿ ಅದನ್ನು ಕಾಪಾಡುತ್ತಾನೆ. ಪೃಥ್ವಿಯೆಲ್ಲ ರಾಕ್ಷಸಾಕ್ರಾಂತ ವಾದಾಗ ಒಮ್ಮೆ ದೇವತೆಗಳು ಯಜ್ಞರೂಪಿಯಾದ ವಿಷ್ಣುವನ್ನು ವಾಮನನ ನ್ನಾಗಿ ಮುಂದು ಮಾಡಿಕೊಂಡುಹೋಗಿ ಅವರನ್ನು ಭಾಗ ಬೇಡಿದರು, ಅಸುರರು ವಾಮನನು ಮಲಗುವಷ್ಟು ಸ್ಥಳವನ್ನು ಮಾತ್ರ ಕೊಡಲೊಪ್ಪಿದರು. ಆಗ ದೇವತೆಗಳು ವಿಷ್ಣುವಾಮನನನ್ನು ಎಲ್ಲ ಕಡೆಗಳಲ್ಲಿಯೂ ಯಜ್ಞಗಳಿಂದ ಮುಚ್ಚಿ ವರ್ಧಿಸಿ ಸರ್ವವ್ಯಾಪಿಯನ್ನಾಗಿ ಮಾಡಿದರು, ಹೀಗೆ ಅವರು ಜಯ ಗಳಿಸಿದ ಕಥೆಯನ್ನು ಶತಪಥ ಬ್ರಾಹ್ಮಣ ಹೀಗೆ ಹೇಳುತ್ತದೆ. "ಯಜ್ಞೋ ವೈ ವಿಷ್ಣುಃ ಸ ದೇವೇಭ್ಯಃ ಇಮಾಂ ವಿಕ್ರಾಂತಿಂ ವಿಚಕ್ರಮೇ ಯಾ ಏಷಾಂ ಇಯಂ ವಿಕ್ರಾಂತಿಃ ಇದಮೇವ ಪ್ರಥಮೇನ ಪದೇನ ಪಸ್ಪಾರ, ಅಥೇದಮನ್ತರಿಕ್ಷಂ ದ್ವಿತೀಯೇನ। ದಿವಮುತ್ತಮೇನ"[1-1-2] "ಇಮೇ ವೈ ಲೋಕಾಃವಿಷ್ಣೋರ್ವಿ ಕ್ರಮಣಂ ವಿಷ್ಣೋರ್ವಿಕ್ರಾಂತಂ ವಿಷ್ಣೋಃಕ್ರಾಂತಂ [ 1-4-2 ]" "ಇದಂ ವಿಷ್ಣುರ್ವಿಚಕ್ರಮೇ । ತ್ರೇಧಾ ನಿದಧೇ ಪದಂ ॥" ಕೂರ್ಮಾವತಾರ ಹೀಗೆ ವರ್ಣಿತವಾಗಿದೆ. "ಸ ಯತ್ಕೂರ್ಮೋ ನಾಮ । ಏತದ್ವೈರೂಪಂ ಕೃತ್ವಾ ಪ್ರಜಾಪತಿಃ ಪ್ರಜಾ ಅಸೃಜತ ।" "ಯೋ ವೈ ಸಏಷಾಂ ಲೋಕನಾ ಮಪ್ಸು ಪ್ರವಿದ್ಧಾನಾಂ ಪರಾಙ ಸ್ಯೋತ್ಯಕ್ಷರತ್‌ಸ ಏಷ ಕೂರ್ಮಃ" ಹೀಗೆ ದೇವತ್ವದ ರಕ್ಷಣೆಗಾಗಿ ನಿಂತ ಪ್ರಜಾಪತಿಯು ಅವರ ಶ್ರೇಯಸ್ಸಿಗಾಗಿ ಅನೇಕ ಉಪ ಯಜ್ಞಗಳನ್ನೂ ಸೃಷ್ಟಿಸಬೇಕಾಯಿತು. "ಯಜ್ಞೇವ ವೈ ಪ್ರಜಾಪತಿಃ ಪ್ರಜಾ ಅಸೃಜತ ತಾ ಉಪಯದ್ಭಿರೇವಾಸೃಜತ ॥" (ತೈ. ಸಂ VI-IV-I) ಈ ಯಜ್ಞಕ್ಕೆ ತಪಸ್ಸೂ ಶ್ರದ್ಧೆಯೂ ಅತ್ಯವಶ್ಯವಾದವು. ತಪಸ್ಸಿನಿಂದಲೇ ದೇವತೆಗಳು ಅಮೃತತ್ವವನ್ನೂ ಋಷಿಗಳು ಸ್ವರ್ಗ ಪ್ರಾಪ್ತಿಯನ್ನೂ ಪಡೆ

ದರು. ಶ್ರದ್ಧೆಯಿಂದಲೇ ದೇವತೆಗಳು ದೇವತ್ವವನ್ನು ಪಡೆಯುತ್ತಾರೆ ॥ ಎಂದು ತೈತ್ತಿರಿಯ ಬ್ರಾಹ್ಮಣ ಹೇಳುತ್ತದ : “ತಪಸಾ ದೇವಾ ದೇವತಾ ಮಗ್ರ ಆಯನ್ । ತಪಸರ್ಷಯಃ ಸ್ವರನ್ವವಿಂದನ್ ।” “ಶ್ರದ್ಧ ಯಾದೇವೋ ದೇವತ್ವಮಶ್ನುತೇ ॥” ಯಜ್ಞದಿಂದಲೇ ದೇವತೆಗಳು ಸ್ವರ್ಗ ಪಡೆದರೆಂದು ತೈತ್ತಿರೀಯ ಆರಣ್ಯಕ ಹೇಳುತ್ತದೆ : “ಯಜ್ಞೇನ ದೇವಾಃ ಸ್ವರ್ಗಂ ಲೋಕಮಾಯನ್”. ಆದರೆ ಯಜ್ಞವು ದೇವತೆಗಳಿಂದ ನಾನಾ ರೂಪಿ ಯಾಗಿ ತಪ್ಪಿ ಹೋಗುತ್ತದೆ. ದೇವತೆಗಳು ಮಾತ್ರ ಅದನ್ನು ಬಿಡರು. ಹೀಗೊಮ್ಮೆ ಅಶ್ವರೂಪಿಯಾಗಿ ಓಡಿ ಅವನು (ಯಜ್ಞ ಪುರುಷನು) ಒಂದು ವರ್ಷ ವಾಸ ಮಾಡಿದ ಮರವೇ ಅಶ್ವತ್ಥ : “ಅಗ್ನಿರ್ದೇವೇಭ್ಯೋ ನಿಲಾ ಯತ । ಅಶ್ವೋರೂಪಂಕೃತ್ವಾ । ಸೋsಶ್ವತ್ಥೇ ಸಂವತ್ಸರ ಮತಿಷ್ಠತ್ ತದಶ್ವತ್ಥಸ್ಯಾಶ್ವತ್ಥತ್ವಮ್ ॥” ಯಜ್ಞವು ಪ್ರಜಾ ಪತಿಯ ಮಕ್ಕಳಿಗೆಲ್ಲ ಅಂಟಿ ಬಂದದ್ದು. ಮಾನವನು ಪ್ರತಿದಿನವೂ ಮುಖ್ಯವಾದ ಐದು ಯಜ್ಞ ಗಳನ್ನು ಮಾಡಲೇಬೇಕೆಂದು ತೈತ್ತಿರೀಯ ಆರಣ್ಯಕ ಹೇಳುತ್ತದೆ : “ಪಂಚವಾ ಏತೇ ಮಹಾ ಯಜ್ಞಾಃ ಸತತಿ ಪ್ರತಾಯನ್ತೇ ಸತತಿ ಸಂತಿಷ್ಠನ್ತೇ ದೇವ ಯಜ್ಞಃ ಪಿತೃಯಜ್ಞಃ ಭೂತಯಜ್ಞಃ ಮನುಷ್ಯಯಜ್ಞಃ ಬ್ರಹ್ಮಯಜ್ಞ ಇತಿ.” ಇಲ್ಲಿ ಯಜ್ಞವೆಂದರೆ “ಪ್ರೀಣನ, ತೃಪ್ತಿಪಡಿಸುವುದು” ಎಂದರ್ಥ. ಹೀಗೆ ಮಾನವನ ವ್ಯಕ್ತಿತ್ವದ ಸರ್ವತೋಮುಖ ಶ್ರೇಯೋಭಿವೃದ್ಧಿಗಾಗಿಯೇ ಯಜ್ಞ ನಿರ್ಮಿತವಾಯಿತು. ಅವನು ಮಾಡುವುದೆಲ್ಲ ಯಜ್ಞವಾಗಬೇಕೆಂಬುದೇ ಯಜುರ್ವೇದದ ಉಪದೇಶ. ಸೃಷ್ಟಿಯಲ್ಲೇ ಅಂತರ್ಗತವಾದ ಯಜ್ಞ, ಪ್ರಕೃತಿಯಲ್ಲೂ ಮಾನವ ಜೀವನದಲ್ಲೂ ಅಹರ್ನಿಶಿ ನಡೆಯುತ್ತಲೇ ಇದೆ. ಅಧಿಲೋಕ, ಅಧಿಜ್ಯೌತಿಷ, ಅಧಿವಿದ್ಯ, ಅಧಿಪ್ರಜ, ಅಧ್ಯಾತ್ಮ ಎಂಬ ರೀತಿ ಗಳಲ್ಲಿ. ಆದಿತ್ಯಾಗ್ನಿಯರ ಸಂಯೋಗದಿಂದ ನೀರೂ, ಆಚಾರ್ಯ ಶಿಷ್ಯ ಸಂಯೋಗ ದಿಂದ ವಿದ್ಯೆಯೂ, ಮಾತಾಪಿತೃಸಂಯೋಗದಿಂದ ಪ್ರಜೆಯೂ ಪೃಥಿವ್ಯಾಕಾಶ ಗಳ ಸಂಯೋಗದಿಂದ ಲೋಕಗಳೂ ಆಗುತ್ತವೆ. ತೈತ್ತಿರೀಯ ಉಪನಿಷತ್ತು ಈ ವಿದ್ಯೆಗಳನ್ನು ಮಹಾ ಸಂಹಿತೆಗಳೆಂದು ಕರೆದಿದೆ. ಈ ಎಲ್ಲ ಯಜ್ಞಗಳ ಕೊನೆಯ ಮೆಟ್ಟಿಲೇ ಆತ್ಮಾರ್ಪಣ. ಜೀವನವೆಲ್ಲ ಯಜ್ಞ, ಆತ್ಮನೇ ಯಜಮಾನ; ಶ್ರದ್ಧೆಯೇ ಪತ್ನಿ; ಶರೀರವೇ ಇಧ್ಮ (ಕಟ್ಟಿಗೆ); ಎದೆ ಕೂದಲೇ ದರ್ಭೆ;

ಎದೆಯೇ ವೇದಿ; ತಲೆಯಶಿಖೆಯೇ ವೇದ; ಹೃದಯವು ಯೂಪಸ್ತಂಭ; ಇದರಲ್ಲಿ ಅರ್ಪಿಸಲ್ಪಡುವ ಪಶುವೇ ಕೋಪ, ಕಾಮವೇ ಆಜ್ಯ; ತಪಸ್ಸೇ ಅಗ್ನಿ; ದಕ್ಷಿಣೆಯು ಶಾಂತಿ ಹೇತು: ವಾಕ್ಪ್ರಾಣ ಚಕ್ಷುಸ್ಸುಗಳು ಹೋತೃ ಉದ್ಗಾತೃ ಅಧ್ವರ್ಯುಗಳು; ಈ ಯಜ್ಞಕ್ಕೆ ಮರಣವೇ ಅವಭೃತ; ಬ್ರಹ್ಮ ಪ್ರಾಪ್ತಿಯೇ ಫಲ. ಇಂತಹ ಆತ್ಮಹವಿಸ್ಸಮರ್ಪಣ ರೂಪವಾದ ಯಜ್ಞ ತೈತ್ತಿರೀಯೋಪನಿಷತ್ತಿನ ನಾರಾಯಣೀಯದಲ್ಲಿ ಹೀಗೆ ವರ್ಣಿತವಾಗಿದೆ: “ತಸ್ಯೈವಂವಿದುಷೋ ಯಜ್ಞಸ್ಯಾತ್ಮಾ ಯಜಮಾನಃ ಶ್ರದ್ಧಾಪತ್ನೀ ಶರೀರ ಮಿಧ್ಮ ಮುರೋ ವೇದಿಃ ಲೋಮಾನಿ ಬರ್ಹಿಃ ವೇದಃ ಶಿಖಾ ಹೃದಯಂಯೂಪಃ ಕಾಮ ಆಜ್ಯಂ ಮನ್ಯುಃ ಪಶುಃ ತಪೋಽಗ್ನಿಃ ಶಮಯಿತಾ ದಕ್ಷಿಣಾ ವಾಗ್ಘೋತಾ ಪ್ರಾಣ ಉದ್ಗಾತಾ ಚಕ್ಷುರಧ್ವರ್ಯುಃ ಮನೋಬ್ರಹ್ಮಾ ಶ್ರೋತ್ರಮಗ್ನೀನ್.........” ಎಂದು ಮುಂತಾಗಿ. ನಮ್ಮಲ್ಲಿರುವ ಪಶುತ್ವದ ಅರ್ಪಣೆಯೇ ದೇವತ್ವಕ್ಕೆ ಮಾರ್ಗ ಎಂಬ ತತ್ವ ಇಲ್ಲಿ ಸ್ಪಷ್ಟವಾಗಿದೆ. 'ದಾನವ'ನಾದ ಮಾನವನು ಪಶುತ್ವದ ಕಡೆಯಿಂದ ಅಮರತ್ವಕ್ಕೆ ಸಾಗಲೆಂದೇ ಯಜುರ್ವೇದದ ಸಂದೇಶ. ವಿಶ್ವದ ಮುನ್ನಡೆ ಇಂತಹ ಯಜ್ಞದಿಂದಲೇ ಆಗಬೇಕು. ತೈತ್ತಿರೀಯ ಬ್ರಾಹ್ಮಣದ ಅಶ್ವಮೇಧ ಪ್ರಶ್ನದಲ್ಲಿ ಅಶ್ವಮೇಧವನ್ನು ರಾಷ್ಟ್ರ ಕಟ್ಟುವ ಯಜ್ಞ ಎಂದು ಕರೆದಿದೆ: “ರಾಷ್ಟ್ರಮಶ್ವಮೇಧಃ” ಇಂತಹ ಯಜ್ಞಕ್ಕೆ ಬಹಳ ತ್ಯಾಗಬೇಕು. ಯಜ್ಞಾಶ್ವವು ರಾಜನ ಸರ್ವಸ್ವದ ಸಂಕೇತ; ಅದು ಅವನ ಸಕಲೈಶ್ವರ್ಯ, ಸಕಲಬಲಗಳ ಕುರುಹು. ಇವರ ತ್ಯಾಗವೇ, ಮೇಧವೇ ರಾಷ್ಟ್ರೋದಯದ ಯಜ್ಞ. ಅನೇಕ ಪ್ರಜೆಗಳ ಆತ್ಮಾರ್ಪಣದ ಫಲವೇ ರಾಷ್ಟ್ರವರ್ಧನೆ. ಇದರ ಸಂಕೇತವಾದ ಅಶ್ವವನ್ನು “ಅಶ್ವೋ ವೈ ಪ್ರಜಾಪತಿಃ” ಎಂದು ಕರೆದಿರುವುದು ಅರ್ಥವತ್ತಾಗಿದೆ. ಹೀಗೆ ಸಂಗ್ರಹಣ ಬುದ್ಧಿಯಿಂದ ಜನಗಳನ್ನು ಒಂದುಗೂಡಿಸುವ ಉದ್ದೇಶದಿಂದ, ಮಾಡಬೇಕಾದ ಕೆಲಸವಿದು: “ಸಾಂಗ್ರಹಣ್ಯೇಷ್ಟ್ಯಾಯಜತೇ। ಇಮಾಗ್ಂ ಜನತಾಗ್ಂ ಸಂಗೃಹ್ಣಾನೀತಿ।” ಇಂತಹ ಸಾಮೂಹಿಕವಾದ, ಸಾಮಾಜಿಕವಾದ, ಬೃಹತ್ತರವಾದ ಯಜ್ಞದಿಂದ ಹಿಡಿದು ಕೇವಲ ವೈಯಕ್ತಿಕವಾದ ಮುಕ್ತಿಯಜ್ಞದವರೆಗೆ ಎಲ್ಲ ವೇದೋಕ್ತವಾದ ಯಜ್ಞಗಳಿಗೂ ಒಂದೊಂದು ಅಂತರಾರ್ಥವಿದ್ದೇ ಇದೆ. ಆತ್ಮ ರಕ್ಷಣೆಗಾಗಿ ಮಾಡುವ ಧರ್ಮಯುದ್ಧವನ್ನೂ ಯಜುರ್ವೇದದಲ್ಲಿ ಯಜ್ಞವೆಂದು ಕರೆಯಲಾಗಿದೆ.

"ಕುರುಕ್ಷೇತ್ರವನ್ನೇ ಯಜ್ಞಭೂಮಿಯನ್ನಾಗಿ ಮಾಡಿ ವಿಷ್ಣುವನ್ನೇ ದೇವತೆಗಳು ಯಜ್ಞಮಾಡಿದಾಗ ಅವನ ಎಡಗೈಯಿಂದ ಧನುಸ್ಸೂ ಬಲಗೈಯಿಂದ ಬಾಣಗಳೂ ಬಂದುವೆಂದು", ತೈತ್ತಿರೀಯ ಆರಣ್ಯಕ ಹೇಳುತ್ತದೆ. ಇದು ಕ್ಷತ್ರ ಯಜ್ಞ. ಇದರಲ್ಲಿ ಧನುಸ್ಸೇ ಓಂಕಾರವಾಗಿ, ಆತ್ಮನೇ ಶರವಾಗಿ, ಬ್ರಹ್ಮವೇ ಲಕ್ಷ್ಯವಾಗಿ, ಬಾಣಕ್ಕೆ ಬ್ರಹ್ಮತನ್ಮಯತಾರೂಪ ಭಕ್ತಿಯುಂಟಾದಾಗ ಮುಕ್ತಿ ಎಂದು ಬ್ರಹ್ಮಯಜ್ಞವನ್ನು ಮುಂಡಕ ಶ್ರುತಿ ಹೇಳುವುದು ಇಲ್ಲಿ ನೆನಪಾಗಬಹುದು. ಹೀಗೆ ಅಣೋರಣೀಯವಾಗಿ ಮಹತೋ ಮಹೀಯವಾಗಿ ಸರ್ವವ್ಯಾಪಿಯಾದ ಯಜ್ಞ ಅದ್ವಿತೀಯವಾದದ್ದು. ವೈದಿಕವಾದ ಈ ದೃಷ್ಟಿಯಲ್ಲಿ ಸ್ತ್ರೀ ಪುರುಷರನ್ನೂ ಯಜ್ಞದ ರೂಪಕದಲ್ಲಿ ವಿವರಿಸುವುದು ಗಮನೀಯ. ಸ್ತ್ರೀ ಪುರುಷರನ್ನು ಕೇವಲ ಕಾಮ ಸಾಧನೆಗಳೆಂದು ಕಾಣುವ ಇಂದಿನ ಮನಃಪ್ರವೃತ್ತಿಗೆ ವೈದಿಕದರ್ಶನದ ಈ ಕಣ್ಣು ಅವಶ್ಯವಾಗಿದೆ. ಶ್ರುತಿಯ ದೃಷ್ಟಿಯಲ್ಲಿ ಯಾವುದೂ ಅಪವಿತ್ರವಲ್ಲ. ಮತ್ತು ಎಲ್ಲವೂ ಯಜ್ಞವೇ. ಹೀಗೆ ವೈದಿಕನಿಗೆ ಯಜ್ಞ ವಿರೋಧಿ ಪ್ರವೃತ್ತಿಗಳು ಸೃಷ್ಟಿಸ್ಥಿತಿಲಯಗಳನ್ನು ವಿರೋಧಿಸುವ ರಾಕ್ಷಸ ಶಕ್ತಿಗಳಾಗಿ, ಸ್ವಾರ್ಥ ಶಕ್ತಿಗಳಾಗಿ ಕಾಣುವುದರಲ್ಲಿ ಆಶ್ಚರ್ಯವಿಲ್ಲ. ಸಾತ್ತ್ವಿಕನು ವೇದದ ಕಣ್ಣಿನಿಂದ ಕಾಣಬೇಕಾದ ವಿಶ್ವಯಜ್ಞವನ್ನು ಭಗವಂತನು ಗೀತೆಯಲ್ಲಿ ಹೀಗೆ ಸಂಗ್ರಹಿಸಿದ್ದಾನೆ :

> " ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾಹುತಂ
> ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮ ಸಮಾಧಿನಾ ॥
>
> (ಗೀತಾ IV-24)

ಬ್ರಹ್ಮವೇ ಅರ್ಪಣ, ಬ್ರಹ್ಮವೇ ಹವಿಸ್ಸು, ಬ್ರಹ್ಮವೇ ಅಗ್ನಿ, ಹುತ ಮಾಡುವವನೂ ಪರಮಾತ್ಮನೇ, ಹೋಗಿ ಸೇರತಕ್ಕದ್ದೂ ಪರಮಾತ್ಮನನ್ನೇ. ಇದಕ್ಕೆ ಸಾಧನವೇ ಬ್ರಹ್ಮಕರ್ಮ ಸಮಾಧಿಯೆಂಬ ಕರ್ಮಯೋಗ.

ಹೀಗೆ ವೇದಾಂತ ದರ್ಶನಕ್ಕೆ "ಯಜ್ಞ"ವು ಅಡಿಗಲ್ಲಾಗಿದೆ.

॥ ಓಂ ಸರ್ವಂ ವಿಷ್ಣುಮಯಂ ಜಗತ್ ॥

॥ ಶ್ರೀ ॥

## ೨. ಸೃಷ್ಟಿಯ ಹಿಂದು ಮುಂದು (ನಾಸದೀಯ)

ವಿವಿಧವೂ ವಿಚಿತ್ರವೂ ಆಶ್ಚರ್ಯಮಯವೂ ಆದ ಚೇತನಾ ಚೇತನಾತ್ಮಕ ವಾದ ಈ ಜಗತ್ತು ಎಂದೆಂದೂ ಹೀಗೆಯೇ ಇದ್ದಿತೇ ? ಅಥವಾ ಸೃಷ್ಟಿಗೆ ಪೂರ್ವದಲ್ಲಿ ಇದು ಇರಲಿಲ್ಲವೇ ? ಹಾಗಿಲ್ಲದಿದ್ದರೆ ಇದರ ಅವಸ್ಥೆ ಆಗ ಹೇಗ ಇದ್ದಿತು ? ಸೃಷ್ಟಿಕರ್ತನಾದ ಪರಮಾತ್ಮನಿಗೂ ಇದಕ್ಕೂ ಆಗ ಇದ್ದ ಸಂಬಂಧ ವೇನು ? ಮುಂದೆ ಈ ಜಗತ್ತಿನ ಭವಿತವ್ಯವೇನು ? ಎಂಬ ಈ ಗಹನವಾದ ವಿಚಾರಗಳು ವೈದಿಕ ದರ್ಶನಕ್ಕೆ ತಳಪಾಯದಂತಿವೆ. ಇಂತಹ ವಿಚಾರಗಳನ್ನೆಲ್ಲ ಕುರಿತ ದಿವ್ಯ ಸೂಕ್ತ ಋಗ್ವೇದದಲ್ಲಿ ಹತ್ತನೆಯ ಮಂಡಲದ ೧೨೯ನೆಯದು ಆಗಿದೆ. ಇದೇ ಪ್ರಸಿದ್ಧವಾದ „ ನಾಸದೀಯ ಸೂಕ್ತ. " ಋಗ್ವೇದದ ಅತ್ಯಂತ ಸುಂದರವಾದ ಸೂಕ್ತಗಳಿಗೆ ಇದು ಒಂದು ಶ್ರೇಷ್ಠ ನಿದರ್ಶನ.

ಸೃಷ್ಟಿಗೆ ಪೂರ್ವದಲ್ಲಿ ಈ ಜಗತ್ತು ಇಲ್ಲದೆ ಇರಲಿಲ್ಲ. ಏಕೆಂದರೆ ಇರುವುದು ಈ (ಜಗತ್ತು) ಇಲ್ಲದುದರ ಪರಿಣಾಮವಾಗಲಾರದು ಆದರೆ ಅದು ಈಗ ಇರುವಂತೆಯೂ ಇರಲಿಲ್ಲ (ಏಕೆಂದರೆ ಇದ್ದುದೇ ಇರುವುದಾದರೆ ಸೃಷ್ಟಿಗೆ ಅರ್ಥವಿಲ್ಲ). ಅಂದ ಮೇಲೆ ಈಗಿನ ಜಗತ್ತಿಗೆ ಮೂಲಕಾರಣಭೂತವಾಗಿ ಇಂದ್ರಿಯಗಳಿಗೆ ಅಗ್ರಾಹ್ಯವಾದ' ನಾಮರೂಪಗಳನ್ನು ಹೊಂದದ, ಅವ್ಯಕ್ತ ವಾದ ಸ್ವರೂಪದಿಂದ ಇದ್ದಿತು. ಇದಕ್ಕೆ ಆಗ „ ಅಸತ್ ". ಎಂದು ಹೆಸರು. „ ಸತ್ " ಎಂದರೆ ಈಗ ಸುಸ್ಪಷ್ಟವಾಗಿ ವ್ಯಕ್ತಸ್ವರೂಪವುಳ್ಳದ್ದು, ಇಂದ್ರಿಯ ಗಮ್ಯವಾದುದು, ವ್ಯವಹಾರ್ಯವಾದದ್ದು. ಸಮಸ್ತಲೋಕಗಳೂ ಅಂತರಿಕ್ಷವೂ ಅದರಿಂದ ಆಚಿನ ಪ್ರದೇಶವೂ ಯಾವುದೂ ಆ ಕಾಲದಲ್ಲಿ ಇರಲಿಲ್ಲ. ಸೂಕ್ತ ದರ್ಶಿಯು ಆಶ್ಚರ್ಯಪಡುತ್ತಾನೆ. „ ಇವೆಲ್ಲವನ್ನೂ ತನ್ನಲ್ಲಿಯೇ ಒಳಗೊಂಡು ಆವರಿಸಿದ ಪರವಸ್ತುವೆಂಬುದೊಂದು ಇದ್ದಿತಾದರೋ ಹೇಗೆ ? ಯಾವುದೇ ಪ್ರಾಣಿಯ ಸುಖ ಶಾಂತಿಗಳು ಯಾವ ಪ್ರದೇಶಗಳಲ್ಲಿ ಅಡಗಿಕೊಂಡಿದ್ದವು ? ಅಥವಾ ಗಹನವೂ ಗಂಭೀರವೂ ಆದ ಮೂಲ ದ್ರವ್ಯದ ರೂಪಾಂತರವಾದ ಉದಕವು ಇದ್ದಿತೋ? ಹಾಗಾದರೆ ಆಗ ಮೃತ್ಯುವಾಗಲೀ ಅಮೃತತ್ವವಾಗಲೀ ಇರಲಿಲ್ಲವಷ್ಟೆ ! ಹಗಲೂ ರಾತ್ರಿಗಳ ಪರಿಜ್ಞಾನವೂ ಇಲ್ಲದ ಆ ಕಾಲದಲ್ಲಿ

ಸಕಲ ವೇದಾಂತ ಪ್ರಸಿದ್ಧವಾದ ಅದ್ವಿತೀಯನಾದ ತದೇಕಂ ಎನಿಸಿಕೊಳ್ಳುವ ಬ್ರಹ್ಮ ತತ್ತ್ವವು ತನ್ನ ವಿಲಕ್ಷಣವಾದ ಸ್ವಧಾ ಸಮೇತವಾಗಿ (ಶ್ರೀ ವಿಶಿಷ್ಟವಾಗಿ ಶ್ರೀನಿವಾಸವಾಗಿ) ಇದ್ದಿತು. ಶ್ವಾಸೋಚ್ಛ್ವಾಸರಹಿತವಾಗಿಯೂ ನಿರ್ಜೀವ ಸಜೀವ ಪದಾರ್ಥಗಳ ವ್ಯತ್ಯಾಸವಿಲ್ಲದಂತೆಯೂ ಸೂಕ್ಷ್ಮರೂಪದಿಂದ ಅಚೇ-ತನದಂತೆ ಕಾಣುತ್ತಿದ್ದ ಜೀವಾತ್ಮನಿಗೆ ತನ್ನ ಕೃಪೆಯಿಂದ ಕರಣ ಕಳೇವರ ಗಳನ್ನು ಜೋಡಿಸಿ ಪರಮಾತ್ಮನು ಸೃಷ್ಟಿಯನ್ನು ಆರಂಭಿಸಿದನು. ಇಂಥ ಸರ್ವಸ್ಮಾತ್‌ಪರನಾದ, ಸಕಲೇತರ ವಿಲಕ್ಷಣನಾದ ಷಡ್ಗುಣ ಪರಿಪೂರ್ಣನಾದ ಪರಮಾತ್ಮನನ್ನು ಹೊರತು ಜೀವಾತ್ಮನಿಗೆ ಮತ್ತಾವ ಆಸರೆಯೂ ಆಗ ಇರ-ಲಿಲ್ಲ ಮೇದಮೇಲೆ ಅವನೇ ಇವನ ನಿರುಪಾಧಿಕ ಬಂಧು, ಸಹಜ ಸ್ನೇಹಿತ. ಅಲ್ಲಿಯವರೆಗೂ ಗೂಡವಾದ ಅಂಧಕಾರವೇ ಎಲ್ಲವನ್ನೂ ಆವರಿಸಿತ್ತು. ಉದಕಮಯವಾಗಿ ಸೂಕ್ಷ್ಮವಾಗಿದ್ದ ಜಗತ್ತು ಆಗ ಅತ್ಯಂತ ಕೃಪಣಾವಸ್ಥೆ ಯಿಂದ ಕಾಂತಿರಹಿತವಾಗಿ ಅಪ್ರಕಟಿತವಾಗಿಯೇ ಇದ್ದಿತು. ಆಗ ಈ ಸ್ಥಿತಿ ಯಿಂದ ಅದನ್ನು ಪಾರುಮಾಡಿ ಇದಕ್ಕೊಂದು ಉತ್ತಮ ರೂಪವನ್ನೂ ಭವಿತ ವ್ಯವನ್ನೂ ತನ್ನ ಮಹಿಮೆಯಿಂದಲೇ ಅನುಗ್ರಹಿಸಬೇಂಬ ಭಗವಂತನ ದೃಢ ಸಂಕಲ್ಪವು ಅವನ ಧ್ಯಾನರೂಪವಾದ ತಪಸ್ಸಿನಿಂದ, "ಈಕ್ಷಣ "ದಿಂದ ಆರಂಭ ವಾಗಿ ಕಾರ್ಯರೂಪಕ್ಕೆ ಇಳಿಯಿತು. ಈ ಭಗವತ್ ಸಂಕಲ್ಪಕ್ಕೆ ಕಾಮ ಎಂದು ಹೆಸರಾಯಿತು. ಹೀಗೆ ಹಿಂದಿನ ಸೃಷ್ಟಿಯಲ್ಲಿ (ಕಲ್ಪದಲ್ಲಿ) ಪ್ರಾಣಿಗಳಿಂದ ಆಚರಿಸಲ್ಪಟ್ಟ ಪಾಪ ಪುಣ್ಯ ಕರ್ಮಗಳು ಪುನಃ ಸೃಷ್ಟಿಗೆ ಬೀಜಭೂತವಾಗಿ ಇರುವುದೆಂಬುದನ್ನೂ ಸತ್ ಮತ್ತು ಅಸತ್ ಗಳು "ಬಂಧು" ಗಳಾಗಿ ಒಂದರ ಒಂದು ರೂಪಾಂತರವೆಂಬುದನ್ನೂ ಪ್ರಾಜ್ಞರಾದ ಋಷಿಗಳು ತಮ್ಮ ಯೋಗಬಲದಿಂದ ತಿಳಿಯುವರು. ಈ ತಿಳುವಳಿಕೆಗೆ ಅವರ ಮನೀಷೆಯು ಸಾಧನವಾಗುವದು. ಕಾರ್ಯೋನ್ಮುಖನಾದ ಪರಮಾತ್ಮನ ಉದ್ಯಮವು ಸೂರ್ಯರಶ್ಮಿಯಂತೆ ಸರ್ವ ದಿಕ್ಕುಗಳಲ್ಲೂ ವ್ಯಾಪಿಸಿ ವಿಸ್ತಾರಗೊಂಡಿತು. ಆಗ ಕರ್ಮಗಳೂ ಕರ್ತೃಗಳೂ ಮತ್ತು ಫಲಭೋಕ್ತೃಗಳೂ ಆದ ಜೀವರು ಗಳು ವ್ಯಕ್ತರಾದರು. ಭೋಗ್ಯರೂಪವಾದ ಪಾಂಚಭೌತಿಕ ಪ್ರಪಂಚವೂ ಉತ್ತಮ ಭೋಗ್ಯವಸ್ತುಗಳೂ— ಹೀಗೆ ಎಲ್ಲ ಸೃಷ್ಟಿಯೂ ಉಪಕ್ರಮಿಸಿತು. ಇದನ್ನು ಪಾರಮಾರ್ಥಿಕವಾದಿ (ಇದ್ದುದು ಇದ್ದಂತೆ) ತಿಳಿಯಬಲ್ಲ ಮಹಾ

ಪುರುಷನು ಈ ಲೋಕದಲ್ಲಿ ಯಾವನು ತಾನೇ ಇರುವನು ? (ಶ್ರುತಿಯೊಂದೇ ಇದರ ಮರ್ಮವನ್ನು ಭೇಧಿಸಿ ತಿಳಿಸಬಲ್ಲದು.) ಮಹಾಜ್ಞಾನಿಗಳಾದ ದೇವತೆಗಳೇ ಈ ಸೃಷ್ಟಿಕಾಲಕ್ಕಿಂತ ಈಚಿನವರು ಎಂದಮೇಲೆ ಸೃಷ್ಟಿಗೆ ಪೂರ್ವಕಾಲದ ಸ್ಥಿತಿಯನ್ನು ಯಾವನು ತಾನೆ ವರ್ಣಿಸಿ ಹೇಳಬಲ್ಲನು ? ಸೃಷ್ಟಿಕರ್ತನಾದ ಒಬ್ಬನು ಯಾವನೋ ಅವನೊಬ್ಬನಿಂದಲೇ ಅದು (ಈ ಜಗತ್ತು) ಧರಿಸಲ್ಪಟ್ಟಿದೆ. ಹಾಗಲ್ಲದಿದ್ದರೆ ಇದಕ್ಕೆ ಬೇರೆ ಯಾರೂ ಧಾರಕರೂ, ಪೋಷಕರೂ, ಇರಲಾರರು, ಇಂತಹ ಅಧ್ಯಕ್ಷನು (ತನ್ನ ಕಣ್ಣಿನಿಂದಲೇ ಇದನ್ನು ನೋಡಿದ ಏಕಮೇವ ಪರಮ ಪುರುಷನು) ತನ್ನದೇ ಆದ ಪರಮವ್ಯೋಮದಲ್ಲಿ ಸರ್ವದಾ ಬೆಳಗುತ್ತಿರುವನು ಅವನೊಬ್ಬನಿಗೆ ಮಾತ್ರ ಇದರ ರಹಸ್ಯ ಗೊತ್ತು. ಒಂದು ವೇಳೆ ಅವನೇ ಇದರ ಮರ್ಮವನ್ನು ತಿಳಿಯದಿದ್ದರೆ ಇದು ಮತ್ತೆ ಯಾರಿಗೆ ತಿಳಿಯಬೇಕು ? "

ಈ ಸೂಕ್ತದಿಂದ ನಾವು ಗ್ರಹಿಸಬೇಕಾದ ವಿಷಯಗಳು ಹೀಗಿವೆ. ವೈದಿಕ ದರ್ಶನದಲ್ಲಿ ದೇವರು ಒಬ್ಬನೇ ಎಂಬ ಕಲ್ಪನೆ ಇರಲಿಲ್ಲವೆಂದೂ ಋಗ್ವೇದವು "ನಾನಾ ದೇವತೆಗಳನ್ನು ನಿರ್ಮಿಸುವ ಕಾರಖಾನೆ" ಯೆಂದೂ ಮುಂತಾಗಿ ಪ್ರಚಲಿತವಾಗಿರುವ ಕಲ್ಪನೆಗಳು ಸತ್ಯಕ್ಕೆ ಎಷ್ಟು ದೂರವಾಗಿವೆ ಎಂಬುದನ್ನು ಕೇವಲ ಈ ಸೂಕ್ತ ಒಂದೇ ಮನದಟ್ಟು ಮಾಡಿಕೊಡುತ್ತದೆ. ಇನ್ನೂ ಹಲವಾರು ಎಡೆಗಳಲ್ಲಿ ("ಏಕಂ ಸತ್ ವಿಪ್ರಾಬಹುಧಾವದಂತಿ" ಇತ್ಯಾದಿಗಳಲ್ಲಿ) ಇದು ಸ್ಪಷ್ಟವಾಗಿದೆ. ("ದೇವರು ಮತ್ತು ದೇವತೆಗಳು" ಎಂಬ ಇದೇ ಗ್ರಂಥದ ಅಧ್ಯಾಯನ್ನು ನೋಡಿ.)

ಭಗವಂತನು ಒಬ್ಬನೇ. ಜಗತ್ತೆಲ್ಲವೂ ಅವನ ಮಹಿಮೆಯ ದ್ಯೋತಕ. ಸೃಷ್ಟಿಯು ಒಂದು ಅರ್ಥದಲ್ಲಿ ನಿರಂತರ ವ್ಯಾಪಾರ. ಆದರೆ ಇದಕ್ಕೆ ಸ್ವರೂಪ ಪರಿಣಾಮಗಳುಂಟು. ಸೃಷ್ಟಿಗೆ ಚೇತನಾಚೇತನಗಳು ಮೂಲ ದ್ರವ್ಯಗಳು. ಇವು ಅಸತ್ ಸ್ಥಿತಿಯಿಂದ ಸತ್ ಸ್ಥಿತಿಗೆ ಬರುವುದೇ ಸೃಷ್ಟಿ. ತದ್ವಿಪರೀತವಾದ ಕ್ರಮವೇ ಲಯ. ಅಂದರೆ ಪರಮಾತ್ಮನು ಸ್ತುತ್ಯವಾದ ಉದ್ದೇಶದಿಂದಲೇ ಸೃಷ್ಟಿಯನ್ನು ಆರಂಭಿಸಿದನು. ಹೇಳಲೂ ಹೆಸರಿಲ್ಲದಂತಿರುವ ಅವಸ್ಥೆಯಿಂದ

ಅದಕ್ಕೆ ಒಂದು ಉತ್ತಮ ಸ್ಥಿತಿಯನ್ನು ತಂದು ಕೊಟ್ಟು ವ್ಯವಹಾರಾನುಗುಣ ವಾಗಿ ಮಾಡುವುದೇ ಸೃಷ್ಟಿಯ ಉದ್ದೇಶ. ಪರಮಾತ್ಮನ ಕರುಣೆಯೇ ಇದನ್ನು ಆರಂಭಿಸಿತು. ಪರಮಾತ್ಮನು ಮಟ್ಟಿಗೆ ನಿರ್ವಿಕಾರನಾಗಿ ಮೂಲ ಸ್ವರೂಪದಲ್ಲಿ ಬದಲಾಗದೇ ಶ್ರೀಯುಕ್ತವಾಗಿಯೇ ಸರ್ವದಾ ಬೆಳಗುವನು. ಅವನ ದೃಢ ಸಂಕಲ್ಪವೇ "ರೇತಸ್ಸಿನ" ರೂಪದಿಂದ ಜಗತ್ತಿಗೆ ಬೀಜಪ್ರಾಯ ವಾಗಿದ್ದು ಅದನ್ನು ಧರಿಸಿದೆ, ಹೀಗೆಯೇ ಈ ಜಗತ್ತು ಎಲ್ಲ ಅವಸ್ಥೆಗಳಲ್ಲೂ ಪರಮಾತ್ಮನನ್ನು ಆಶ್ರಯಿಸಿಯೇ ಇರುತ್ತದೆ. ಜಗನ್ನಿರ್ಮಾಣಕ್ಕೆ ಪರ ಮಾತ್ಮನು ತನ್ನದಲ್ಲದ ಯಾವುದೇ ಮೂಲ ವಸ್ತುವಿನ ಅಪೇಕ್ಷೆಯನ್ನು ಪಡೆದಿರುವುದಿಲ್ಲ ಅಂದಮೇಲೆ ಅವನೇ ಜಗದೇಕ ಕಾರಣ ಮತ್ತು ಸರ್ವತಂತ್ರ ಸ್ವತಂತ್ರ. ಈ ದೃಷ್ಟಿಯಂತೆ ಇತರ ಸಿದ್ಧಾಂತಗಳಲ್ಲಿ—ಚಾರ್ವಾಕ, ಜೈನ, ಬೌದ್ಧ, ನೈಯಾಯಿಕ. ಸಾಂಖ್ಯ, ಯೋಗ, ವೈಶೇಷಿಕ ಮತ್ತು ಪೂರ್ವ ಮೀಮಾಂಸಾ—ದರ್ಶನಗಳಲ್ಲಿ ಕೊಡಲ್ಪಟ್ಟ ಸೃಷ್ಟಿಯ ಬಗೆಗಿನ ವಿಚಾರಗಳು ಸರಿಯಲ್ಲ. ಏಕೆಂದರೆ ವೇದೇತರ ವಿಚಾರಗಳಲ್ಲಿ, ಪಂಚಭೂತವಲ್ಲದ ಆತ್ಮ ವೆಂಬುದೇ ಇಲ್ಲವೆಂದೂ, ದೇವರಿಲ್ಲವೆಂದೂ ಒಂದು ಸಿದ್ಧಾಂತ ಹೇಳುತ್ತದೆ. ಆತ್ಮವನ್ನೊಪ್ಪಿದ ಒಂದು ಸಿದ್ಧಾಂತ ದೇವರನ್ನು ಅಲ್ಲಗಳೆದು ಸೃಷ್ಟಿಯೇ ನಡೆ ದಿಲ್ಲವೆಂದೂ, ಅಸತ್ತು ಸತ್ತಿನ ಕಡೆಗೆ ನಡೆಯುವ ವಿಕಾಸವನ್ನು ಅಲ್ಲಗಳೆಯು ತ್ತದೆ. ಮತ್ತೊಂದು ಸೃಷ್ಟಿಯೆಂಬುದೇ ಇಲ್ಲವೆಂದೂ, ದೇವರಿಲ್ಲವೆಂದೂ. ಆತ್ಮವಿಲ್ಲವೆಂದೂ, ದುಃಖವೊಂದೇ ಸತ್ಯವೆಂದೂ. ಕಣ್ಣಿಗೆ ಕಾಣುವ ಜಗತ್ತು ಭ್ರಮೆಯೆಂದೂ, ಭ್ರಾಂತಿ ಮೂಲವಾದ " ಅವಿದ್ಯ " ಯಲ್ಲಿ ಸ್ಥಿತ ವಾಗಿದೆಯೆಂದೂ " ಪ್ರತೀತ್ಯ ಸಮುತ್ಪಾದ " ವನ್ನು ಮುಂದಿಟ್ಟು ಮೋಹಕ ವಾಗಿದೆ. ಇನ್ನೊಂದು ಪ್ರಕೃತಿ (ಜಡ)—ಪುರುಷ (ಚೇತನ) ರನ್ನೊಪ್ಪಿ. ಒಂದನ್ನು ಕುರುಡನೆಂದೂ ಮತ್ತೊಂದನ್ನು ಕುಂಟನೆಂದೂ ವರ್ಣಿಸಿ ಕುಂಟನು ಕುರುಡನ ಮೇಲೆ ಕುಳಿತು ನಡೆಯುವಂತಿದೆ ನಮ್ಮ ಜೀವನ ಎಂದು ಹೀಯಾ ಳಿಸಿ, ನಿರ್ಗುಣನಾದ ಈ ಪುರುಷನು ರಂಗದ ನರ್ತಕಿಯಂತಿರುವ ಪ್ರಕೃತಿ ಬಂಧದಿಂದ ಮುಕ್ತನಾಗುವುದೇ ಮೋಕ್ಷರೂಪವಾದ ಪರಮಾರ್ಥವೆಂದೂ, ಪ್ರಕೃತಿ ಬಂಧವೇ ಸೃಷ್ಟಿಯೆಂದೂ ಇದು ಪ್ರಕೃತಿ ಮೂಲವೆಂದೂ, ಧೋರಣೆ ತಾಳಿದೆ. ಈ ವಿಚಾರ ಧಾರೆಯನ್ನೇ ಪ್ರಧಾನವಾಗಿ ಒಪ್ಪಿದ

ಇನ್ನೊಂದು ಸಿದ್ಧಾಂತದಲ್ಲಿ ಚಿತ್ತದ ವೃತ್ತಿಯನ್ನು ನಿರೋಧಿಸುವುದೇ ಪ್ರಧಾನ ಗುರಿಯಾಗಿ, ಇಲ್ಲಿ " ಈಶ್ವರ " ನೊಬ್ಬನನ್ನು ಒಪ್ಪಿದ್ದರೂ, ಧ್ಯಾನಕ್ಕೆ ಇತರ ವಸ್ತುಗಳಂತೆ ಅದೂ ಒಂದಾಗಬಹುದೆಂಬ " ವಾ " ಪಕ್ಷವನ್ನು ಹಿಡಿದು, ಶೂನ್ಯರೂಪ ಮನಃಸ್ಥಿತಿಯೇ ಪರಮಾರ್ಥ ಮೋಕ್ಷವೆಂದು ಹೇಳಲ್ಪಟ್ಟದೆ. ಮತ್ತೊಂದರಲ್ಲಿ ನಿರ್ಜೀವವಾದ ಪಂಚಭೂತಗಳೇ ಸಕಲ ಜಗತ್ತಿಗೆ ಕಾರಣವೆಂದೂ, ಇನ್ನೊಂದರಲ್ಲಿ ದೇವರು— ಜಗತ್ತುಗಳನ್ನು ಸತ್ಯವೆಂದು ಭಾವಿಸಲಾದರೂ, ದೇವರು ಜಗತ್ತಿಗೆ ಕೇವಲ " ನಿಮಿತ್ತ " ಕಾರಣವಾಗಿ ( ಕುಂಬಾರನಂತೆ, ಬಡಗಿಯಂತೆ ), ಜಡ–ಚೇತನರು ಉಪಾದಾನಕಾರಣವಾಗಿ ( ಮಣ್ಣು, ಕಟ್ಟಿಗೆಯಂತೆ ), ದೇವರೇ ಜಗತ್ತಿಗೆ " ಏಕಕಾರಣ " ವೆಂಬ ವೈದಿಕತತ್ತ್ವವು ಮರೆಯಾಗಿದೆ. " ಏಕಮೇವಾದ್ವಿತೀಯಂ " ಎಂಬ ಶ್ರುತಿವಾಕ್ಯದ ಪ್ರಧಾನಾರ್ಥವೇ ಇಲ್ಲಿ ಮರೆಯಾಗಿರುವುದು ಕಾಣುವುದು. ದೇವರಿಗೆ ಈ ಜಡ-ಚೇತನವಸ್ತುಗಳು ಎಲ್ಲಿಂದ, ಯಾವಾಗ ದೊರಕಿದವು ? ಅವನಿಗೇ ಇವು ಏಕೆ ವಶವಾದವು ? ಎಂಬ ಕುಹಕ, ಪ್ರಶ್ನೆಗಳಿಗೆ ಇಲ್ಲಿ ಅವಕಾಶವಿದೆ. ಒಂದು ವೇಳೆ " ಸಂಕಲ್ಪ " ದಿಂದ ಸೃಷ್ಟಿಸಿದನೆಂದರೆ, ಇಲ್ಲದುದು ಅಸ್ತಿತ್ವಕ್ಕೆ ಬಂದ ದೋಷ ತಗುಲುತ್ತದೆ. ಅಲ್ಲದೆ ಅವುಗಳ ಅಸ್ತಿತ್ವಕ್ಕೆ ಮೂಲಕಾರಣನಾದ ದೇವರನ್ನೇ ಪರೋಕ್ಷವಾಗಿ ಉಪಾದಾನ ಕಾರಣವನ್ನಾಗಿ ಒಪ್ಪಿದಂತೆಯೂ ಆಗುತ್ತದೆ. ಈ ರೀತಿಯಲ್ಲಿ ವೇದೇತರಗಳಾದ ಇಂದಿನ ಅನೇಕ ವಿಚಾರಧಾರೆಗಳನ್ನೂ ಇಲ್ಲಿ ಹೋಲಿಸಿ ನಿರಾಕರಿಸಿ, ನಿವಾರಿಸಿಕೊಳ್ಳಬಹುದು. ವೇದವ್ಯಾಸರೂ ಬ್ರಹ್ಮ ಸೂತ್ರದ ಎರಡನೆಯ ಅಧ್ಯಾಯದಲ್ಲಿ ಈ ವಿಚಾರಧಾರೆಗಳನ್ನು ಯುಕ್ತಿಪೂರ್ವಕವಾಗಿ ನಿರಾಕರಿಸಿರುವುದನ್ನು ನೋಡಬಹುದು. ಅಲ್ಲದೆ ವೇದೋಕ್ತವಾದ ಉಪಮಾನಗಳಿಗೆ ವಿರುದ್ಧವಾದ ಉಪಮಾನಗಳು ಬಳಸಲ್ಪಟ್ಟಾಗಲೆಲ್ಲ ವೇದ ವಿರುದ್ಧವಾದ ವಿಚಾರಗಳೇ ಬಂದಿರುವುದನ್ನೂ ಇತರ ಸಿದ್ಧಾಂತದಲ್ಲಿ ಕಾಣಬಹುದು. ವೇದವನ್ನು ನಂಬಿದವನು ಪರಮಾತ್ಮನನ್ನಾಗಲೀ, ಜಗತ್ತಿನ ಭವಿತವ್ಯವನ್ನಾಗಲೀ ಅಲ್ಲಗಳೆಯುವಂತಿಲ್ಲ, ಇದನ್ನೇ ತೈತ್ತಿರೀಯ ಉಪನಿಷತ್ತಿನಲ್ಲಿ "ಸತ್ಯ" ಶಬ್ದಾರ್ಥದ ನಿರುಕ್ತದಲ್ಲಿ ಹೀಗೆ ಹೇಳಲಾಗಿದೆ. ""ಸತ್ ಮತ್ತು ತ್ಯತ್ ಸೇರಿ ಸತ್ಯವಾಗಿವೆ." ( ಈಗ ಇರುವುದು ಆಗ ಇದ್ದುದು ಮತ್ತು ಮುಂದೆ ಇರುವುದು ಕೂಡಿ ಸತ್ಯವಾಗಿದೆ. )

ಒಂದು ಕಾಲದಲ್ಲಿ ಈ ಜಗತ್ತೆಲ್ಲ "ಅಸತ್" ಆಗಿತ್ತೆಂದೂ, ಆದರಿಂದಲೇ "ಸತ್" ನಂತರ ಉದ್ಭವಿಸಿತೆಂದೂ ಇದೇ ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿದೆ. "ಅಸದ್ವಾ ಇದ ಮಗ್ರ ಆಸೀತ್। ತತೋ ವೈ ಸದಜಾಯತ। ತದಾತ್ಮನಗ್ಂ ಸ್ವಯಮಕುರುತ। ತಸ್ಮಾತ್ ತತ್ ಸುಕೃತ ಮುಚ್ಯತ ಇತಿ ॥" ಇತ್ಯಾದಿ. (ಬ್ರಹ್ಮಾನಂದವಲ್ಲೀ-೭). ಪರಮಾತ್ಮನು ಸ್ವಯಂ ಪ್ರೇರಣೆಯಿಂದ ತನ್ನಲ್ಲೇ ಅಡಗಿದ್ದ ಸೂಕ್ಷ್ಮ ಜಗತ್ತನ್ನು ಕರುಣಾಮಯವಾದ ಸಂಕಲ್ಪದಿಂದ ಸ್ಥೂಲವಾಗುವಂತೆ ಹೊರತಂದದ್ದರಿಂದ ಇದು "ಸುಕೃತ" — ಚೆನ್ನಾಗಿ ಮಾಡಲ್ಪಟ್ಟದ್ದು — ಎನಿಸಿತು. (ಹಾಗಿಲ್ಲದಿದ್ದರೆ "ವಿಕೃತ" ಆಗುತ್ತಿತ್ತೆಂದು ಇಲ್ಲಿ ಧ್ವನಿತವಾಗಿದೆ.) ಹೀಗೆ ಸೃಷ್ಟಿಯು "ರಸ" ಮಯವಾಗಿ, ಪರಮಾತ್ಮನ ಆನಂದ ರಸದ ಆವಿಷ್ಕಾರ ರೂಪವಾಗಿದೆಯೆಂದೂ, ರಸವೇ ಅವನೆಂದೂ ಈ ರಸವನ್ನು ಗ್ರಹಿಸಿದವನು "ಆನಂದಿ" ಯಾಗುತ್ತಾನೆಂದೂ ಶ್ರುತಿಯು ವರ್ಣಿಸಿದೆ.

ವೇದದ ಇತರ ಭಾಗಗಳಲ್ಲಿಯೂ ಇದೇ "ನಾಸದೀಯ" ದ ಸಾರ ಸಂಗ್ರಹ ಅಲ್ಲಲ್ಲೇ ಬೇರೆ ಬೇರೆ ಉಪಮಾನಗಳನ್ನೊಳಗೊಂಡು ವರ್ಣಿತವಾಗಿರುವುದನ್ನೂ ಕಾಣಬಹುದು. "ಬ್ರಹ್ಮಣಸ್ಪತಿ" ಯು "ಕಮ್ಮಾರ" ನಂತೆ ಈ ಜಗತ್ತನ್ನು ಸೃಷ್ಟಿಸಿದನೆಂದೂ, ಅದಕ್ಕೆ ಮೊದಲು ದೇವತೆಗಳಿಗೂ ಪೂರ್ವಯುಗವೆನಿಸಿದ ಆ ಕಾಲದಲ್ಲಿ "ಅಸತ್ತಿ" ನಿಂದ "ಸತ್" ಜನಿಸಿತೆಂದೂ ಋಗ್ವೇದದಲ್ಲೇ (X-72)ಹೇಳಿದೆ: "ದೇವಾನಾಂ ಪೂರ್ವ್ಯೇಯುಗೇ ಅಸತಃ ಸದಜಾಯತ". ( ತೈತ್ತಿರೀಯ ಬ್ರಾಹ್ಮಣ II-೩.96, ಬೃಹದಾರಣ್ಯಕ ಉಪನಿಷತ್ತು I-2-1, ಛಾಂದೋಗ್ಯ III.19.1. ತೈತ್ತಿರೀಯ ಆರಣ್ಯಕ I-23, ಶತಪಥ ಬ್ರಾಹ್ಮಣ XIII-6-1 ಇತ್ಯಾದಿ ಉದಾಹರಣೆಗಳನ್ನು ನೋಡಬಹುದು.) ಪ್ರಸಿದ್ಧವಾದ "ಸದ್ವಿದ್ಯೆ" ಯಲ್ಲಿ ಇದೇ ವಿಷಯವನ್ನು ಮನೋಹರವಾಗಿ ಚರ್ಚಿಸಿದ್ದು, ಬ್ರಹ್ಮಸೂತ್ರದ ೨ನೆಯ ಅಧ್ಯಾಯದ ಆರಂಭಣಾಧಿಕರಣಕ್ಕೆ ಈದು ವಿಷಯ ವಾಕ್ಯವಾಗಿದೆ, ( ಛಾಂದೋಗ್ಯ VI-2.2 "ಅಸತ್" ಎಂದರೆ ಅವ್ಯಕ್ತಸ್ಥಿತವಾದ ಜಗತ್ತು ಎಂಬ ವೇದದ ಅರ್ಥವು ಈ ಕಾಲದಲ್ಲಿ ಮರೆಯಾಗಿ ಈ ಶಬ್ದವು ಸಾಂಖ್ಯ ಸಿದ್ಧಾಂತದ

"ಪ್ರಧಾನ" ಅಥವಾ ಜಡ ಪ್ರಕೃತಿ ಎಂಬರ್ಥವನ್ನು ಪ್ರಚಲಿತವಾಗಿ ಹೊಂದಿತ್ತೆಂದು ಕಾಣುತ್ತದೆ. ಉದ್ದಾಲಕರು ಶ್ವೇತಕೇತುವಿಗೆ ಉಪದೇಶಿಸುತ್ತಾರೆ: "ಮಗು ! ಕೆಲವರು ಜಡವಾದ ಮೂಲ ಪ್ರಕೃತಿಯೊಂದೇ ಇದ್ದಿತೆಂದು ಹೇಳುತ್ತಾರೆ. ಇದರಿಂದ ಚೈತನ್ಯಮಯ ಸೃಷ್ಟಿಯಾಯಿತೆಂದು ಅಪರವಾದ ! ಇದು ಹೇಗಾದೀತು ? "ಸತ್" ಶಬ್ದ ವಾಚ್ಯನಾದ ಪರಮಾತ್ಮನೊಬ್ಬನೇ (ತನ್ನಲ್ಲೇ ಎಲ್ಲವನ್ನೂ ಒಳಗೊಂಡು) ತನ್ನ ಹೊರತು ಇನ್ನೊಂದು (ಜಗತ್ಕಾರಣವಿಲ್ಲದೇ) ಇದ್ದನು." ಎಂದು ಹೇಳಿ ಈ ವಿಷಯದಲ್ಲಿ ಈ ಉದಾಹರಣೆಗಳನ್ನು ಕೊಡುತ್ತಾರೆ: ಮಣ್ಣು ಎಂಬ ಮೂಲ ದ್ರವ್ಯದಿಂದ ಗಡಿಗೆ ಮೊದಲಾದವು ಆಗುವಂತೆ, ಚಿನ್ನ ಮೊದಲಾದ ಲೋಹಗಳ ಅದುಂನ್ನು ಒಳಗೊಂಡಿರುವ ಶಿಲೆಯಿಂದ (ಲೋಹಮಣಿ) ಲೋಹ ಹೊರಬರುವಂತೆ. ಉಗುರು ಕತ್ತರಿಸುವ ಉಪಕರಣವು ಕಬ್ಬಿಣದ ರೂಪಾಂತರವಾದಂತೆ ಕಾರಣ ಕಾರ್ಯಗಳಲ್ಲಿ ಅನನ್ಯತೆಯು ಇರುವುದು. (ಅಂದರೆ ಪರಮಾತ್ಮನನ್ನು ತಿಳಿದವನು ಜಗತ್ತನ್ನು ಅರಿಯುವಂತೆಯೇ, ಸ್ಪಷ್ಟವಾದ ಜಗತ್ತಿನಿಂದ ಇದರ ಮೂಲವಾದ ಪರಮಾತ್ಮನನ್ನು ತಿಳಿಯಲೂ ಸಾಧ್ಯ ಎಂದು ಇಲ್ಲಿ ಪ್ರತಿಪಾದಿತವಾಗಿದೆ.) ಸೃಷ್ಟಿಯೇ ಆಗಿಲ್ಲವೆಂದೋ, ಇದು ಮಾಯಾವಿಯ ಭ್ರಮೆಯೆಂದೋ, ಬೆಂಕಿಯ ಕೊಳ್ಳಿಯನ್ನು ತಿರುಗಿಸುತ್ತಿದ್ದರೆ ಆಗುವ ಚಕ್ರದಂತೆ ಇದು "ತೋರಿಕೆ" ಮಾತ್ರವೆಂದೋ ನಿರೂಪಿಸುವುದು ವೇದದ ಉಪಮಾನಗಳಿಗೂ, ಧ್ವನಿಗೂ ಎಷ್ಟು ಅಂತರದಲ್ಲಿದೆಯೆಂದು ಈಗ ತಿಳಿಯಬಹುದು. ಹೀಗೆ ನಾಸದೀಯದಲ್ಲಿ ಪ್ರತಿಪಾದಿತವಾದ ವಿಷಯವು ಪರಮಾತ್ಮನ ಜಗತ್ಕಾರಣವಾದಕ್ಕೆ ಸಂಬಂಧಿಸಿ, ವೇದ ಧರ್ಮದ ವೇದ ದರ್ಶನದ ಅಡಿಗಲ್ಲಾಗಿದೆ.

———

ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

# ೪. ಮಹಾಪುರುಷ

ಅವನಿಗೆ ಸಾವಿರ ತಲೆಗಳು, ಸಾವಿರ ಕಣ್ಣುಗಳು, ಸಾವಿರ ಪಾದಗಳು, ಎಲ್ಲವನ್ನೂ ತುಂಬಿರುವ ಇವನು ಭೂಮಿಯನ್ನು ಎಲ್ಲ ಕಡೆಯಿಂದಲೂ ಸುತ್ತು ವರಿದು ಇನ್ನೂ ಒಂದು ಹತ್ತು "ಅಂಗುಲ" ಆಚೆಯವರೆಗೂ ವ್ಯಾಪಿಸಿದ್ದಾನೆ. ಈ ಹಿಂದೆ ಆದದ್ದು, ಮುಂದೆ ಆಗ ಬೇಕಾದದ್ದು, ಎಂದೂ ಸಾವಿಲ್ಲದಿರುವುದು ಇವೆಲ್ಲದರ ಒಡೆಯನಾಗಿ (ನಿತ್ಯವೂ) ನಿರತಿಶಯವಾಗಿ ದೊಡ್ಡದಾಗುತ್ತಲೇ ಇದ್ದಾನೆ. ಇವನ ಮಹಿಮೆಯು ಇಷ್ಟು ವಿಚಿತ್ರವಾದದ್ದು. (ಅಥವಾ) ಈ ಪುರುಷನು (ನಾವು ತಿಳಿಯಬಹುದಾದುದಕ್ಕಿಂತಲೂ) ಇನ್ನೂ ದೊಡ್ಡವನು. ಈಗ ಇರುವ ವಿಶ್ವದಲ್ಲಿ ಕಾಣುವ ಭೂತರಾಶಿಗಳೆಲ್ಲವೂ ಅವನ ಒಂದು "ಪಾದ" ಮಟ್ಟಿಗೆ, ಇನ್ನೂ ಮೂರು "ಪಾದ" ಗಳು ಅಮೃತವಾಗಿ ಅವ್ಯಕ್ತವಾಗಿ, ದೇವಲೋಕದಲ್ಲಿಯೇ ಇವೆ. ಈ ಪುರುಷನು ಹೀಗೆ ತ್ರಿಪಾದ್ವಿಭೂತಿಯ ಮೇಲೆಯೇ ಇದ್ದಾನೆ. ಕೆಳಗೂ ಈ ವಿಶ್ವದಲ್ಲಿ ನಾನಾ ವಿಧ ರೂಪಗಳಲ್ಲಿ ತಿಂದು ಬದುಕುವ ಪ್ರಾಣಿಗಳಲ್ಲೂ, ತಿನ್ನದ ವಸ್ತುಗಳಲ್ಲೂ ವ್ಯಾಪಿಸಿದ್ದಾನೆ. ಇವನಿಂದಲೇ ವಿರಾಟ್ ಪುರುಷನು ಹುಟ್ಟಿದನು. ಅಂದ ಮೇಲೆ ಅವನಿಗಿಂತ ಮೇಲ್ಪಟ್ಟ ಈ ಮಹಾಪುರುಷ ಎಷ್ಟು ದೊಡ್ಡವನಿರಬಹುದು ? ಹೀಗೆ ಮಹಾಪುರುಷನು ಚೇತನಾಚೇತನ ರೂಪವಾದ ಬ್ರಹ್ಮಾಂಡದಲ್ಲಿ ವ್ಯಕ್ತನಾದನು. ತನಗಿಂತಲೂ ಬೇರೆಯಾದ ದೇವತೆ, ಮನುಷ್ಯ, ಮೂಕ ಪ್ರಾಣಿಗಳು ಇತ್ಯಾದಿ ರೂಪಗಳನ್ನು ಧರಿಸಿ ಭೂಮಿಯನ್ನೂ ಪಾಂಚಭೌತಿಕ ಶರೀರಾದಿಗಳನ್ನೂ ನಿರ್ಮಿಸಿದನು. ಆಗ ಈ ಮಹಾ ಪುರುಷನ ಅಂಶಗಳಾದ ದೇವತೆಗಳು, ಈ ಮಹಾಪುರುಷನೆಂಬ ಹವಿಸ್ಸಿನಿಂದಲೇ ಒಂದು (ವಿಚಿತ್ರವಾದ) ಯಜ್ಞವನ್ನು ನೇರವೇರಿಸಿದರು. ಇದಕ್ಕೆ ವಸಂತ ಋತುವು ಆಜ್ಯವಾಯಿತು: ಗ್ರೀಷ್ಮವು ಸಮಿತ್ತು, ಶರದೃತುವು ಹವಿಸ್ಸು ಆದವು. ಇಲ್ಲಿಂದ ಮುಂದಕ್ಕೆ ಉತ್ತರ ಸೃಷ್ಟಿ. ಈ ಯಜ್ಞಕ್ಕೆ ಸಪ್ತ ಛಂದಸ್ಸುಗಳು ಏಳು ಪರಿಧಿಗಳು.

(ಪ್ರಾಕಾರಗಳು). ಇಪ್ಪತ್ತೊಂದು ಸಮಿತ್ತುಗಳು.* ಕೊನೆಗೆ ದೇವತೆಗಳು (ಸೃಷ್ಟಿ ಮೂಲನಾದ) ಮಹಾಪುರುಷನನ್ನೇ ಯಜ್ಞಪಶುವನ್ನಾಗಿ ಮಾಡಿ ದರು. ನಂತರ ಈ ಯಜ್ಞ ಪುರುಷನನ್ನು ದರ್ಭೋದಕದಿಂದ ಪ್ರೋಕ್ಷಿಸಿದರು. ನಂತರ ಅವನನ್ನೇ ಅರ್ಪಿಸಿ ಯಜ್ಞಮಾಡಿದರು. ಹೀಗೆ ಮಾಡಿದವರು (ಮತ್ತೆ) ಯಾರೆಂದರೆ, ಮಂತ್ರ ದ್ರಷ್ಟಾರರಾದ ಋಷಿಗಳು, ಸಾಧ್ಯರೆಂಬ ದೇವತೆಗಳು. ಹೀಗೆ ಜಗದ್ರೂಪಿಯಾದ ಪರಮಪುರುಷನನ್ನೇ ಆಹುತಿ ಯನ್ನಾಗಿಯುಳ್ಳ ಈ ವಿಚಿತ್ರ ಯಜ್ಞದಿಂದ "ಮೊಸರಿನಿಂದ ಕೂಡಿದ ತುಪ್ಪವು" ಸಂಪಾದಿತವಾಯಿತು. ನಂತರ ಆರಣ್ಯಕವಾದ ಮೃಗಗಳೂ ಮತ್ತು ಗ್ರಾಮ ವಾಸಿಗಳಾದ ಸಾಧು ಪ್ರಾಣಿಗಳೂ ಉಂಟಾದವು. ಇದಕ್ಕೆ ಸರ್ವಮೇಧ ಎಂದು ಹೆಸರು. (ಇಂತು ಸರ್ವಾಂತರ್ಯಾಮಿಯಾದ ಪರಮಪುರುಷನು ತನ್ನ ಶರೀರವಾದ ಸಕಲ ಜಗತ್ತಿನೊಡನೆಯೇ ಆಹುತಿಯಾಗಿ ಅರ್ಪಿಸಿ ನೆರವೇರಿಸಿದ ಯಜ್ಞದ ಫಲವಾಗಿಯೇ ನಿರಂತರವಾಗಿ ನಡೆಯುತ್ತಿರುವ ಈ ಜಗದ್ವ್ಯಾಪಾ ರವು ತೊಡಗಿತು.)

ಇನ್ನು ಮುಂದೆ ಇದೇ ಯಜ್ಞದಿಂದ ವಿವಿಧವಾದ ಋಜ್ ಮಂತ್ರ ಗಳೂ, ಸಾಮಗಳೂ, ಯಜುರ್ಮಂತ್ರಗಳೂ ಉಂಟಾದವು. ಸಕಲ ಛಂದಸ್ಸು ಗಳೂ ಸಹ ಅವತರಿಸಿದವು. ಎರಡು ಸಾಲು ಹಲ್ಲುಳ್ಳ ಕುದುರೆಗಳು, ಗೋವುಗಳು, ಆಡು, ಕುರಿ, ಮತ್ತು ಇದೇ ಜಾತಿಯ ಬೇರೆ ಪ್ರಾಣಿಗಳು ಉತ್ಪನ್ನವಾದುವು. (ಈಗ ಒಂದು ಪ್ರಶ್ನೆ) " ಈ ಮಹಾಪುರುಷನನ್ನು ಯಜ್ಞದಲ್ಲಿ, ಅರ್ಪಿಸಿದಾಗ (ಸಾಧ್ಯರೂ, ಋಷಿಗಳೂ) ಅವನನ್ನು ಎಷ್ಟು ಭಾಗಗಳನ್ನಾಗಿ ಮಾಡಿದ್ದರು ? ಅವನ ಮುಖ ಯಾವುದು ? ಬಾಹುಗಳು ಯಾವುವು ? ತೊಡೆಗಳು, ಪಾದಗಳು, ಯಾವುವು ? (ಅಂದರೆ ಸೃಷ್ಟವಾದ ಈ ಜಗತ್ತಿನಲ್ಲಿ ಪರಮಾತ್ಮನ ಅವಯವಗಳನ್ನು ಗುರುತು ಹಚ್ಚಲು ಸಾಧ್ಯವಾದರೆ ಅವು ಎಲ್ಲಿ, ಹೇಗೆ, ಇರುತ್ತವೆ ಎಂಬುದು ಪ್ರಶ್ನೆಯ ಅರ್ಥ.) (ಇದಕ್ಕೆ ಉತ್ತರ) : " ಬ್ರಾಹ್ಮಣನೇ ಈ ಪುರುಷನ ಮುಖ, ಕ್ಷತ್ರಿಯನೇ

---

* ಇಪ್ಪತ್ತೊಂದು ತತ್ತ್ವಗಳು —೧೨ ತಿಂಗಳುಗಳು. ೫ ಋತುಗಳು, ೩ ಲೋಕಗಳು. ಮತ್ತು ಒಬ್ಬ ಸೂರ್ಯ (೨೧)

ತೋಳುಗಳು, ವೈಶ್ಯನೇ ತೊಡೆಗಳು ಶೂದ್ರನೇ ಪಾದಗಳು." ( ಹೀಗೆ ಚಾತುರ್ವರ್ಣ್ಯಗಳು ಪರಮ ಪುರುಷನ ಅವಯುವ ಸ್ವರೂಪವಾಗಿವೆ. ) "ಚಂದ್ರನು ಮನಸ್ಸಾಗಿಯೂ, ಸೂರ್ಯನು ಕಣ್ಣುಗಳಾಗಿಯೂ ಹುಟ್ಟಿದರು. ಅಂತರಿಕ್ಷವು ನಾಭಿಯಿಂದಲೂ ದ್ಯುಲೋಕವು ತಲೆಯಿಂದಲೂ ಭೂಮಿಯು ಪಾದದಿಂದಲೂ, ದಿಕ್ಕುಗಳು ಕಿವಿಗಳಿಂದಲೂ,- ಹೀಗೆ ಸಮಸ್ತ ಲೋಕಗಳನ್ನೂ (ದೇವತೆಗಳು) ಆ ಮಹಾಪುರುಷನ ದೇಹದಿಂದ ನಿರ್ಮಿಸಿದರು. ಹೀಗೆ ಮಾನಸ ಸಂಕಲ್ಪರೂಪನಾದ ಈ ಮಹಾಪುರುಷ ಯಜ್ಞದಿಂದ ದೇವತೆಗಳು ಯಜ್ಞರೂಪನಾದ ಈ ಮಹಾಪುರುಷನನ್ನೇ ಪೂಜಿಸಿದರು. ಆ ಯಜ್ಞ ವಿಧಿಯೇ ನಾನಾ ಪ್ರಕಾರಗಳಲ್ಲಿ ಮುಖ್ಯ ಧರ್ಮಗಳಾದವು. (ಇಂದಿನ ಬಹುಮುಖವಾದ ಯಜ್ಞಾಚಾರಣೆಗೆ ಅಂದಿನ ದೇವತೆಗಳ ಪ್ರಥಮ ಯಜ್ಞವೇ ಮುಖ್ಯವಾಗಿ ಮಾದರಿಯೂ, ಆಧಾರವೂ ಆಯಿತು). ಹೀಗೆ ತಿಳಿಯುವ ಮಹಾತ್ಮರು ಪುರಾತನರಾದ ದೇವತೆಗಳೂ, ಸಾಧ್ಯರೂ, ಸರ್ವದಾ ವಾಸಿಸುವ ಪರಮ ಪದವನ್ನು ಪಡೆಯುತ್ತಾರೆ." ( ಈಗ ಸೂಕ್ತದರ್ಶಿಯು ಎದೆ ತಟ್ಟಿ ಹೇಳುತ್ತಾನೆ.) "ಇಂತಹ ಮಹಾಪುರುಷನನ್ನು ನಾನು ಬಲ್ಲೆ. ಅವನು ಕತ್ತಲೆಯಿಂದ ಆಚೆಗೆ ಇದ್ದಾನೆ. ಸೂರ್ಯನಂತೆ ಅವನ ಮೈ ಬಣ್ಣವಿದೆ. ಜಗತ್ತಿನ ಎಲ್ಲ ರೂಪಗಳ ಆಕಾರಗಳ, ವಸ್ತುಗಳನ್ನು ಮಾಡಿ ಅವುಗಳಿಗೆ ಹೆಸರುಗಳನ್ನಿತ್ತು ಅವುಗಳಿಂದ ಮತ್ತು ಅವುಗಳ ಮೂಲಕ ಸರ್ವದಾ ವಾಗ್ವ್ಯಾಪಾರವನ್ನು ನಡೆಸುತ್ತಿರುವ ಇವನು ಧೀರನು. ಇಷ್ಟೇ ಅಲ್ಲ; ಸೃಷ್ಟಿಕರ್ತನಾದ ಚತುರ್ಮುಖನೂ, ಸ್ತೋತ್ರ ಮಾಡಿದವರಲ್ಲಿ ಮೊದಲಿಗನಾದ ಮತ್ತು ಮಹಾ ವಿದ್ವಾಂಸನಾದ, ಎಲ್ಲ ದಿಕ್ಕುಗಳನ್ನು ತಿಳಿದ ಇಂದ್ರನೂ, ಯಾವ ಈ ಪರಮ ಪುರುಷನನ್ನು ಪ್ರಶಂಸಿಸಿದರೋ ಅಂತಹ ಈ ಪರಮ ಪುರುಷನನ್ನು ತಿಳಿದವನು (ಅಂದರೆ ಅವನ ಮಹಿಮೆಯನ್ನು ಅರಿತು, ಮೆಚ್ಚಿ, ಅನುಭವಿಸಿ, ಅವನ ದೊಡ್ಡತನದ ಬೆಳಕಿನಲ್ಲಿ ತಮ್ಮನ್ನು ತಾವು ಕಂಡವರು, ಧನ್ಯರಾದವರು, ) ಈ ಲೋಕದಲ್ಲಿಯೇ (ಬದುಕಿರುವಾಗಲೇ) ಅಮೃತರಾಗುತ್ತಾರೆ. ಈ ಮಹಾ ಪುರುಷನ ಉಪಾಸನೆಗೆ ಇದಲ್ಲದೆ ಮತ್ತೊಂದು ದಾರಿಯಿಲ್ಲ."

ಪ್ರಸಿದ್ಧವಾದ ಈ ವಿಚಾರ ಸರಣಿಯನ್ನು ಒಳಗೊಂಡಿರುವುದೇ ಪುರುಷ ಸೂಕ್ತ (ಋಗ್ವೇದದ ಹತ್ತನೇ ಮಂಡಲದ ತೊಂಭತ್ತನೆಯ ಸೂಕ್ತ). "ವೇದೇಷು ಪೌರುಷಂ ಸೂಕ್ತಂ" ಎಂಬಂತೆ ಇದು ಸಕಲವೇದದ ಸಾರ. ಮಂತ್ರಗಳಲ್ಲಿ ಗಾಯತ್ರಿಯಂತೆ ಋಕ್‌ಗಳಲ್ಲಿ ಇದು ಸರ್ವದಾ ಜಪ್ಯವಾಗಿದೆ. ಕೃಷ್ಣ ಯಜುರ್ವೇದದ ತೈತ್ತಿರೀಯ ಆರಣ್ಯಕದಲ್ಲೂ (III-12, 13) ಶುಕ್ಲ ಯಜುರ್ವೇದದ ವಾಜಸನೇಯ ಸಂಹಿತೆಯಲ್ಲಿಯೂ (XXXI-1-16) ಅಥರ್ವ ವೇದದಲ್ಲಿಯೂ (XIX-6) ಪುನರುಕ್ತವಾಗಿರುವ ಈ ಸೂಕ್ತವು ಸಕಲ ವೇದಗಳ ಅನೇಕ ಭಾಗಗಳಲ್ಲಿ ವಿಸ್ತಾರವಾಗಿಯೂ, ಸಂಗ್ರಹವಾಗಿಯೂ ಒಂದೊಂದೇ ಅಂಶಗಳಲ್ಲೂ ವಿವೃತವಾಗಿದೆ. ಪರಬ್ರಹ್ಮ ವಸ್ತುವನ್ನೇ ಇಲ್ಲಿ "ಪುರುಷ" ನೆಂದು ಕರೆಯಲಾಗಿದೆ. ಭಾರತೀಯ ತತ್ತ್ವಶಾಸ್ತ್ರದ ಪ್ರತಿಪಾದಕಗಳಾದ ಸಮಸ್ತ ಗ್ರಂಥಗಳಿಗೂ ಇದು ಮುಖ್ಯ ಆಧಾರ. ಸೃಷ್ಟಿಯ ವಿಚಾರ, ಯಜ್ಞತತ್ತ್ವ, ವರ್ಣಾಶ್ರಮಾದಿ ವ್ಯವಸ್ಥೆಯ ವಿಚಾರ, ಸ್ತೋತ್ರ, ಧರ್ಮಾಚರಣೆ, ದೇವರ, ಜಗತ್ತುಗಳ ಸಂಬಂಧ ಇತ್ಯಾದಿ ಸಕಲ ವೇದತತ್ತ್ವಗಳೂ ಇದರಲ್ಲಿ ಸಂಗೃಹೀತವಾಗಿವೆ. ಪುರುಷನೆಂದರೆ ನಾರಾಯಣ ಎಂಬುದಾಗಿ ವೇದಗಳಲ್ಲೇ ಹೇಳಲಾಗಿದೆ. (ಶತಪಥ ಬ್ರಾಹ್ಮಣ XII-3-4-1 ಇತ್ಯಾದಿ).

ನಾರಾಯಣನೆಂದರೆ "ನಾರಾಣಾಂ ಅಯನಂ ಅಸೌ" (ನಾರ ಶಬ್ದದಿಂದ ನಿರ್ದಿಷ್ಟವಾದ ಚೇತನಾ ಚೇತನಾತ್ಮಕವಾದ ಜಗತ್ತಿನ ಸೂಕ್ಷ್ಮರೂಪವಾದ "ಉದಕ" ಕ್ಕೆ ಒಡೆಯನೆಂದು ಅರ್ಥ.) ಅಥವಾ "ನಾರಾಏವ ಅಯನಂ ಯಸ್ಯ ಸಃ" (ಸಮಸ್ತಜಗತ್ತೂ ಯಾವನಿಗೆ ವಾಸಸ್ಥಾನವೋ ಅವನು ಎಂದು ಅರ್ಥ.) ಪುರುಷನೆಂದರೆ "ಜಗತ್ತನ್ನು ತುಂಬಿರುವವನು" ಎಂದೂ "ಸಕಲವನ್ನೂ ತನ್ನಲ್ಲಿ ತುಂಬಿಕೊಂಡಿರುವ" ನೆಂದೂ ಅರ್ಥವಾಗುವುದರಿಂದ ಈ ಎರಡೂ ಶಬ್ದಗಳೂ ಏಕಾರ್ಥವನ್ನು ಕೊಡುತ್ತವೆ. ಅಥವಾ ಬೃಹದಾರಣ್ಯಕ ಉಪನಿಷತ್ತಿನಲ್ಲಿ (1-4-1) ಹೇಳಿರುವಂತೆ ಎಲ್ಲಕ್ಕಿಂತ ಮೊದಲಿದ್ದವನೂ" ಮತ್ತು "ಸಕಲ ಪಾಪಗಳನ್ನೂ ದಹಿಸಿದವನೂ" (ಸಕಲ ಪಾಪ ದೂರನು) ಎಂದೂ ಅರ್ಥ ಉಂಟು. ಅಥವಾ "ಮಾನವ ರೂಪಗಳಾದ ಪುರ ಗಳನ್ನು ಉಂಟು ಮಾಡಿ ಅವುಗಳನ್ನು ಪ್ರವೇಶಿಸಿ, ಅವುಗಳಲ್ಲಿ ಶಯನ

ಮಾಡುವುದರಿಂದಲೂ ಇವನು ಪುರುಷ"ನೆಂದು ಪ್ರಸಿದ್ಧ. ಅಂದರೆ ಸರ್ವ ವ್ಯಾಪಿ, ಸರ್ವಾಂತರ್ಯಾಮಿ, ಎಂದರ್ಥ. ಯಾವುದೇ ಮನುಷ್ಯನು ಪರಮ ಜ್ಞಾನಿಯಾಗಿ ತಿಳಿಯಬಹುದಾದ್ದಕ್ಕಿಂತಲೂ ಇವನು ಯಾವಾಗಲೂ ದೊಡ್ಡವ ನಾಗಿಯೇ ಇರುತ್ತಾನೆ. ಇದನ್ನೇ " ಅತ್ಯತಿಷ್ಠದ್ದಶಾಂಗುಲಂ " ಎಂದು ವರ್ಣಿಸಿದೆ. ಹಿಂದೆ ಹೇಳಿದ "ಉದಕ" ತತ್ತ್ವವು ಈ ಪರಮ ಪುರುಷನಿಗೆ "ಅಯನ"ವಾದದ್ದರಿಂದಲೇ ಮತ್ತು ಅದೇ "ಉದಕವು"ವು "ಸತ್ಯ" ರೂಪಿ ಯಾದ ಆದಿ ತತ್ತ್ವಕ್ಕೆ, ಆದಿತ್ಯ–ತತ್ತ್ವಕ್ಕೆ ಮೂಲವಾದದ್ದರಿಂದಲೂ ಮಹಾಪುರುಷನನ್ನು ( ನಾರಾಯಣನನ್ನು ) ಸೂರ್ಯನ ಅಂತರ್ಯಾಮಿ ಯೆಂದೂ, ಶ್ರುತಿಯ ನಾನಾ ಕಡೆಗಳಲ್ಲಿ ವರ್ಣಿಸಿ ಗಾಯತ್ರೀ ಮಂತ್ರದಲ್ಲಿ ಎತ್ತಿ ಹಿಡಿದು ಉದ್ಘೋಷಿಸಿರುತ್ತದೆ. ಶತಪಥ ಬ್ರಾಹ್ಮಣದಲ್ಲಿ (XIII 6-1-1) ಈ ಪುರುಷನನ್ನು ನಾರಾಯಣನೆಂದೇ ನಿರ್ದೇಶಿಸಿ ಅವನು ಈ ಜಗತ್ತಿನ ಸೃಷ್ಟಿ ಗಾಗಿ ಪಾಂಚರಾತ್ರ ಸಂಜ್ಞಕವಾದ ಯಜ್ಞವನ್ನು ಆಚರಿಸಿದನೆಂದು ಹೇಳ ಲಾಗಿದೆ. ಆಗ ಉಂಟಾದ ಐದುವಿಧವಾದ ಸೃಷ್ಟಿಯನ್ನೇ ಇಲ್ಲಿಯೂ ಪುರುಷ ಸೂಕ್ತದಲ್ಲಿ ಹೇಳಿದೆ. ೧) ವಾಯುಮಾರ್ಗ ಗಾಮಿಗಳಾದ ಪಕ್ಷಿಗಳು, ಆರಣ್ಯಕ ಮೃಗಗಳು, ಗ್ರಾಮ್ಯ ಪಶುಗಳು. ೨) ವೇದಗಳು, ೩) ಬ್ರಾಹ್ಮಣಾದಿ ವರ್ಣ ಗಳು. ೪) ಚಂದ್ರ ಸೂರ್ಯಾದಿ ದೇವತೆಗಳು, ೫) ಸಮಸ್ತ ಲೋಕಗಳು. ಇದನ್ನೇ ಬೃಹದಾರಣ್ಯಕ ಉಪನಿಷತ್ತಿನಲ್ಲಿಯೂ ಪಾಂಚರಾತ್ರ ಪ್ರಕ್ರಿಯೆ ಯಲ್ಲಿಯೂ ಹೀಗೆ ವಿವರಿಸಿದೆ. "ಸ ಏಷ ಪಾಂಕ್ತೋಯಜ್ಞಃ ಪಾಂಕ್ತಃ ಪಶುಃ ಪಾಂಕ್ತಃ ಪುರುಷಃ, ಪಾಂಕ್ತಮಿದಂ ಸರ್ವಂ ಯದಿದಂ ಕಿಂಚ ತದಿದಂ ಸರ್ವ ಮಾಪ್ನೋತಿ" ( I-4-13 ).

ತೈತ್ತಿರೀಯ ಉಪನಿಷತ್ತಿನಲ್ಲಿಯೂ ಇದನ್ನು ಹೀಗೆಯೇ ವರ್ಣಿಸಿದೆ. (ಪಾಂಕ್ತಂವಾ ಇದಗ್‌ಂ ಸರ್ವಂ–ಇತ್ಯಾದಿ). ಇಲ್ಲಿ ಮಹಾಪುರುಷನ ವರ್ಣನೆ ಯಲ್ಲಿ ಕಣ್ಣುಗಳನ್ನು ಕೈಕಾಲುಗಳನ್ನು ತಲೆಗಳನ್ನು ಸಾವಿರವೆಂದು ಕರೆದಿರು ವುದು ದೊಡ್ಡತನಕ್ಕೆ ಉಪಲಕ್ಷಣವಾಗಿ ಮಾತ್ರ; ಸಾವಿರಾರು ಎಂಬ ಅರ್ಥ ದಲ್ಲಿ. ತಲೆ, ಈಶ್ವರನ ಸಂಕಲ್ಪವನ್ನೂ, ಕಣ್ಣುಗಳು, ದೃಷ್ಟಿಯನ್ನೂ ಪಾದವು, ವ್ಯವಹಾರವನ್ನೂ, ನಿರ್ದೇಶಿಸಿ. ಸೃಷ್ಟಿಯಲ್ಲಿ ಈಶ್ವರನ ಅನುಪ್ರವೇಶ

ವನ್ನು ಸಾಂಕೇತಿಕವಾಗಿ ವರ್ಣಿಸಿವೆ. ಜಗತ್ತೆಲ್ಲವೂ ಈಶ್ವರಮಯ. ದಶಾಂಗುಲವೂ ಸಹ ಲೋಕದಿಂದ ಈಶ್ವರನ ಅತಿವ್ಯಾಪ್ತಿಯನ್ನು ಸೂಚಿಸು ತ್ತದೆ. "ಸೃಷ್ಟಿಗೆ ಉಪಾದಾನ ಕಾರಣ ಯಾವುದು ?" ಎಂಬ ಪ್ರಶ್ನೆ ಯನ್ನು ಋಗ್ವೇದದ ಹತ್ತನೇ ಮಂಡಲದ ೮೧ ನೇ ಸೂಕ್ತದಲ್ಲಿಯೇ ಎತ್ತ ಲಾಗಿದೆ.

"ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕಥಮತ್ಸ್ವಿತ್ಕಥಾಸೀತ್ ।
ಯತೋ ಭೂಮಿಂ ಜನಯನ್ವಿಶ್ವಕರ್ಮಾವಿ ದ್ಯಾಮೌರ್ಣೋ
—ನ್ಮಹಿನಾ ವಿಶ್ವಚಕ್ಷಾಃ ॥"

"ಸರ್ವಪ್ರತ್ಯಕ್ಷಿಯಾದ ವಿಶ್ವಸೃಷ್ಟಿಕರ್ತನು ಯಾವ ಆಧಾರದಿಂದ ಲೋಕಗಳನ್ನು ನಿರ್ಮಿಸಿದನು ? ಲೋಕೋತ್ಪತ್ತಿಗೆ ಮೂಲದ್ರವ್ಯದ ಪ್ರಕಾರ, ಸ್ವರೂಪ ಗಳೇನು ?" ಇದಕ್ಕೆ ಉತ್ತರವನ್ನು ಅಲ್ಲಿಯೂ ಮತ್ತು ತೈತ್ತಿರೀಯ ಬ್ರಾಹ್ಮಣ ದಲ್ಲಿಯೂ ಸ್ಪಷ್ಟವಾಗಿ ಕೊಟ್ಟಿದೆ. "ಬ್ರಹ್ಮ ಅಧ್ಯತಿಷ್ಠತ್ ಭುವನಾನಿ ಧಾರಯನ್"— ಪರಬ್ರಹ್ಮವಸ್ತುವೇ ಜಗತ್ತಿಗೆ ಅಧಿಷ್ಠಾನ, ಧಾರಕ :— ಮತ್ತೆ ರೂಪಕದಿಂದ ಹೀಗೂ ಕೇಳಲಾಗಿದೆ; "( ಈ ಜಗತ್ತು ಮರದಿಂದ ಮಾಡಲ್ಪಟ್ಟ ಒಂದು ಆಟಕೆಯಾಗಿ ಭಾವಿಸಲ್ಪಟ್ಟಿರೆ, ) ಇದನ್ನು ಯಾವ ಕಾಡಿನ, ಯಾವ ಮರದಿಂದ ಮಾಡಲಾಯಿತು ? ಎಂಬುದಾಗಿ ಮನೀಷಿಗಳು ( ಜ್ಞಾನಿಗಳು ) ಮನಸ್ಸಿನಿಂದಲೇ ಕೇಳುತ್ತಾರೆ." ಇದಕ್ಕೂ ಉತ್ತರ; "ಬ್ರಹ್ಮವೇ ವನ, ಬ್ರಹ್ಮವೇ ವೃಕ್ಷ" ಅಂದರೆ ಜಗತ್ತಿಗೆ ಸಕಲ ವಿಧ ಕಾರಣನೂ ಪರಮಾತ್ಮನೇ. ಒಂದರ್ಥದಲ್ಲಿ ಅವನಿಗೂ, ಇದಕ್ಕೂ ಶರೀರಾತ್ಮ ಭಾವದಿಂದ ತಾದಾತ್ಮ್ಯ ಉಂಟೆಂಬದನ್ನು ಈ ಎಲ್ಲ ಸೂಕ್ತಗಳು ಎತ್ತಿ ತೋರಿಸುತ್ತವೆ.

ಶ್ರೀಮತ್ಸಾಯಣಾಚಾರ್ಯರೂ ಸಹ ಭಾಷ್ಯದಲ್ಲಿ ಹೀಗೆ ವಿವರಿಸಿ ದ್ದಾರೆ: "ಆತ್ಮಕೃತೇಃ ಕರ್ಮಣಾ ದೇಹೋತ್ಪತ್ತೇಃ । ನ ಚೈಕಸ್ಯ ಜನ್ಯ ಜನಕಭಾವೋ ವಿರುಧ್ಯತೇ ತಪೋಬಲೇನ ಶರೀರ ದ್ವಯ ಸ್ವೀಕಾರಾತ್ ।" ಸೃಷ್ಟಿಯು ಈಶ್ವರನ "ಆತ್ಮಕೃತಿ". ( ಬ್ರಹ್ಮಸೂತ್ರದಲ್ಲೂ "ಆತ್ಮಕೃತೇಃ ಪರಿಣಾಮಾತ್" ಎಂದೇ ವರ್ಣಿಸಿರುವುದನ್ನು ಕಾಣಬಹುದು ) ಒಬ್ಬನೇ

ಜನಕನೂ, ಜನ್ಯನೂ ಆಗಿರುವುದು ವಿರುದ್ಧವಲ್ಲ. ತಪೋಬಲದಿಂದ ಸೂಕ್ಷ್ಮ ಸ್ಥೂಲ ಶರೀರದ್ವಯಗಳನ್ನು ಈಶ್ವರನು ಪಡೆಯಬಲ್ಲ.

ಇನ್ನು ವರ್ಣವ್ಯವಸ್ಥೆಗೂ ಪರಮಾತ್ಮನ ಅವಯವಗಳಿಗೂ ಹೋಲಿಕೆಯ ಅರ್ಥವನ್ನು ವಿವೇಚಿಸೋಣ. ಪರಮಾತ್ಮನ ಅವಯವಗಳಲ್ಲಿ ಯಾವುದು ಹೆಚ್ಚು ಮುಖ್ಯ, ಅಥವಾ ಅಮುಖ್ಯ, ಎಂಬ ಪ್ರಶ್ನೆ ಹಾಸ್ಯಾಸ್ಪದವಾದುದು. ವರ್ಣ ವ್ಯವಸ್ಥೆಯ ವಿಷಯವೇ ವೇದ ಸಮ್ಮತವಲ್ಲವೆಂದೂ ವಾದ ಮಾಡುವುದು ಪ್ರಮಾಣ ಬದ್ಧವಲ್ಲ. ಋಕ್ ಸಂಹಿತೆಯ ಅನೇಕ ಭಾಗಗಳಲ್ಲೂ ಉಳಿದ ವೇದಗಳಲ್ಲೂ ಆಗಾಗ್ಗೆ ಸ್ಪಷ್ಟವಾಗಿ ಬಂದಿರುವ ಈ ವಿಚಾರವನ್ನು ಪಾಶ್ಚಾತ್ಯರು ಮತ್ತು ಅವರನ್ನು ಅನುಸರಿಸಿದ ಭಾರತೀಯರೇ ಕೆಲವರೂ ಸರಿಯಾಗಿ ಗಮನಿಸಿದಂತಿಲ್ಲ. ಅಪ್ರಸ್ತುತವಾದ ಆರ್ಯ, ದ್ರಾವಿಡ (ದಸ್ಯು) ಕಲಹ ವಿಚಾರವನ್ನೂ ಇಲ್ಲಿ ಬೆರೆಸಿರುವದೂ ಶೋಚನೀಯ. ಇಷ್ಟರ ಮೇಲೆ ಹೀಗೆ ಆಕ್ಷೇಪಿಸುವವರಲ್ಲೇ ಒಮ್ಮತವಿಲ್ಲ. ವರ್ಣಗಳು ಮನುಷ್ಯರಲ್ಲಿ ಮಟ್ಟಿಗೆ ಅಲ್ಲದೆ, ದೇವತೆಗಳಲ್ಲೂ, ನವಗ್ರಹಗಳಲ್ಲೂ, ಉಂಟೆಂಬುದು ವೇದ-ಶಾಸ್ತ್ರ-ಸಮ್ಮತ, ಇದು ಉಚ್ಚ ನೀಚ ತತ್ತ್ವಗಳನ್ನು ಹೇಳ ಹೊರಟಿಲ್ಲ. ಸರ್ವವೂ ಬ್ರಹ್ಮಾಂಶವೆಂದೂ, ಸುವ್ಯವಸ್ಥಿತ ಸಮಾಜದಲ್ಲಿ ಎಲ್ಲ ವೃತ್ತಿಗಳಲ್ಲಿ ಇರಬೇಕಾದ ಪರಸ್ಪರ ಆಲಂಬನವು ಪರಮಾತ್ಮನಿಂದಲೇ ಪ್ರವೃತ್ತವಾಯಿತು ಎಂಬುದನ್ನಷ್ಟೇ ವೇದವು ತೋರಿಸುತ್ತದೆ. ಒಟ್ಟಿನಲ್ಲಿ ಸಮಾಜವು ಶ್ರೇಯಸ್ಸಿನ ಕಡೆಗೆ ನಡೆಯಲು ಅವಶ್ಯಕವಾದ ದಿವ್ಯದೃಷ್ಟಿಕೋನವನ್ನು ಈ ಮಹಾಪುರುಷ ವಿದ್ಯೆಯು ಉಪದೇಶಿಸಿರುತ್ತದೆ. ಹೀಗೆ ವೇದೋಕ್ತವಾದ ಸಕಲ ವಿದ್ಯೆಗಳ ಸಾರಸಂಗ್ರಹವೇ ಪುರುಷ ಸೂಕ್ತವಾಗಿರುವುದರಿಂದ ಇದಕ್ಕೆ ಇಷ್ಟು ಪ್ರಾಶಸ್ತ್ಯವಿದೆ.

——

ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

# ೪. ಯಾಜ್ಞವಲ್ಕ್ಯರ ಪ್ರೇಮದರ್ಶನ

ಜನಕರಾಜನಿಗೆ ಜ್ಞಾನೋಪದೇಶ ಮಾಡಿದ ಯಾಜ್ಞವಲ್ಕ್ಯರಿಗೆ ಬ್ರಹ್ಮವಾದಿನಿಯಾದ ಮೈತ್ರೇಯಿಯೂ ಮತ್ತು ಗೃಹಕೃತ್ಯ ಮನೋಭಾವದ ಸ್ತ್ರೀ ಪ್ರಜ್ಞೆಯನ್ನೇವುಳ್ಳ ಕಾತ್ಯಾಯಿನಿಯೂ ಪತ್ನಿಯರಾಗಿ ಇದ್ದರು. ಒಮ್ಮೆ ಅವರಿಗೆ ಗೃಹಸ್ಥಾಶ್ರಮ ಪರಿತ್ಯಾಗದ ಕಡೆಗೆ ಮನಸ್ಸಾಯಿತು. ಮೈತ್ರೇಯಿಯನ್ನು ಕರೆದು ಅವರು ಹೇಳಿದರು: "ಮೈತ್ರೇಯಿ ! ನಾನು ಇನ್ನು ಈ ಸ್ಥಾನದಿಂದ ಹೊರಡಲಿದ್ದೇನೆ. ನಿನಗೂ ಕಾತ್ಯಾಯಿನಿಗೂ ( ನಾನು ಹೊರಟನಂತರ ) ನನ್ನ ಆಸ್ತಿಯ ವಿಚಾರಕ್ಕೆ ಕಲಹವಾಗದಿರುವಂತೆ ದ್ರವ್ಯ ವಿಭಾಗವನ್ನು ನಿರ್ಣಯಿಸಿಯೇ ಹೋಗಬೇಕೆಂದಿದ್ದೇನೆ." ಮಹಾಜ್ಞಾನಿಯಾದ ಅಕೆಗೆ ನಗು ಬಂದಿತು. ''ಹೇ ಭಗವನ್! ಇಡೀ ಈ ಭೂಮಂಡಲವೇ ಹಣದಿಂದ ತುಂಬಿದ್ದು ನನ್ನದಾಗಿದ್ದರೆ ನನಗೆ ಅದರಿಂದ ಅಮೃತತ್ತ್ವ ಪ್ರಾಪ್ತಿ ಆಗುವುದೇ?" ಎಂದು ಕೇಳಿದಳು. ಯಾಜ್ಞವಲ್ಕ್ಯರು ಉತ್ತರಿಸುತ್ತಾರೆ:

"ಹಾಗಿದ್ದರೆ ಭೋಗವನ್ನೇ ಸಾಧನವೆಂದು ಬಗೆದು ಸುಖಜೀವನವನು ಅಪೇಕ್ಷಿಸುವವರಿಗೆ ಯಾವ ಸಿದ್ಧಿ ಆಗಬಹುದೋ ಅದು ಮಾತ್ರವೇ ನಿನಗೂ ಆಗಬಗಲ್ಲದು. ಮೋಕ್ಷಕ್ಕೂ, ಹಣಕ್ಕೂ ಸಂಬಂಧವಿಲ್ಲ. ಹೆಚ್ಚೇನು? ಹಣ ವಿದ್ದಲ್ಲಿ ಮೋಕ್ಷವಿಲ್ಲವೆಂದೇ ತಿಳಿ. ಅದರ ಆಶೆಯನ್ನೂ ಬಿಟ್ಟು ಬಿಡು." ಬ್ರಹ್ಮವಾದಿನಿಯಾದ ಮೈತ್ರೇಯಿಯು ತನ್ನ ಪತಿಗೆ ಆಗ ಹಾಕಿದ ಸವಾಲು ಹೀಗಿದೆ; "ಹೇ ಭಗವನ್ ! ಅಮೃತತತ್ತ್ವಕ್ಕೆ ಯಾವುದು ಉಪಾಯ ವೆಂದು ತಾವು ಕಂಡಿದ್ದಿರೋ ಅದನ್ನೇ ನನಗೂ ಉಪದೇಶಿಸಿ." ಈ ಮಾತನ್ನು ಕೇಳಿದ ಯಾಜ್ಞವಲ್ಕ್ಯರಿಗೆ ಕಣ್ಣಿನಲ್ಲಿ ನೀರು ಬಂದಿರಬೇಕು. ಆ ಕ್ಷಣದಲ್ಲಿ ಮೈತ್ರೇಯಿಯು ಹಿಂದೆಂದೂ ತೋರದಷ್ಟು ಪ್ರಿಯವಾಗಿ ಕಂಡಳು; ಅಷ್ಟೇ ಅಲ್ಲದೆ, ಒಂದು ಜೀವವು ಮತ್ತೊಂದು ಜೀವಕ್ಕೆ ಪ್ರಿಯವಾಗುವ ಕಾರಣವನ್ನೇ ಕಂಡು ಹಿಡಿದರು. ಆಗ ಅವರ ಬಾಯಿಂದ ಹೊರಟ ದಿವ್ಯ ಸೂಕ್ತ:

"ಹೇ ಮೈತ್ರೇಯಿ! ಗಂಡನು ತಾನು ಗಂಡನಾದ ಮಾತ್ರದಿಂದ ಪ್ರೀತಿ ಪಾತ್ರನಾಗಲಾರ. ಅವನಲ್ಲಿರುವ ಪರಮಾತ್ಮನಿಗೋಸ್ಕರವಾಗಿಯೇ ಅವನು ಪ್ರಿಯನಾಗುವನು. ಪತ್ನಿಯೂ ಸಹ ತನ್ನ ರೂಪದಿಂದ ಅಥವಾ ಮತ್ತಿತರ ಸಾಧನಗಳಿಂದ ಪತಿಗೆ ಪ್ರಿಯವಾಗಲಾರಳು. ಅವಳಲ್ಲಿರುವ ಪರಮಾತ್ಮನಿಗಾಗಿಯೇ ಅವಳು ಪ್ರೀತಿಸಲ್ಪಡುತ್ತಾಳೆ. ಹೀಗೆಯೇ ಮಕ್ಕಳೂ, ಹಣವೂ, ಬ್ರಹ್ಮಕ್ಷತ್ರಾದಿ ವರ್ಣಗಳೂ ಸಮಸ್ತಲೋಕಗಳೂ, ದೇವತೆಗಳೂ, ಭೂತ ರಾಶಿಗಳೂ, ತಮ್ಮಷ್ಟಕ್ಕೆ ತಾವೇ ಪ್ರಿಯವಾಗಲಾರವು, (ಅಂದರೆ ಯಾರು ಯಾವುದನ್ನು ಪ್ರೀತಿಸಿದರೂ ಅದು ಆ ವಸ್ತುವಿನಲ್ಲಿರುವ ಪರಮಾತ್ಮನನ್ನೇ.) ಪರಮಾತ್ಮೇತರ ವಸ್ತುಗಳು ಎಂದೂ ಪ್ರೀತಿ ಪಾತ್ರವಲ್ಲ, ಯಾವ ವಸ್ತುವಿನಲ್ಲಿ ಸೌಂದರ್ಯವಿದೆಯೋ, ಪ್ರಿಯವಾಗಿ ಕಾಣುವುದೋ, ಅಲ್ಲಿ ಪರಮಾತ್ಮನ ಸಾನ್ನಿಧ್ಯ ಇದ್ದೇ ಇರುವುದು. ಹೀಗೆ ಜಗತ್ತಿನ ಎಲ್ಲ ವಸ್ತುಗಳನ್ನೂ ಒಂದಕ್ಕೊಂದು ಪ್ರಿಯವಾಗಿಸುವನೇ ಪರಮಾತ್ಮನು. ಅವನೇ ಏಕೀಕರಣ ಶಕ್ತಿ: ಅಂದರೆ ಯಾವುದು ಇದಕ್ಕೆ ವಿರುದ್ಧವಾದ ದ್ವೇಷ ಪ್ರವೃತ್ತಿಯನ್ನು ಮಾಡಿಸುವುದೋ ಅದು ಪರಮಾತ್ಮನಿಗೆ ವಿರುದ್ಧವಾದ ಶಕ್ತಿ, ಅಸುರ ಶಕ್ತಿ. ಅಂದ ಮೇಲೆ ಈ ಪರಮಾತ್ಮನನ್ನೇ ಜ್ಞಾನಿಯು ಎಲ್ಲ ಕಡೆಯಲ್ಲಿಯೂ ನೋಡಬೇಕು, ಕೇಳ ಬೇಕು, ಮನಸ್ಸಿನಲ್ಲಿ ಧ್ಯಾನಿಸಬೇಕು. ಹಾಗೆ ಮಾಡಿದಾಗ, ಎಲ್ಲವನ್ನೂ ತಿಳಿದು ಸರ್ವಜ್ಞನಾಗುವನು. ಯಾವನು ಬ್ರಹ್ಮಕ್ಷತ್ರಾದಿ ವರ್ಣಗಳನ್ನೂ ಲೋಕಗಳನ್ನೂ, ದೇವತೆಗಳನ್ನೂ, ವೇದಗಳನ್ನೂ ಪ್ರಾಣಗಳನ್ನೂ ಹೀಗೆ ಪರಮಾತ್ಮ ಸಂಬಂಧದಿಂದ ಒಂದುಗೂಡಿದಂತೆ ಕಾಣುವನೋ ಅವನು ಸುಜ್ಞಾನಿಯು; ಹಾಗಲ್ಲದವನು ಮೂಢನು. ಅವನನ್ನು ಸಕಲ ಪ್ರಾಣಿ ವಸ್ತುಗಳೂ ತಿರಸ್ಕರಿಸಿ ಅಪಮರ್ಯಾದೆ ಮಾಡುವುವು. ಅಂದರೆ ಪರಮಾತ್ಮನನ್ನು ತಿರಸ್ಕರಿಸಿದರೆ ಎಲ್ಲವೂ ತನ್ನನ್ನು ತಿರಸ್ಕರಿಸುತ್ತವೆ. ಹೀಗೆ ಬ್ರಹ್ಮಾತ್ಮಕವಾದ ಈ ಜಗತ್ತಿನಲ್ಲಿ ಬ್ರಹ್ಮ ಸೌಂದರ್ಯವನ್ನು ಉಪಾಸಿಸುವುದೇ ಬ್ರಹ್ಮ ಸಾಕ್ಷಾತ್ಕಾರಕ್ಕೆ ಸರಿಯಾದ ಮಾರ್ಗ. ಇಹಪರಗಳೆಲ್ಲೂ ಇದು ಸುಖಕ್ಕೆ ಕಾರಣ. ಇದಕ್ಕೊಂದು ಉಪಮಾನ: ದುಂದುಭಿಯು (ನಗಾರಿಯು) ಶಬ್ದ ಮಾಡುತ್ತಿರುವಾಗ ಅದರಲ್ಲಿ ಬಾಹ್ಯಾಂತರ ಭೇದ ವಿಲ್ಲದೆ ಒಂದೇ ಶಬ್ದವಾಗಿ ಗ್ರಹಿಸಲ್ಪಡುತ್ತದೆ; ಶಂಖನಾದದಲ್ಲಿಯೂ ಏಕರಸರೂಪವಾದ ಅನು

ಭವವೇ ಆಗುತ್ತದೆ. ವೀಣಾ ವಾದನದಲ್ಲಿಯೂ ಆನಂದಾನುಭೂತಿಗೆ ಸಾಧಕವಾದ ಏಕ ರಸಾತ್ಮಕವಾದ ವಾದನವು ಅದರ ವೈವಿಧ್ಯಮಯವಾದ ನುಡಿತ ಮಿಡಿತಗಳಿಂದ ಹೊರ ಹೊಮ್ಮುತ್ತದೆ. ಬರಿಯ ಶಬ್ದ ಸಾಮಾನ್ಯವನ್ನು ಗ್ರಹಿಸುವುದರಿಂದ ರಸಾನುಭೂತಿಯಾಗಲಾರದು. ಜಗತ್ತಿನ ಸೌಂದರ್ಯದ ಬಹು ಮುಖಗಳು ಹೇಗಿವೆ ಯೆಂದರೆ ಉರಿಯುವ ಕಟ್ಟಿಗೆಯ ಅಗ್ನಿ ಜ್ವಾಲೆಯಲ್ಲಿ ಹೊರ ಬರುವ ನಾನಾ ವರ್ಣದ ಜ್ವಾಲೆಗಳಂತೆ, ಹೀಗೆಯೇ ಜಗದೀಶ್ವರನಾದ ಮಹಾಪುರುಷನ ನಿಶ್ವಾಸ ರೂಪವಾಗಿಯೇ ಋಗ್, ಯಜುಸ್ಸಾಮ ಅಥರ್ವವೇದಗಳೂ, ಇತಿಹಾಸ-ಪುರಾಣಗಳೂ. ಕಲೆಗಳೂ, ಉಪನಿಷತ್ತುಗಳೂ, ಶ್ಲೋಕಗಳೂ, ಸೂತ್ರಗಳೂ, ಮಂತ್ರವಿವರಣೆಗಳೂ, ಅರ್ಥವಾದಗಳೂ ಯಜ್ಞ, ಆಹುತಿ, ಅನ್ನ. ಪಾನ. ಈಲೋಕ, ಪರಲೋಕ, ಸಮಸ್ತ ಪ್ರಾಣಿಗಳೂ, ಎಲ್ಲವೂ ಆಗಿವೆ. ಈ ಆನಂದದ ಗುಟ್ಟನ್ನು ತಿಳಿಯುವ ಕಾಲದಲ್ಲಿ ಸಮರಸವೇ ಅನುಭೂತಿಯ ಲಕ್ಷಣವಾಗಿರುತ್ತದೆ— ಉಪ್ಪಿನ ಗಟ್ಟಿಯು ಒಳಗೆ ಹೊರಗೆ ಭೇದವಿಲ್ಲದಂತೆ, ಎಲ್ಲ ಕಡೆಯಲ್ಲಿಯೂ ಉಪ್ಪಾಗಿರುವಂತೆ. ಈ ಅನುಭೂತಿಯಲ್ಲಿ ಮುಳುಗಿರುವ ಜೀವಾತ್ಮನು "ಪ್ರಜ್ಞಾನಘನ"ನೆಂದು ಕರೆಯಲ್ಪಡುವನು. ಹೇಗೆ ಸಮುದ್ರವು ಸಮಸ್ತ ವಿಧವಾದ ನೀರಿಗೂ ಅಯನವೂ (ಉಪಾದಾನಾದಿ ಏಕಕಾರಣವೂ), ಹಾಗೆಯೇ ಎಲ್ಲ ವಿಧವಾದ ಸ್ಪರ್ಶಗಳಿಗೂ ಚರ್ಮವು "ಏಕಾಯನ"ಯವೋ, ಗಂಧಗಳಿಗೆಲ್ಲ ಮೂಗು ಏಕಾಯನ ಹೇಗೋ, ಹಾಗೆಯೇ ರಸಗಳಿಗೆ ನಾಲಿಗೆಯಂತೆ, ರೂಪಗಳಿಗೆ ಕಣ್ಣುಗಳಂತೆ, ಶಬ್ದಗಳಿಗೆ ಕಿವಿಯಂತೆ, ಸಂಕಲ್ಪಗಳಿಗೆ ಮನಸ್ಸಿನಂತೆ, ವಿದ್ಯೆಗಳಿಗೆ ಹೃದಯದಂತೆ. ಕರ್ಮಗಳಿಗೆ ಹಸ್ತದಂತೆ, ಭೋಗಾತ್ಮಕವಾದ ಆನಂದಕ್ಕೆ ಉಪಸ್ಥದಂತೆ, ವಿಸರ್ಗಗಳಿಗೆ ಪಾಯುವಿನಂತೆ, ದಾರಿಗಳಿಗೆ ಕಾಲಿನಂತೆ, ಎಲ್ಲ ಮಾತುಗಳಿಗೆ, ವೇದಗಳಿಗೆ, ವಾಕ್ಕಿನಂತೆ-ಸಮಸ್ತಕ್ಕೂ ಒಂದೇ ಆಧಾರವಾಗಿ ಧಾರಕವಾಗಿ ಪೋಷಕವಾಗಿ ಅಂತರ್ಯಾಮಿಯಾಗಿ ಗತಿಯಾದಿ ಏಕಾಶ್ರಯವಾಗಿ ಇರುವವನು (ಆ ಪ್ರಿಯಸ್ವರೂಪನಾದ) ಪರಮಾತ್ಮನೊಬ್ಬನೇ ಉತ್ಕ್ರಮಣ ಕಾಲದಲ್ಲಿ ಪಂಚಭೂತಾತ್ಮಕವಾದ ಶರೀರದಿಂದ ಮೇಲೆದ್ದು ನಿರತಿಶಯವಾದ ಮತ್ತು ನಿರಂತರ ಪ್ರಿಯವಾದ ಈ ಪರಮಾತ್ಮ ಸ್ವರೂಪಾನುಭೂತಿಯಲ್ಲಿಯೇ ಪ್ರತಿ ಜೀವನೂ ಇರುತ್ತಾನೆ. ಆಗ ತದಿತರ

ಬಾಹ್ಯ ಸಂಜ್ಞೆಗಳು (ಹೊರಗಿನ ತಿಳುವಳಿಕೆಗಳು) ಇರುವುದಿಲ್ಲ." ಆಗ ಮೈತ್ರೇಯಿಯು ಪುನಃ ಪ್ರಶ್ನಿಸುತ್ತಾಳೆ. "ಹೇ ಭಗವನ್! ಈಗಲೇ ನನ್ನನ್ನು ಇಲ್ಲಿಯೇ ಭ್ರಾಂತಿ ರೂಪವಾದ ಅಜ್ಞಾನದಲ್ಲಿ ಹಾಕಿದಂತಾಯಿತು. ಈ ಪ್ರಿಯಸ್ವರೂಪನನ್ನು ನಾನು ತಿಳಿಯಲಾರೆ" ಎಂದು. ಆಗ ಪುನಃ ಯಾಜ್ಞವಲ್ಕ್ಯರು ಹೇಳುತ್ತಾರೆ. "ಎಲೆ! ಮೈತ್ರೇಯಿ! ನಾನು ನಿನಗೆ ಅಜ್ಞಾನವನ್ನು ಉಪದೇಶಿಸುತ್ತಿಲ್ಲ, ಪರಮಾತ್ಮನು ಹೇಗೆ ಅವಿನಾಶಿಯೆಂದೂ, ಮತ್ತು ವಿಚ್ಛೇದರಹಿತನೆಂದೂ (ಬಿಡಿ ಬಿಡಿ ಮಾಡಲು ಬಾರದವನೆಂದೂ) ಅಷ್ಟೇ ಹೇಳಿರುತ್ತೇನೆ. ಏಕೆಂದರೆ ಎಲ್ಲಿ ದ್ವಂದ್ವರೂಪದ ಅನುಭವವೇ ಇದೆಯೋ ಅಲ್ಲಿ ವಿರಸದ ಅನುಭವಕ್ಕೆ ಅವಕಾಶವಿದೆ. ಮೂಸುವುದು, ಸವಿಯುವುದು, ಯೋಚಿಸುವುದು, ಸ್ಪರ್ಶಿಸುವುದು, ಇತ್ಯಾದಿ ಒಂದಕ್ಕಿಂತ ಭಿನ್ನವಾದ ಒಂದು ವ್ಯಾಪಾರ "ದ್ವೈತ" ಪ್ರಪಂಚದಲ್ಲಿ (ದ್ವಂದ್ವ ಸಮೃದ್ಧವಾದ ಪ್ರಪಂಚದಲ್ಲಿ) ಸಾಧ್ಯ, ಆದರೆ ಯಾವನಿಗೆ ಎಲ್ಲವೂ ಪರಮಾತ್ಮ–ಆತ್ಮಕವಾಗಿಯೇ ಕಾಣುವುದೋ ಅಲ್ಲಿ ಈ ದ್ವಂದ್ವಾನುಭೂತಿಗೆ, ಅಂದರೆ ವಿರಸಕ್ಕೆ, ಕಾರಣವೆಲ್ಲಿ? "ಇಷ್ಟೇ"–ಎಂಬುವುದಾಗಿ ಎಲ್ಲೇ ಇಲ್ಲದ ಮಹಿಮೆಯುಳ್ಳವನೇ ಈ ಪರಮಾತ್ಮ. ಇವನು ಅಗ್ರಾಹ್ಯನೂ, ಅಕ್ಷಯನೂ, ಅಸಂಗನೂ, ಬಂಧರಹಿತನೂ, ದುಃಖದೂರನೂ, ಅಹಿಂಸಿತನೂ ಆಗಿದ್ದಾನೆ. ಹೀಗೆಯೇ ಸರ್ವವಿಜ್ಞಾತೃವಾದ ಈ ಪರಮಾತ್ಮನನ್ನು (ಈ ವಿಧವಾದ ಸೌಂದರ್ಯೋಪಾಸನೆಯ ಮೂಲಕವಲ್ಲದೆ) ಬೇರೆ ಹೇಗೆ ತಿಳಿಯಲು ಸಾಧ್ಯ? (ಅಂದರೆ ಅವನನ್ನು ತಿಳಿಯುವುದಕ್ಕೆ ಅವನೇ ಸಾಧನ, ಅವನ ಸಂಬಂಧವಿಲ್ಲದ ಪದಾರ್ಥಗಳು ಅವನನ್ನು ತಿಳಿಸಲಾರವು) ಇದೇ ಅಮೃತತ್ತ್ವಕ್ಕೆ ಸಾಧನ. (ನೀನು ಹಿಂದೆ ಹೇಳಿದ) ದ್ರವ್ಯವಲ್ಲ." ಹೀಗೆ ಹೇಳಿ ಯಾಜ್ಞವಲ್ಕ್ಯರು ಹೊರಟರು. ಪ್ರಸಿದ್ಧವಾದ ಈ ಮೈತ್ರೇಯೀ ಬ್ರಾಹ್ಮಣವು, ಬೃಹದಾರಣ್ಯಕ ಉಪನಿಷತ್ತಿನ ನಾಲ್ಕನೇ ಅಧ್ಯಾಯದ ನಾಲ್ಕನೆಯ ಬ್ರಾಹ್ಮಣವಾಗಿದೆ. ಇಲ್ಲಿ ಪರಮಾತ್ಮನನ್ನು ಕುರಿತು ಹೇಳುವ ವಾಕ್ಯಗಳಲ್ಲಿ ಕೇವಲ "ಆತ್ಮ" ಶಬ್ದವನ್ನೇ ಬಳಸಿರುದರಿಂದ ಅನೇಕರಿಗೆ "ಇವನು ಜೀವಾತ್ಮನೋ ಅಥವಾ ಪರಮಾತ್ಮನೋ" ಎಂಬುದಾಗಿ ಸಂದೇಹ ಬರುವುದರಿಂದ ವೇದವ್ಯಾಸರು ಬ್ರಹ್ಮಸೂತ್ರದಲ್ಲಿ (ಅಧ್ಯಾಯ ೧–೪–೧೯ ನೇ ಸೂತ್ರ) "ವಾಕ್ಯಾನ್ವಯಾತ್" ಎಂಬ ಸೂತ್ರದಲ್ಲಿ ಹೀಗೆ ವಿವರಿಸುತ್ತಾರೆ.

"ಇಲ್ಲಿ ಬರುವ ವಾಕ್ಯಗಳಲ್ಲಿ ಕಂಡುಬರುವ ಆತ್ಮ ಶಬ್ದವನ್ನು ಪರಮಾತ್ಮ ಪರವಾಗಿ ಅನ್ವಯಿಸಿಕೊಳ್ಳಬೇಕು''. ಇಂತು ಜಗತ್ತಿನಲ್ಲಿ ಪ್ರೀತಿಯ ಮೂಲವನ್ನು ಯಾಜ್ಞವಲ್ಕ್ಯರು ಸಕಲ ಜಗತ್ತಿಗೆ ಬೋಧಿಸಿ ಪರಮೋಪಕಾರ ಮಾಡಿರುತ್ತಾರೆ. ಬೇರೆ ಉಪನಿಷತ್ತುಗಳಲ್ಲಿಯೂ ಪರಮಾತ್ಮನನ್ನು ಪ್ರಿಯಸ್ವರೂಪನೆಂದು ಕೊಂಡಾಡಿರುವುದನ್ನು ಇಲ್ಲಿ ಸ್ಮರಿಸಬಹುದು. ಸಾಮವೇದದ ಕೇನೋಪನಿಷತ್ತಿನಲ್ಲಿ : ''ತದ್ಧ ತದ್ವನಂ ನಾಮ ತದ್ವನ ಮಿತ್ಯುಪಾಸಿತವ್ಯಂ, ಸಯ ಏತದೇವಂ ವೇದಾಭಿಹೈನಂ ಸರ್ವಾಣಿ ಭೂತಾನಿ ಸಂವಾಂಛಂತಿ". ಎಂದರೆ "ಅವನಿಗೆ 'ವನ' ಎಂದು ಹೆಸರು. (ಎಲ್ಲರೂ ಇವನನ್ನು 'ಬಯಸು' ವರಾದುದರಿಂದ, 'ಪ್ರೀತಿ'ಸುವರಾದುದರಿದ, 'ಭಜಿಸುವ' ರಾದುದರಿಂದ, 'ಇಚ್ಛಿ' ಸುವರಾದುದರಿಂದ.) ಅವನನ್ನು ಹೀಗೆಯೇ ಉಪಾಸಿಸಬೇಕು. ('ಪ್ರಿಯ'ನೆಂದು). ಯಾವನು ಹೀಗೆ ತಿಳಿಯುವನೋ ಅವನು ಎಲ್ಲರಿಗೂ ಪ್ರಿಯನಾಗುವನು" ಎಂದು ಸಂಗ್ರಹಿಸಿ ಬೋಧಿಸಲಾಗಿದೆ. ತೈತ್ತಿರೀಯದಲ್ಲಿ "ಏಷಹ್ಯೇವಾನಂದಯಾತಿ", "ಇವನೇ ಎಲ್ಲರನ್ನೂ ಆನಂದಗೊಳಿಸುವನು'' ಎಂದು ಪರಮಾತ್ಮನನ್ನು ವರ್ಣಿಸಿದೆ. ಯಾಜ್ಞವಲ್ಕ್ಯರು, ಯೋಗಾವಸ್ಥೆಯಲ್ಲಿ ಜೀವಾತ್ಮನು ಪರಮಾತ್ಮನ ಆಲಿಂಗನ ಸುಖದಲ್ಲಿ ಮುಳುಗಿರುವನೆಂದೂ, ಈ ಪರಮಾತ್ಮ ಸಂಯೋಗ ಸುಖವು ಹೇಗಿರುವುದೆಂದರೆ "ತದ್ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತಃ'' ಇತ್ಯಾದಿ ಕ್ರಮದಲ್ಲಿ, ಪ್ರಿಯಳಾದ ಪತ್ನಿಯೊಡನೆ ಪತಿಯು ಸಂಗಮಿಸಿ ಒಳ ಹೊರಗು ಎಂಬ ಭೇದಮಯ ಅನುಭೂತಿಯನ್ನು ಮೀರಿದಂತೆ, ಎಂದು ವರ್ಣಿಸಿದ್ದಾರೆ. (IV-3-21). ಇದೇ ಬೃಹದಾರಣ್ಯಕೋಪನಿಷತ್ತಿನಲ್ಲಿಯೇ ಮತ್ತೊಂದು ಕಡೆಯಲ್ಲಿ "ಆತ್ಮನು (ಪರಮಾತ್ಮನು) ಮಗನಿಗಿಂತಲೂ, ಮಿತ್ರನಿಗಿಂತಲೂ, ಉಳಿದೆಲ್ಲಕ್ಕಿಂತಲೂ ಪ್ರೀತಿ ಪಾತ್ರ''ನೆಂದೂ, ಹೀಗೆ ತಿಳಿಯದೇ "ಯಾವನು ಬೇರೆ ಏನನ್ನಾದರೂ ಪ್ರಿಯವೆಂದು ಹೇಳಿದರೆ ಈಶ್ವರನು ತಾನಲ್ಲದ ಆ ವಸ್ತುಗಳು ಅವನಿಗೆ ಪ್ರಿಯವಾಗದಂತೆ ನಿರೋಧಿಸುವನು" ಎಂದೂ, ಆದ್ದರಿಂದ ಪರಮಾತ್ಮನನ್ನೇ ಅತ್ಯಂತ ಪ್ರಿಯ ವಸ್ತುವೆಂದು ಉಪಾಸಿಸಬೇಕೆಂದೂ ("ಆತ್ಮಾನಮೇವ ಪ್ರಿಯ ಮುಪಾಸೀತ''), ಹೀಗೆ ಉಪಾಸಿಸುವವನ ಪ್ರೇಮವು ನಷ್ಟವಾಗದೇ ಶಾಶ್ವತವೂ ಅಮೃತವೂ ಆಗುವದೆಂದೂ ಬೋಧಿಸಿದೆ

(I -8). ಭಗವದ್ಗೀತೆಯಲ್ಲಿ ಶ್ರೀ ವಾಸುದೇವನು "ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ" (VII-17) ಎಂದರೆ "ನಾನು ಜ್ಞಾನೀಭಕ್ತನಿಗೆ ಹೇಗೆ ಅಳತೆಗೆ ಮೀರಿದಷ್ಟು ಪ್ರೀತಿಗೆ ಪಾತ್ರನೋ, ಅಂತಹ ಜ್ಞಾನಿಯು ನನಗೂ ಹಾಗೇ ಪ್ರೀತಿ ಪಾತ್ರನು" ಎಂದು ಘೋಷಿಸಿರುವುದೂ ಈ ಹಿನ್ನೆಲೆಯಲ್ಲೇ. ಅಲ್ಲದೆ ಪರಮ ಅಭಿಮಾನದಿಂದ "ಇಂತಹ ಜ್ಞಾನಿಯು ತನ್ನ ಆತ್ಮವೇ" ಎಂದೂ, ಅವನಿಲ್ಲದೆ ತನ್ನ ಪ್ರಾಣಧಾರಣೆಯಿಲ್ಲವೆಂದೂ ಹೇಳಿ ಸಾರಿರುವುದೂ ಗಮನೀಯ. ವಿಷ್ಣು ಪುರಾಣದಲ್ಲಿ ಪ್ರಹ್ಲಾದನು ಜ್ಞಾನಿಗಳಲ್ಲಿ ಅಗ್ರೇಸರನಾದುದರಿಂದಲೇ, ಹಾವುಗಳಿಂದ ಕಚ್ಚಲ್ಪಟ್ಟಾಗ್ಯೂ :

> "ಸತ್ವಾಸಕ್ತಮತಿಃ ಕೃಷ್ಣೇ ದಶ್ಯಮಾನೋ ಮಹೋರಗೈಃ ।
> ನವಿವೇದಾತ್ಮನೋಗಾತ್ರಂ ತತ್ಸ್ಮೃತ್ಯಾಹ್ಲಾದ ಸಂಸ್ಥಿತಃ ॥

ಎಂದು ವರ್ಣಿಸಿರುವಂತೆ, ಪರಮಾತ್ಮನಲ್ಲಿ ಅತ್ಯಂತ ಪ್ರೀತಿಯಿಂದ ಆಸಕ್ತನಾಗಿದ್ದು, ಆ ಸುಖದಲ್ಲಿ ಮುಳುಗಿದ್ದುದರಿಂದ. ಹಾವುಗಳು ಕಚ್ಚಿದುದೂ ತಿಳಿಯಲಿಲ್ಲವಂತೆ ! ಇದು ಪರಮಾತ್ಮನನ್ನು "ಪ್ರಿಯ" ನೆಂದು ಉಪಾಸಿಸುವುದಕ್ಕೆ ಶ್ರೇಷ್ಠ ನಿದರ್ಶನ. ಇಂತಹ ಜ್ಞಾನೀ ಭಕ್ತರ ವಿಷಯಕ್ಕೆ ಭಗವಂತನೂ ಮನಸೋತು ಅವರನ್ನು "ಉದಾರ" ಸ್ವಭಾವದವರೆಂದು ಗೀತೆಯಲ್ಲೇ (VII-18) ವರ್ಣಿಸಿದ್ದಾನೆ. ಇದರ ಅಭಿಪ್ರಾಯ : ''ಯಾರು ನನ್ನ ದೆಸೆಯಿಂದ ಒಂದು ಅಲ್ಪವನ್ನಾದರೂ ಯಾಚಿಸಿ ಸ್ವೀಕರಿಸುವರೋ ಅವರು ನನಗೆ ನನ್ನ ಸರ್ವಸ್ವವನ್ನೂ ಕೊಟ್ಟು ಅನುಗ್ರಹ ಮಾಡಿದಂತೆ ಆಗುವುದು" ಎಂಬ ಪರಮಾತ್ಮನ ನಿರತಿಶಯ ಕಾರುಣ್ಯ ಔದಾರ್ಯಗಳಿಗೆ ಸಾಕ್ಷಿ. ಏಕೆಂದರೆ ಭಗವಂತನಿಗೆ "ಸಕಲ ಫಲ ಪ್ರದಾತೃ" ಎಂಬ ಪರಮೌದಾರ್ಯ ಗುಣವು ಪ್ರಧಾನವಾದುದು. ಇದು ವರ ಯಾಚನೆ ಮಾಡುವ (ಪ್ರತಿಗೃಹೀತೃ) ವನ್ನು ಅವಲಂಬಿಸಿದೆ. ಇವನಿಲ್ಲದಿದ್ದರೆ ಭಗವಂತನಿಗೆ ಆಗ ಆ ಪ್ರಧಾನ ಗುಣಲೋಪವಾದಿ ಸ್ವರೂಪನಾಶವಾಗುವುದು. ಹೀಗೆ ಭಗವಂತನಿಗೆ "ಸ್ವರೂಪ ದಾನ" ಮಾಡಿದುದರಿಂದ ಭಕ್ತರು "ಉದಾರ" ಸ್ವಭಾವದವರೆಂದು ಅಭಿಪ್ರಾಯ.

— —

ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

## ೫. ಸೋಮ-ಗಾಯತ್ರಿ

ಸೋಮನು ವೇದದಲ್ಲಿ ಪೃಥ್ವೀಸ್ಥಾನದ ದೇವತೆ, ಯಾಗಗಳಲ್ಲಿಯೂ ಸೋಮಯಾಗವು ಅತ್ಯಂತ ಶ್ರೇಷ್ಠವಾದದ್ದು. ಸೋಮನನ್ನು ದೇವತೆಗಳ ಅನ್ನವೆಂದೂ ಆಗಾಗ್ಗೆ ವರ್ಣಿಸಿದೆ. ಈ ಸೋಮನು ಲತಾ ರೂಪದಲ್ಲಿಯೂ ವರ್ಣಿಸಲ್ಪಟ್ಟ, ಸೋಮರಸ ಪಾನಮಾಡಿದ ಇಂದ್ರನು ಶತ್ರುಂಜಯನಾದ ವಿಷಯ ವೇದದಲ್ಲಿ ಅನೇಕ ಸಲ ಉಕ್ತವಾಗಿದೆ. ಕೇವಲ ದೇವಲೋಕದಲ್ಲಿ ಮಟ್ಟಿಗೆ ಇದ್ದ ಇವನನ್ನು ಗರುಡ ಪಕ್ಷಿಯು ಗಾಯತ್ರೀರೂಪದಿಂದ ಈ ಭೂಲೋಕಕ್ಕೆ ತಂದ ವಿಷಯವೂ ಆಗಾಗ್ಗೆ ವರ್ಣಿಸಲ್ಪಟ್ಟಿದೆ. ಸೋಮನನ್ನು ಪವಮಾನನೆಂದೂ ವೇದದಲ್ಲಿ ಕರೆದಿದೆ: ಸೋಮನನ್ನು ನದಿಗಳಿಗೆಲ್ಲಾ ಯಜಮಾನನೆಂದೂ, ಅವನೇ ಸಮುದ್ರ ರಾಜನೆಂದೂ, ನೀರನ್ನು ಉತ್ಪತ್ತಿಸುವವನೆಂದೂ ಮಳೆಗರೆಯುವನೆಂದೂ ಸರ್ವದಾ ನೀರಿನಲ್ಲೇ ವಾಸಿಸುವನೆಂದೂ ಸಹ ವರ್ಣಿಸಿದೆ. ಸೋಮನನ್ನು ಪಾನಮಾಡಿದವರು ಅಮರ್ತ್ಯರಾಗಿ ಅತಿ ಮಾನುಷ ಕಾರ್ಯಗಳನ್ನು ಸಾಧಿಸುವ ಶಕ್ತಿಯನ್ನು ಪಡೆಯುತ್ತಾರೆಂದೂ ಆದುದರಿಂದ ಇದನ್ನೇ ಅಮೃತ ಸಮಾನವೆಂದೂ ಅಥವಾ ಅಮೃತವೇ ಎಂದೂ ಕೂಡ ವರ್ಣಿಸಿದೆ. ಸೋಮನನ್ನು ಆಗಾಗ್ಗೆ ಸೂರ್ಯನಿಗೂ ಹೋಲಿಸಿ ಭೂಮ್ಯಾಕಾಶಗಳನ್ನು ತನ್ನ ಕಿರಣಗಳಿಂದ ವ್ಯಾಪಿಸಿದವನೆಂದೂ, ಕತ್ತಲೆಯೊಡನೆ ಹೋರಾಡುವನೆಂದೂ, ಬೆಳಕನ್ನು ಕೊಡುವವನೆಂದೂ, ವರ್ಣಿಸಿದೆ. ಶಾಶ್ವತವಾದ ತೇಜಸ್ಸು, ಯಶಸ್ಸು, ನಿತ್ಯತ್ವ ಇವು ಸೋಮನು ಅನುಗ್ರಹಿಸುವ ವರಗಳು. ಸೋಮನು ಔಷಧಿಗಳಿಗೆ ವಾಸಸ್ಥಾನವೂ ಹೌದು. ಸಮಸ್ತರೋಗಗಳನ್ನೂ ನಿವಾರಿಸುವದಲ್ಲದೆ. ಕುರುಡರಿಗೆ ಕಣ್ಣನ್ನೂ ಕುಂಟರಿಗೆ ಕಾಲನ್ನೂ ಕೊಡಬಲ್ಲನು, ಅವನು ಮಾನವನ ಸರ್ವಾಂಗಗಳನ್ನೂ ವ್ಯಾಪಿಸಿ ಶರೀರ ರಕ್ಷಕನಾಗಿಯೂ, ಹೃದ್ಗತವಾದ ಪಾಪಗಳ ನಾಶಕನಾಗಿಯೂ ಇರುತ್ತಾನೆ. ಸತ್ಯವನ್ನು ವೃದ್ಧಿ ಪಡಿಸು

ವುದು ಇವನ ಉನ್ನತ ಕ್ರಿಯೆ. ಸೋಮನು ವಾಚಸ್ಪತಿಯೂ ಹೌದು. ಅಂಬಿಗನು ದೋಣಿಯನ್ನು ಮುಂದೆ ದೂಡುವಂತೆ ಇವನು ವಾಗ್ ಉಚ್ಚಾರಣ ಶಕ್ತಿಯನ್ನು ಅನುಗ್ರಹಿಸುವನು. ಪ್ರಬಲವಾದ ಭಾವನೆಗಳನ್ನು ಮನಸ್ಸಿನಲ್ಲಿ ಎಬ್ಬಿಸುವನು. ಪ್ರಾರ್ಥನೆಗಳನ್ನು ಎಬ್ಬಿಸುವನು. ಇವನು ಕವಿಗಳಿಗೆ ಒಡೆಯನು. ಬ್ರಾಹ್ಮಣರಲ್ಲಿ ಇವನೇ ಋಷಿಯು, ಬ್ರಾಹ್ಮಣರೆಲ್ಲ ಸೋಮನನ್ನೇ ರಾಜನೆಂಬುದಾಗಿ ಪೂಜಿಸುವರು ಎಂದೂ ಹೇಳಿದೆ. ಸೋಮನು ಯಜ್ಞದ ಹೃದಯವಾಗಿ ಜ್ಞಾನಪ್ರಸಾರಕನೂ ಹೌದು. ವೃತ್ರನೊಡನೆ ಇಂದ್ರನು ಯುದ್ಧ ಮಾಡಿ ಗೆಲ್ಲಲು ಸೋಮನೇ ಕಾರಣವಾದುದರಿಂದ ಇವನು ಇಂದ್ರನ ಆತ್ಮವೂ ಹೌದು, ಅಥವಾ ಇವನೇ ಇಂದ್ರನ ವಜ್ರಾಯುಧ. ನೀರಿನಲ್ಲಿ ಸೂರ್ಯನನ್ನು ಉತ್ಪತ್ತಿಸಿ ಸೂರ್ಯೋದಯಕ್ಕೂ ಇವನೇ ಕಾರಣ. ಇವನು ಸ್ವಯಂ ಯೋಧನೂ ಹೌದು. ಇವನು ಸೋತದ್ದೇ ಇಲ್ಲ. ತನ್ನನ್ನು ಆರಾಧಿಸಿದ ಯೋಧರಿಗೆ ಏನನ್ನಾದರೂ ಅನುಗ್ರಹಿಸಬಲ್ಲನು. ಸೋಮ ಪಾನ ಮಾಡಿದ ಬ್ರಾಹ್ಮಣನಿಗೆ ತನ್ನ ಕಣ್ಣಿನಿಂದಲೇ ಶತ್ರುವನ್ನು ದಹಿಸುವ ಶಕ್ತಿ ಉಂಟಾಗುವುದು. ಭೂಮಿಯಲ್ಲಿ ಇವನು ಪರ್ವತವಾಸಿ; ಸ್ವರ್ಗಲೋಕದ ಪಕ್ಷಿಯಂತೆ, ಮೇಲಿನಿಂದಲೇ ಅವನು ಎಲ್ಲವನ್ನೂ ಸರ್ವದಾ ನೋಡುತ್ತಿರುತ್ತಾನೆ, ಸೋಮ ಸಂಬಂಧವುಳ್ಳದ್ದೆಲ್ಲ ಪ್ರಿಯವಾಗುವದರಿಂದ ಸಾಮಾನ್ಯವಾಗಿ ''ಪ್ರಿಯ"ನನ್ನು ವೈದಿಕ ಸಾಹಿತ್ಯದಲ್ಲಿ ''ಸೌಮ್ಯ" ಎಂದೂ ಕರೆಯುವುದು ವಾಡಿಕೆಯಾಗಿದೆ.

ವೇದ ಜ್ಞಾನವಿಲ್ಲದ ಅನೇಕ ಪಾಶ್ಚಾತ್ಯರೂ, ವೇದಾಭಿಮಾನಿಗಳಲ್ಲದ ಭಾರತೀಯರೇ ಕೆಲವರೂ ಸೋಮನನ್ನು ಕೇವಲ ''ಉನ್ಮಾದಕವಾದ ಪಾನೀಯ"ವೆಂಬುದಾಗಿ ಭಾವಿಸಿ, ಅಪಪ್ರಚಾರ ಮಾಡುತ್ತಿರುವುದು ಕೇವಲ ಅಜ್ಞಾನಕ್ಕೆ ಮತ್ತು ಅವರ ದುರುದ್ದೇಶಕ್ಕೆ ಸಾಕ್ಷಿಯಾಗಿದೆ. ಇವರ ಪ್ರಕಾರ, ಸೂಕ್ತದರ್ಶಿಯು ಋಷಿಯೇ ಅಲ್ಲವಂತೆ! ಸೋಮಪಾನದಿಂದ ಮತ್ತನಾಗಿ ಹೀಗೆ ತಾನೇ ಋಷಿಯೆಂದು ಭ್ರಮಿಸಿದ್ದಾನಂತೆ! "ಸೋಮ"ಕ್ಕೂ "ಸುರೆ"ಗೂ ವ್ಯತ್ಯಾಸವಿಲ್ಲವೆಂದೂ, ಒಂದು ಯಜ್ಞಕ್ಕೆ ಉಪಯುಕ್ತವೆಂದೂ ಮತ್ತೊಂದು ಯಜ್ಞಕ್ಕಲ್ಲದೆ ಸರ್ವಸಾಧಾರಣವಾದ ಉಪಯೋಗಿಸಲ್ಪಡುತ್ತಿತ್ತೆಂದೂ, ಇದೇ

ಅವುಗಳ ವ್ಯತ್ಯಾಸವೇದೂ ಒಬ್ಬ ಕ್ರೈಸ್ತಪಾದ್ರಿಯು ಬರೆದಿದ್ದಾನೆ. (ಇವನೂ 'ಕುಡಿದೇ' ಬರೆದಿರಬೇಕು !) ಸೋಮವು ಲೈಂಗಿಕ ಪ್ರಚೋದನೆಯನ್ನುಂಟು ಮಾಡುವ ಕುಡಿತವೆಂದೂ ಬರೆದ ಇವನು ಭಾರತೀಯ ಸಂಸ್ಕೃತಿಯ ಬಗಗೆ ತಾನು ಜ್ಞಾನ ಸಂಪಾದನೆ (!) ಮಾಡಿದ ರೀತಿಗೆ ಎರಡು ನಿದರ್ಶನಗಳನ್ನಿತ್ತಿದ್ದಾನೆ: (೧) ತಾನು ಭಾರತದಲ್ಲಿ ಒಮ್ಮೆ 'ಕ್ಯಾಂಪ' ನಲ್ಲಿದ್ದಾಗ, ಕೀಳು ಜಾತಿಯ ಒಬ್ಬ ಚಮ್ಮಾರನು ಕುಡಿತದ ಅಮಲಿನಲ್ಲಿದ್ದನಂತೆ, "ಏಕೆ ಕುಡಿದೆ ?" ಎಂದು ಪ್ರಶ್ನಿಸಿದಾಗ, "ಕುಡಿಯದೇ ಮಕ್ಕಳನ್ನು ಹುಟ್ಟಿಸುವುದು ಹೇಗ"? ಎಂದು ಅವನು ಮರು ಪ್ರಶ್ನೆ ಹಾಕಿದನಂತೆ, (೨) ೧೮೯೦ ರಲ್ಲಿ ಇದೇ ಪಾದ್ರಿಯು ನಮ್ಮ ದೇಶದ 'ನಾಗರಿಕ'ನೊಬ್ಬನನ್ನು ಭೇಟಿಯಾದಂತೆಯೂ, ಅವನು ತಾನು 'ವಿಸ್ಕಿ'ಯನ್ನು ಕುಡಿಯದೇ ಇದ್ದರೆ ಹಿಂದೆಯೇ ಎಂದೋ ಸತ್ತೇ ಹೋಗುತ್ತಿದ್ದುದಾಗಿ ಹೇಳಿದನೆಂದೂ, ಬರೆದು, ಹೀಗೆ ಪ್ರಾಚೀನ ಭಾರತೀಯರ ದಿನಬಳಕೆಯ ಕುಡಿತವೇ ಸೋಮವೆಂದು ಬರೆದಿದ್ದಾನೆ. (ದಿ. ರಿಲಿಜನ್ ಆಫ್ ದಿ ಋಗ್ವೇದ–ಬೈ–ಎಚ್. ಡಿ. ಗ್ರೈಸ್‌ವಾಲ್ಡ್ ಪು. 214, 215 ಇತ್ಯಾದಿ.) ಪಾಶ್ಚಾತ್ಯರ ದುರುದ್ದೇಶಕ್ಕೂ "ವೈದಿಕ ಜ್ಞಾನ ಸಂಪತ್ತಿ"ಗೂ ಈ ಉದಾಹರಣೆಯೇ ಸಾಕು ! ತನ್ನ ಮುನ್ನುಡಿಯಲ್ಲಿ "ಋಗ್ವೇದದ ಸಂಹಿತಯ ಬಗೆಗೆ ತನಗೆ ಸಾಕಷ್ಟು ಜ್ಞಾನವಿಲ್ಲವೆಂದೂ, ಶಬ್ದಗಳ ನಿರ್ವಚನ, ಅರ್ಥಜ್ಞಾನ ಮುಂತಾದ ಸಲಕರಣೆಗಳು ತನಗೆ ಸಾಲವೆಂದೂ'' ಬರೆದುಕೊಂಡ ಇವನು "ಸೋಮ''ದ ಬಗೆಗೆ ತನ್ನ ಗಾಢ ಅಜ್ಞಾನವನ್ನು ಪ್ರದರ್ಶಿಸುವ ಧೈರ್ಯ ಮಾಡಿದುದನ್ನು ಭಾರತೀಯರು ಮೆಚ್ಚತಕ್ಕದ್ದೇ ಸರಿ !

ಸನಾತನ ಋಷಿಗಳು, ಕೇವಲ ಮದ್ಯಪಾನಾಸಕ್ತರೇ ಆಗಿದ್ದರೆ, ಋಗ್ವೇದದ ೯ನೆಯ ಮಂಡಲದ ಎಲ್ಲ ೧೧೪ ಸೂಕ್ತಗಳಲ್ಲೂ ಸೋಮನನ್ನು ಕೊಂಡಾಡಿ, ಸೋಮಪಾನ ಮಾಡಬೇಕೆಂದೆನಿಸಿದಾಗಲೆಲ್ಲ ಇದಕ್ಕೊಂದು ಯಜ್ಞ ಮಾಡುವ ಹವ್ಯಾಸವನ್ನು ಇಟ್ಟುಕೊಳ್ಳುವ ಕಾರಣವಿರಲಿಲ್ಲ. ದಿವಸದಲ್ಲಿ ಮೂರೇ ಬಾರಿ "ಸೋಮಸವನ'' ಮಾಡುವ ಮಿತಿಗೂ ಅರ್ಥವಿಲ್ಲ. ಇಷ್ಟರ ಮೇಲೆ ಸೋಮವು ಕೇವಲ ಒಂದು ಭೌತಿಕ ರಸವಲ್ಲವೆಂದೂ ಮಾತ್ರ, ಅದು

ಯಾವ ದಿವ್ಯ ತತ್ವದ ಸಂಕೇತವೋ ಆ ತತ್ವ ಪಾನವನ್ನು ನಿಜವಾದ ಬ್ರಾಹ್ಮಣರ ಹೊರತು ಇತರರು ಮಾಡಲಿಲ್ಲವೆಂದೂ ವೇದವೇ ಹೇಳುತ್ತದೆ :

"ಸೋಮಂ ಮನ್ಯತೇ ಪಪಿವಾನ್ ಯತ್ ಸಂ ಪಿಂಷಂತಿ ಓಷಧಿಂ ।
ಸೋಮಂ ಯಂ ಬ್ರಹ್ಮಾಣೋ ವಿದುಃ ನತಸ್ಯಾಶ್ನಾತಿ ಕಶ್ಚನ ॥"

(X 85-3)

"ಯಾವನು ಮೈಥುನ ಕಾಮಾರ್ಥಿಯಾಗಿ ಮಾದಕ ದ್ರವ್ಯವೆಂದು ಬಗೆದು (ಸಾಯಣಭಾಷ್ಯ) ರಾಸಾಯನಿಕ ರೀತಿಯಿಂದ ಹಿಂಡುವನೋ, ಪಾನ ಮಾಡುವನೋ, ಅವನು ಇದನ್ನು ಕೇವಲ ಲೌಕಿಕವಾದ ಔಷಧಿ ರಸವೆಂದೇ ಭಾವಿಸುವನು. ಸರಿಯಾದ ಬ್ರಾಹ್ಮಣರು (ಬ್ರಹ್ಮ ತತ್ತ್ವ ತಿಳಿದವರು. ಋತ್ವಿಗ್ಯಜಮಾನಾದಿಗಳು) ಯಾವನನ್ನು ನಿಜವಾದ "ಸೋಮ"ನೆಂದು ತಿಳಿದಿರುವರೋ, ಅವನನ್ನು ವೈದಿಕ ಕರ್ಮ ರಹಸ್ಯವನ್ನರಿಯದವನು "ಪಾನ" ಮಾಡಲು ಸಾಧ್ಯವೇ ಇಲ್ಲ." ಅಂದರೆ ವೇದೋಕ್ತವಾದ "ಸೋಮ"ವು ಕೇವಲ ಒಂದು ಬಳ್ಳಿಯ ರಸವಲ್ಲ ಎಂದು ವೇದವೇ ಘೋಷಿಸಿರುವುದರಿಂದ ಇದನ್ನು ಗ್ರಹಿಸದವನೂ, ವಿರುದ್ಧವಾಗಿ ಬರೆದವನೂ ವೇದ ಜ್ಞಾನವಿಲ್ಲದವನು ಎಂದೇ ಸಿದ್ಧವಾಗುತ್ತದೆ. ಮಹಾಜ್ಞಾನಿಗಳಾಗಿ ಬ್ರಹ್ಮವಾದಿಗಳಾಗಿ, ಬ್ರಹ್ಮಾನುಭವದಲ್ಲಿ ಮುಳುಗಿ ತೇಲಿದ ಕೆಲವೇ ಮಹನೀಯರು ಮಾತ್ರ "ಸೋಮಪಾನ" ಮಾಡಿದುದಾಗಿ ಅದರ ಪರಿಣಾಮವನ್ನು ಹೀಗೆ ವರ್ಣಿಸಿರುತ್ತಾರೆ.

"ಅಪಾಮ ಸೋಮಮಮೃತಾ ಅಭೂಮಾಗನ್ಮ ಜ್ಯೋತಿರವಿದಾಮ
ದೇವಾನ್ ।
ಕಿಂ ನೂನಮಸ್ಮಾನ್ ಕೃಣವದರಾತಿಃ ಕಿ ಮು ಧೂರ್ತಿರಮೃತ
ಮರ್ತ್ಯಸ್ಯ ॥

"ನಾವು ಸೋಮಪಾನ ಮಾಡಿದ್ದೇವೆ, ಮರಣರಹಿತರಾಗಿದ್ದೇವೆ, ಪರಂ ಜ್ಯೋತಿಯನ್ನು ಸೇರಿದ್ದೇವೆ. ದೇವತೆಗಳನ್ನೆಲ್ಲ ತಿಳಿದಿದ್ದೇವೆ. ಶತ್ರುವು ನಮ್ಮನ್ನೇನು ಮಾಡಬಲ್ಲನು ? ಹೇ ಸೋಮನೆ ! ಮರ್ತ್ಯನಾದ ನನ್ನನ್ನು

ಧೂರ್ತನಾದ ಶತ್ರುವು ಇನ್ನೇನು ಮಾಡಬಲ್ಲನು ?" (VIII-48-3 ಋ. ಸಂ.)

ಹೀಗೆಯೇ ಸುಪ್ರಸಿದ್ಧರಾದ ವಾಮದೇವರೆಂಬ ಋಷಿಗಳು– "ಸೋಮ" ಪಾನ ಮಾಡಿದವರಾಗಿ ಹೀಗೆ ಹೇಳುತ್ತಾರೆ. "ವಾಮದೇವನಾದ ನಾನು ಇಂದ್ರಾದಿ ಸಮಸ್ತ ದೇವತೆಗಳ ಉತ್ಪತ್ತಿಯೇ ಮೊದಲಾದ ಸಮಸ್ತ ಮರ್ಮಗಳನ್ನು ಪೂರ್ಣವಾಗಿ ತಿಳಿದೆನು. ಇದಕ್ಕೆ ಮೊದಲು, ಕಬ್ಬಿಣದಂತೆ ಕಠಿಣ ಸ್ವರೂಪವುಳ್ಳ ಅನೇಕ ಶರೀರಗಳು (ಹಿಂದಿನ ಜನ್ಮಗಳಲ್ಲಿ) ನನ್ನ ಬ್ರಹ್ಮಾನುಭವಕ್ಕೆ ಅವಕಾಶ ಕೊಡದಂತೆ ಕಟ್ಟಿ ಹಾಕಿದ್ದವು. ಗರುಡ ರೂಪವನ್ನು ಧರಿಸಿದ ನಾನು ಈಗ ಶರೀರವನ್ನು ಭೇದಿಸಿಕೊಂಡು ವೇಗದಿಂದ ಹೊರ ಬಂದಿದ್ದೇನೆ. (ಈ ಸೋಮಪಾನ ಮಾಡಿದ) ನನ್ನನ್ನು ಕಬ್ಬಿಣದ ರೂಪಗಳಾದ ಶರೀರಗಳು ಗರ್ಭದಲ್ಲಿ ಕಟ್ಟಿ ಹಾಕಿದ್ದರೂ ಸಹ ನಾನು ಅಜ್ಞಾನದಿಂದ, ಮೋಹದಿಂದ, ಆವರಿಸಲ್ಪಡಲಿಲ್ಲ. ಗರ್ಭಸ್ಥವಾದ ದುಃಖವೂ ಸಹ ನನ್ನ ಜ್ಞಾನರೂಪ ಸಾಮರ್ಥ್ಯದಿಂದ ಗೆಲ್ಲಲ್ಪಟ್ಟಿದೆ. ಪರಿಪೂರ್ಣನೂ, ಜಗತ್ಪ್ರೇರಕನೂ, ಆದ ಪರಮಾತ್ಮನು (ಸೋಮರೂಪಿಯಾಗಿ) ನನ್ನ ಗರ್ಭಸ್ಥ ಶತ್ರುಗಳನ್ನು ನಾಶಮಾಡಿ ನನ್ನನ್ನು ಗರ್ಭಸ್ಥವಾಯುಗಳಿಂದ ದಾಟಿಸಿದನು." ಹೀಗೆ ಮಾತನಾಡುವ ವಾಮದೇವರು ಮದ್ಯಪಾನದಿಂದ ಭ್ರಮಿಸಿದ ಹುಚ್ಚರೋ? ಅಥವಾ ಬ್ರಹ್ಮಜ್ಞಾನಾಸ್ವಾದಿಗಳಾದ ಮಹಾಮಹಿಮರೋ ಎಂಬುದು ಭಾರತದಲ್ಲಿ ಸಣ್ಣ ಹುಡುಗರಿಗೂ ತಿಳಿಯುವ ವಿಷಯ. ಇಷ್ಟರ ಮೇಲೆ ಅವರ ಇನ್ನೊಂದು ಮಾತು, ತಮ್ಮನ್ನು ಪೂರ್ಣವಾಗಿ ಪರಮಾತ್ಮನಿಗೆ ಅರ್ಪಿಸಿಕೊಂಡು ತಾವೇ ಶರೀರವಾಗಿ ಪರಮಾತ್ಮನೇ ಅವರ ಅಂತರ್ಯಾಮಿಯಾಗಿ ಮಾತನಾಡುವಂತೆ. ವಾಮದೇವರ ಸಂಪೂರ್ಣ ಶರಣಾಗತ ಮನೋಭಾವವನ್ನೂ ಪರಮಾತ್ಮನ ಸರ್ವ ಶರೀರಿತ್ವವನ್ನೂ ತೋರಿಸುವಂತೆ ಇದೆ. (ಈ ವಿಷಯವನ್ನು ಬ್ರಹ್ಮಸೂತ್ರದ ಇಂದ್ರಪ್ರಾಣಾಧಿಕರಣದಲ್ಲಿ, "ಶಾಸ್ತ್ರದೃಷ್ಟ್ಯಾತು ಉಪದೇಶಃ ವಾಮದೇವವತ್" ಎಂಬ ಸೂತ್ರದಲ್ಲಿ ವೇದವ್ಯಾಸರು ಹೀಗೆಯೇ ವಿವರಿಸಿರುತ್ತಾರೆ). "ನಾನೇ ಹಿಂದೆ ಮನುವಾಗಿದ್ದವನು. ಸೂರ್ಯನೂ, ಕಕ್ಷೀವಾನ್ ಎಂಬ ಋಷಿಯೂ, ಆರ್ಜುನೇಯನಾದ ಕುತ್ಸನೂ,

ಕ್ರಾಂತ ದರ್ಶಿಯಾದ ಉಷನಸ್ ಎಂಬ ಋಷಿಯೂ ಸಹ; ಹೇ ಮಾನವರೇ (ಇಂತಹ ವಿಚಿತ್ರವಾದ) ನನ್ನನ್ನು ತಿಳಿಯಿರಿ. ಮನುವಿಗೆ ಪೃಥ್ವಿಯನ್ನು ಕೊಟ್ಟವನೂ ನಾನು; ಯಜ್ಞಶೀಲನಾದ ಮಾನವನಿಗೆ ಮಳೆಯನ್ನು ಸುರಿಸುವವನೂ ನಾನೇ; ಸಕಲ ನದಿಗಳನ್ನೂ ಪ್ರವರ್ತಿಸಿದವನೂ ನಾನೇ; ನನ್ನ ಸಂಕಲ್ಪವನ್ನೇ ಸಕಲ ದೇವತೆಗಳೂ ಪಾಲಿಸುತ್ತಾರೆ. ನಾನೇ ಇಂದ್ರನಾಗಿ ದಿವೋದಾಸನೆಂಬ ರಾಜ ಋಷಿಗೆ ರಕ್ಷೆಯಾಗಿ ನಿಂತಾಗ ನನ್ನ ಬಲದಿಂದ ಅವನು ಶಂಬರಾಸುರನ ನೂರು ಪಟ್ಟಣಗಳಲ್ಲಿ ತೊಂಭತ್ತೊಂಭತ್ತನ್ನೂ ನಾಶಮಾಡಿ ನೂರನೇದರಲ್ಲಿ ತಾನೇ ವಾಸ ಮಾಡುವಂತಾಯಿತು. ಹೀಗೆ (ನನಗೂ ಮತ್ತು ದಿವೋದಾಸನಿಗೂ ಈ ಶಕ್ತಿಯನ್ನು ಕೊಟ್ಟ) ಸೋಮರೂಪವಾದ ಯಾವ ಈ ದೇವತೆಗಳ ಅನ್ನವನ್ನು ಗರುಡ ಪಕ್ಷಿಯು "ಸುಪರ್ಣ" ರೂಪವಾಗಿ ಬ್ರಹ್ಮಲೋಕದಿಂದ ತಂದಿತೋ ಆ ಕಾರಣಕ್ಕಾಗಿ ಅದು ಇನ್ನು ಮುಂದೆ ಶ್ರೇಷ್ಠವಾದುದಾಗಲಿ" (ಋ. ಸಂ. IV-26-27 ) ಹಾಗಾದರೆ ಯಾರು ಈ "ಸೋಮ"? ಮುಂದಿನ ವಿವರಗಳನ್ನು ನೋಡೋಣ.

"ಗರುಡ"ನು ಸೌಪರ್ಣರೂಪದಿಂದ ಹೋಗಿ "ತ್ರಿವಿಕ್ರಮನ ತೃತೀಯ ಪಾದಸ್ಥಾನ"ದಲ್ಲಿ ಇದ್ದ "ಸೋಮನನ್ನು" ("ಮಧು"ವನ್ನು) ತಂದ ಕಥೆ ವೇದದಲ್ಲಿ ಅನೇಕ ಕಡೆ ಉಕ್ತವಾಗಿ ಪ್ರಸಿದ್ಧವಾದ ಸಾಂಕೇತಿಕ ಅರ್ಥವನ್ನು ಪಡೆದಿರುತ್ತದೆ. ಮುಖ್ಯವಾಗಿ ಋಗ್ವೇದದ ಐತರೇಯ ಬ್ರಾಹ್ಮಣದ ೧೩ನೇ ಅಧ್ಯಾಯದಲ್ಲಿ ಬರುವ ಇದರ ವಿಸ್ತೃತ ಕಥೆಯನ್ನು ಹೀಗೆ ಸಂಗ್ರಹಿಸಬಹುದು. ಸೋಮನು ಹಿಂದೊಂದು ಕಾಲದಲ್ಲಿ ಪರಲೋಕದಲ್ಲಿ ಅಷ್ಟೇ ಇದ್ದನು. ಆಗ ಯಜ್ಞ ಶೀಲರಾದ ದೇವತೆಗಳೂ. ಋಷಿಗಳೂ, ಬಹಳ ಆಲೋಚಿಸಿ ಈ ಸೋಮ ರಾಜನನ್ನು ಹೇಗಾದರೂ ಕೆಳಗಿನ ಲೋಕಕ್ಕೆ ತರಲು ಚಿಂತಿಸಿ, ಹೀಗೆ ನಿರ್ಧರಿಸಿದರು— ಛಂದಸ್ಸುಗಳು, ಅವನನ್ನು ತರ ಬಲ್ಲವು. (ಛಂದಸ್ಸೆಂದರೆ, ವೇದಾರ್ಥಗಳನ್ನು ಮರೆಸಿ, ಮರೆಸಿ ಹೇಳುವ ಒಗಟಿಯ ಭಾಷೆಯಾದ ವೇದ ಮಂತ್ರಗಳು. 'ಛದ್'— ಎಂದರೆ 'ಮುಚ್ಚು'ವುದು ಎಂದರ್ಥ. ವೇದವಾಕ್ಕಿಗೆ ಪರಬ್ರಹ್ಮ ತತ್ವವನ್ನು ಈ ಲೋಕಕ್ಕೆ ಹೊರಗೆಡಹುವ ಸಾಮರ್ಥ್ಯವಿರುವದರಿಂದ ಅವುಗಳನ್ನು ಈ ಕೆಲಸಕ್ಕಾಗಿ ಉಪಯೋ

ಗಿಸಲು ದೇವತೆಗಳೂ ಋಷಿಗಳೂ ನಿಶ್ಚಯಿಸಿದರೆಂಬ ಮಾತಿನಲ್ಲಿ ಸಾಂಕೇತಿಕ ಅರ್ಥವು ಸ್ಪಷ್ಟವಾಗಿಯೇ ಇದೆ. ಆದ್ದರಿಂದ ಅವುಗಳನ್ನು ಕಳುಹಿಸೋಣ ಎಂದು ನಿಶ್ಚಯಿಸಿ ಛಂದಸ್ಸುಗಳನ್ನು ಪ್ರಾರ್ಥಿಸುತ್ತಾರೆ. ಆಗ ಛಂದಸ್ಸುಗಳು ಆಗಲೆಂದು ಒಪ್ಪಿ ಯೋಚಿಸಿದವು, "ಪರಮ ಪದ"ವು ಬಹಳ ಉನ್ನತ ವಾದದ್ದರಿಂದ ಉತ್ತಮವಾದ ರೆಕ್ಕೆಗಳುಳ್ಳ ಮತ್ತು ಅತ್ಯಂತ ಸಾಮರ್ಥ್ಯ ಶಾಲಿಗಳಾದ ಕೆಲವೇ ಛಂದಸ್ಸುಗಳನ್ನು ತಮ್ಮ ಪರವಾಗಿ ಆರಿಸಿ ಪಕ್ಷಿರೂಪ ದಿಂದ ಮೇಲಕ್ಕೆ ಕಳುಹಿಸಿದವು. ಹೀಗೆ ಆರಿಸಲ್ಪಟ್ಟ ಛಂದಸ್ಸುಗಳು ಮೂರೇ_ ಜಗತೀ, ತ್ರಿಷ್ಟುಪ್, ಮತ್ತು ಗಾಯತ್ರಿ. ಮೊದಲಿಗೆ ಜಗತೀ ಛಂದಸ್ಸು "ಸೋಮಾಹರಣ"ಕ್ಕೆ ಪ್ರಯತ್ನಿಸಿತು ಆಗ ಪ್ರತಿ ಛಂದಸ್ಸಿನ ಪಾದಗಳಿಗೂ ನಾಲ್ಕೇ ಅಕ್ಷರಗಳಿದ್ದವು. ಹೀಗೆ, ನಾಲ್ಕು ಅಕ್ಷರದೊಡನೆ ಹೊರಟ ಜಗತೀ ಛಂದಸ್ಸು ಅರ್ಧದಾರಿಯನ್ನು ಸೇರುವಷ್ಟರಲ್ಲಿಯೇ ಬಳಲಿ ಮುಂದೆ ಹೋಗ ಲಾರದೆ ಪ್ರಯಾಸದಿಂದ ಹಿಂದಿರುಗಬೇಕಾಯಿತು. ಈ ಸಾಹಸದಲ್ಲಿ ತನ್ನ ಅಕ್ಷರಗಳಲ್ಲಿ ಮೂರನ್ನು ಕಳೆದುಕೊಂಡು ಕೇವಲ ಒಂದು ಅಕ್ಷರದಿಂದ ಹಿಂದಿರುಗುವಾಗ ತಪಸ್ಸೆಂಬ ಧನವನ್ನೂ, ಪಶುಗಳನ್ನೂ ಮಟ್ಟಿಗೆ ತಂದಿತು. ಅದಕ್ಕೇ ಜಾಗತಾಹಿ ಪಶವಃ ಎಂಬಂತೆ, ಪಶುಸಮೃದ್ಧಿಯನ್ನಷ್ಟೇ ಉಂಟು ಮಾಡುವ ಶಕ್ತಿಯನ್ನು ಅದು ಪಡೆಯಿತು.

ನಂತರ ಸೋಮಾಹರಣಕ್ಕೆ ಪ್ರಯತ್ನಿಸಿದ ತ್ರಿಷ್ಟುಪ್ ಛಂದಸ್ಸು ಸಹ ಅರ್ಧಕ್ಕಿಂತ ಹೆಚ್ಚು ದೂರವನ್ನು ಸಾಗಿದರೂ ಅದಕ್ಕೂ ಆಯಾಸವಾಗಿ ತನ್ನ ನಾಲ್ಕು ಅಕ್ಷರಗಳಲ್ಲಿ ಒಂದನ್ನು ಕಳೆದು ಕೊಂಡು ಉಳಿದ ಮೂರರೊಡನೆ ಹಿಂತಿರುಗುವಾಗ, ಯಜ್ಞ ಸಾಮಗ್ರಿಯಾದ ದಕ್ಷಿಣೆಯನ್ನಷ್ಟೇ ತಂದಿತು. ಆಗ ದೇವತೆಗಳು ಗಾಯತ್ರಿಯನ್ನು ಕುರಿತು "ಸೋಮರಾಜ"ನನ್ನು ತರು ವಂತೆ ಪ್ರಾರ್ಥಿಸಿದರು ಮತ್ತು "ಪ್ರ" "ಚ" ಎಂಬ ಸ್ವಸ್ತ್ಯಯನ ಮಂತ್ರ ಗಳನ್ನು ಪಠಿಸಿ ಅದರ ಪ್ರಯಾಣವು ನಿರ್ವಿಘ್ನವಾಗುವಂತೆ ಆಶೀರ್ವದಿಸಿದರು. ಆಗ ಗಾಯತ್ರಿಯು ತೊಂದರೆಯಿಲ್ಲದೆ ಸೋಮನ ಸ್ಥಾನವನ್ನು ಸೇರಿ ತನ್ನ ಪಾದಗಳಿಂದಲೂ, ಮುಖದಿಂದಲೂ ಸೋಮನನ್ನು ಎತ್ತಿಕೊಂಡು, ಮತ್ತು ಹಿಂದೆ ಎರಡು ಛಂದಸ್ಸುಗಳು ಅಲ್ಲಿ ಬಿಟ್ಟು ಬಂದಿದ್ದ ನಾಲ್ಕು ಅಕ್ಷರ ಗಳನ್ನು ತಗೆದುಕೊಂಡು "ಸೋಮಪಾಲ"ರನ್ನು ಹೆದರಿಸಿ ಹಿಂತಿರುಗಿತು.

ಆಗ ಸೋಮಪಾಲರಾದ ಏಳು ದೇವತೆಗಳಲ್ಲಿ ಕೃಶಾನುವು ಅದರ ಎಡಗಡೆ ಪಾದದ ಉಗುರನ್ನು ಕತ್ತರಿಸಿ ಹಾಕಿದನು. ಅದು ಮುಳ್ಳು ಹಂದಿಯಾಗಿ ಅದರ ಮೇಲಿನ ಮುಳ್ಳಾಯಿತು. ಆಗ ಸುರಿದ ರಕ್ತವು ಬಂಜೆಯು ಹಸುವಾಗಿಯೂ, ಎಲುಬು ಗೂಡು ಸರ್ಪವಾಗಿಯೂ ಆದವು. ಗಾಯತ್ರಿಯು ಬಲಪಾದದಿಂದ ಹಿಡಿದ ಸೋಮ ಭಾಗವೇ ಪ್ರಾತಃಸವನವಾಯಿತು ಇದು ಸವನಗಳಲ್ಲೆಲ್ಲ ಸಮೃದ್ಧವಾದುದು. ಈ ತತ್ವವನ್ನು ತಿಳಿದವನು ಯಜ್ಞಕರ್ತರಲ್ಲಿ ಶ್ರೇಷ್ಠನಾಗುವನು. ಗಾಯತ್ರಿಯ ಎಡಪಾದದಿಂದ ಹಿಡಿಯಲ್ಪಟ್ಟ ಸೋಮಭಾಗವು, ಮಾಧ್ಯಂದಿನಸವನವಾಯಿತು, ಆದರೆ ಅದು ಜಾರಿದುದರಿಂದ ಪ್ರಾತಃ ಸವನದಂತೆ ಶ್ರೇಷ್ಠವಾಗಲಿಲ್ಲ. ಗಾಯತ್ರಿಯು ಮುಖದಿಂದ ಹಿಡಿದ ಸೋಮಭಾಗವು ತೃತೀಯ ಸವನವಾಯಿತು. ಹಾರುತ್ತಿರುವಾಗಲೇ ಗರುಡ ರೂಪವಾದ ಗಾಯತ್ರಿಯು ಇದನ್ನು ಪಾನ ಮಾಡಿದ್ದರಿಂದ ಇದು ಉಳಿದೆರಡು ಸವನಗಳ ಶಕ್ತಿಯನ್ನು ಪಡೆಯಲಿಲ್ಲ.

ಗಾಯತ್ರಿಯು ಹಿಂದಿರುಗಿದ ಮೇಲೆ ತ್ರಿಷ್ಟುಪ ಮತ್ತು ಜಗತೀ ಛಂದಸ್ಸುಗಳು ತಮ್ಮ ಕಳೆದುಹೋದ ಅಕ್ಷರಗಳನ್ನು ಹಿಂದಿರುಗಿಸುವಂತೆ ಅದನ್ನು ಪ್ರಾರ್ಥಿಸಿದುವು. ಗಾಯತ್ರಿಯು ಒಪ್ಪದೇ ತಾನು ತಂದದ್ದು ತನ್ನದೇ ಎಂದು ವಾದಿಸಿತು. ಈ ದೂರನ್ನು ಕೇಳಿದ ದೇವತೆಗಳು ಗಾಯತ್ರಿಯನ್ನೇ ಬೆಂಬಲಿಸಿದರು. ಹೀಗೆ ಗಾಯತ್ರಿಯು ಅಷ್ಟಾಕ್ಷರ ಆತ್ಮಕವಾಗಿಯೂ ತ್ರಿಷ್ಟುಪವು ತ್ರ್ಯಕ್ಷರಾತ್ಮಕವಾಗಿಯೂ ಜಗತಿಯು ಏಕಾಕ್ಷರಾತ್ಮಕವಾಗಿಯೂ ಆದವು. ಕೊನೆಯಲ್ಲಿ ಗಾಯತ್ರೀ ಸಮೇತವಾದ ಉಳಿದೆರಡು ಛಂದಸ್ಸುಗಳು ಶಕ್ತಿಯನ್ನು ಪಡೆದು, ಸವನಗಳಲ್ಲಿ ಭಾಗವಹಿಸುವಂತೆ ಸಮರ್ಥವಾದವು. ಈ ತತ್ವವನ್ನು ತಿಳಿದವನು ಶಕ್ತಿ ವೈಭವಗಳನ್ನು ಪಡೆದು, ಛಂದೋನುಗ್ರಹದಿಂದ ಸಕಲಸಂಪತ್ತನ್ನೂ ಪಡೆಯುವನು."

ಇದೇ ಕಥೆಯನ್ನು ತೈತ್ತಿರೀಯ ಸಂಹಿತೆಯ ಆರನೇ ಕಾಂಡದಲ್ಲಿ ಹೀಗೆ ರೂಪಾಂತರದಿಂದ ವರ್ಣಿಸಿದೆ. ಕಶ್ಯಪ ಪತ್ನಿಯರಾದ ಕದ್ರು ಮತ್ತು ಸುಪರ್ಣೆ (ವಿನತೆ) ಯರಲ್ಲಿ ತಮ್ಮ ರೂಪದ ಆಧಿಕ್ಯದ ವಿಷಯದಲ್ಲಿ ಸ್ಪರ್ಧೆಯಾಯಿತು. (ಇಹಲೋಕ-ಪರಲೋಕ ಶಕ್ತಿ-ಪ್ರವೃತ್ತಿಗಳಿಗೆ ನಡೆದ ಸಾಂಕೇ

ತಿಕ ಸ್ಪರ್ಧೆ ಇದು. ಇದು ಎಂದೆಂದೂ ನಡೆಯುತ್ತಿರುವ ವ್ಯಾಪಾರವೇ. ವೇದವು ಇದನ್ನು ಎಷ್ಟು ಸುಂದರವಾಗಿ ಮಾರ್ಮಿಕವಾಗಿ ನಿರೂಪಿಸಿದೆ ಯೆಂಬುದನ್ನು ಇಲ್ಲಿ ಕಾಣಬಹುದು. ಈ ಪೃಥ್ವಿಯೇ ಕದ್ರುವು. ಅಂತ ರಿಕ್ಷವೇ ಸುಪರ್ಣೆ. ಛಂದಸ್ಸುಗಳೇ ಸುಪರ್ಣೆಯ ಮಕ್ಕಳು ಎಂದು ವೇದವೇ ಹೇಳಿದೆ.) ಸ್ಪರ್ಧೆಯಲ್ಲಿ ಸುಪರ್ಣೆ ಸೋತಳು. ಕದ್ರುವು ಅವಳನ್ನು ತನ್ನ ಆಧೀನದಲ್ಲಿ ಸೇವಕಳನ್ನಾಗಿ ಮಾಡಿಕೊಂಡಳು. ಆಗ ಅವಳನ್ನು ಸ್ವತಂತ್ರ ಮಾಡಬೇಕಾದರೆ ಕದ್ರುವು ಹಾಕಿದ ನಿಬಂಧನೆ ಹೀಗಿತ್ತು. "ಸ್ವರ್ಗ"ದ ಮೂರನೇ ಭಾಗದಲ್ಲಿ ಇರುವ ಸೋಮನನ್ನು ತಂದುಕೊಟ್ಟರೆ, ಬಿಡುಗಡೆ ಮಾಡುವುದಾಗಿ ಹೇಳಿದಳು. ಆಗ ಸುಪರ್ಣೆಯ ಸುಪುತ್ರರಾದ "ಛಂದಸ್ಸು" ಗಳು ತಾಯಿಯ ಕಷ್ಟವನ್ನು ಪರಿಹರಿಸಲು ಚಿಂತಿಸಿದವು. ಮೊದಲು ಜಗತೀ ಛಂದಸ್ಸು, ನಂತರ ತ್ರಿಷ್ಟುಪ್ ಛಂದಸ್ಸು ಪ್ರಯತ್ನಿಸಿ ನಿಷ್ಫಲವಾದವು. (ಇವುಗಳ ಅಕ್ಷರ ಸಂಖ್ಯೆ ಹಿಂದೆ ಹೇಳಿದ್ದಕ್ಕಿಂತ ಇಲ್ಲಿ ಭಿನ್ನವಾಗಿದೆ) ಕೊನೆ ಯಲ್ಲಿ ನಾಲ್ಕಕ್ಷರದ ಗಾಯತ್ರಿಯು ಜ್ಯೋತಿಃ ಸ್ವರೂಪವಾದ ಒಂದು "ಅಜ" ದೊಡನೆ ಹಾರಿತು. ಆ "ಅಜ" ವು ಸೋಮಲಾಭದಲ್ಲಿ ಗಾಯತ್ರಿಗೆ ಸಹಾಯ ಮಾಡಿತು. ಗಾಯತ್ರಿಯು ಸೋಮವನ್ನೂ ಮತ್ತು ಉಳಿದ ಛಂದಸ್ಸುಗಳು ಬಿಟ್ಟು ಬಂದಿದ್ದ ಅಕ್ಷರಗಳನ್ನು ಹಿಂದಕ್ಕೆ ತಂದಿತು. ಹೀಗೆ ಛಂದಸ್ಸುಗಳಲ್ಲೆಲ್ಲ ಅತ್ಯಂತ ಚಿಕ್ಕದಾದ ಗಾಯತ್ರಿಯು ಯಜ್ಞಕ್ಕೆ ಮುಖ್ಯಾಹುತಿಯಾದ ಸೋಮವನ್ನು ತಂದದ್ದರಿಂದ ಸಕಲ ಛಂದಸ್ಸುಗಳಲ್ಲಿ ಪ್ರಥಮ ಸ್ಥಾನವನ್ನು ಪಡೆಯಿತೆಂಬುದು ಬ್ರಹ್ಮವಾದಿಗಳ ಮತ. ಪ್ರಸಿದ್ಧವಾದ ಋಗ್ವೇದದ ಬಹುಭಾಗವು ಗಾಯತ್ರಿ, ತ್ರಿಷ್ಟುಪ್, ಜಗತೀ ಛಂದಸ್ಸುಗಳಲ್ಲೇ ಇದೆ. ಇವಲ್ಲದೆ ಉಳಿದ ಹದಿಮೂರು ಛಂದಸ್ಸುಗಳೂ ಉಂಟು. ಅವುಗಳಲ್ಲಿ ಗಾಯತ್ರಿಗೇ ಅಗ್ರಸ್ಥಾನ. (ಸುಮಾರು ೨೫೦೦ ಸಂಖ್ಯೆಯಷ್ಟು ಋಕ್ಕುಗಳು ಈ ಛಂದಸ್ಸಿ ನಲ್ಲಿಯೇ ಇವೆ.) ಈ ಕಥೆ ಪುರಾಣಗಳಲ್ಲಿಯೂ ಪ್ರಸಿದ್ಧವಾಗಿದ್ದು ಗರುಡ ಮತ್ತು ಸರ್ಪಗಳ ಸಾಂಕೇತಿಕ ವೈರ ಕಥನವನ್ನು ಒಳಗೊಂಡಿದೆ. ಬ್ರಹ್ಮಾನು ಭೂತಿಯ ದಿವ್ಯಪ್ರಜ್ಞೆಗೂ ಕೇವಲ ಭೌತಿಕ ಐಹಿಕ ಪ್ರಜ್ಞೆಗೂ ಇರುವ ಅನಿವಾರ್ಯ ವೈರ ಕಥನದ ಈ ಸಾಂಕೇತಿಕ ಕಥೆಯಲ್ಲಿ ಎರಡು ಹಿಂದಿನ ಜನಾಂಗಗಳ ಕಲಹದ ಅರ್ಥವಷ್ಟೇ ಇದೆಯೆಂದು ವಾದಿಸುವುದು ಹಾಸ್ಯಾಸ್ಪದ ವೆಂಬುದನ್ನು ವೇದಾಭಿಜ್ಞರು ಮನಗಾಣುವುದು ಅವಶ್ಯವಾಗಿದೆ.

ಹೀಗೆ ಗಾಯತ್ರಿಯನ್ನೇ ವೇದದಲ್ಲಿಯೂ ಮತ್ತು ಪಾಂಚರಾತ್ರ ಶಾಸ್ತ್ರ ದಲ್ಲಿಯೂ ಗರುಡನೆಂಬುದಾಗಿ ಸಂಕೇತಿಸಿ ಗರುಡಾರೂಢನಾದ ನಾರಾಯಣನನ್ನೇ ಗಾಯತ್ರೀ ಪ್ರತಿಪಾದ್ಯ ವಸ್ತುವಾದ ಮತ್ತು ತತ್ಸಮೇತವಾದ ಪರಬ್ರಹ್ಮ ವಸ್ತುವೆಂದು ಸಂಕೇತಿಸಿರುವುದನ್ನು ಇಲ್ಲಿ ಗಮನಿಸಬೇಕು. ಹೀಗೆ ವೇದ ಶಾಸ್ತ್ರಾಗಮ ಪುರಾಣಗಳೆಲ್ಲವೂ ಒಂದೇ ಅರ್ಥವನ್ನು ಕೊಡುವ, ಆದರೂ ಬೇರೆ ಬೇರೆ ಭಾಷೆಗಳಲ್ಲಿ, ಸಂಕೇತಗಳಲ್ಲಿ ಒಂದೇ ತತ್ವವನ್ನು ಪ್ರತಿಬಿಂಬಿಸುವ, ಸನಾತನ ಗ್ರಂಥಗಳೆಂದು ಆಸ್ತಿಕರು ಮನಗಾಣಬೇಕು, ಗರುಡನು ಅಮೃತ ವನ್ನು ತಂದ ಕಥೆಗೆ ಗಾಯತ್ರಿಯು ಸೋಮವನ್ನು ತಂದ ಅರ್ಥ ಉಂಟಾಗಿ ಸೋಮನೆಂದರೆ ಬ್ರಹ್ಮಾನುಭವದ ಸಂಕೇತವೆಂದೂ, ಸೋಮಲತೆಗೆ ಶರೀರವೆಂದೂ, ಸೋಮನನ್ನು ಹಿಂಡುವ ಒರಳು ಕಲ್ಲಿಗೆ ಸಂಸಾರದ ಕಷ್ಟಗಳೆಂದೂ ಅರ್ಥ ಉಂಟಾಗುವದು.

ಉಪನಿಷತ್ತಿನಲ್ಲಿ ಬ್ರಹ್ಮ ವಸ್ತುವನ್ನು "ರಸ" ಎಂಬುದಾಗಿ ವರ್ಣಿಸಿ ರಸಾಸ್ವಾದಿಯಾದವನು ಆನಂದಿಯಾಗುತ್ತಾನೆ ಎಂದು ವರ್ಣಿಸಿರುವುದೂ ಇದೇ ಅರ್ಥದಲ್ಲಿ ಎಂದ ಮೇಲೆ (ರಸೋ ವೈ ಸಃ ರಸಗ್ಂ ಹ್ಯೇವಾಯಂ ಲಬ್ಧ್ವಾऽऽ ನಂದೀ ಭವತಿ), ಈಗ ವೇದದಲ್ಲಿ ಸೋಮನಿಗೂ, ಗರುಡನಿಗೂ ಅಥವಾ ಗಾಯತ್ರಿಗೂ, ಎಷ್ಟು ಪ್ರಾಮುಖ್ಯ ಇದೆ ಎಂದು ಸ್ಪಷ್ಟವಾಗಿ ತಿಳಿಯುವದು. ಪರಮಾತ್ಮನು ಆನಂದಮಯನೆಂದರೆ ವೇದದ ಭಾಷೆಯಲ್ಲಿ "ಸೋಮಪಾನ ಮಾಡಿದ ಇಂದ್ರ"ನೆಂದು ಹೇಳಿದ ಹಾಗಾಯಿತು. ವೇದದ ಹೃದಯ ದಲ್ಲಿ ಇರುವ ಈ ಸೋಮತತ್ವವೂ ಸರ್ವಕಾಲಗಳಲ್ಲಿಯೂ ಬ್ರಾಹ್ಮಣರಿಂದ ಗಾಯತ್ರೀ ರೂಪದಲ್ಲಿ ತ್ರಿಕಾಲಗಳಲ್ಲಿಯೂ ಪಾನಮಾಡಲ್ಪಡುತ್ತಿದೆ ಎಂದರೆ ಆಶ್ಚರ್ಯವಲ್ಲ. ಈ ಕಾರಣಕ್ಕಾಗಿಯೇ ಸೋಮನನ್ನು "ಪವಮಾನ", ಶುದ್ಧ ಮಾಡುವವನು. ಎಂದು ಕರೆಯಲಾಗಿದೆ. ಬ್ರಹ್ಮಾನಂದಕ್ಕೆ ಸಂಕೇತವಾದ ಈ ದೇವತೆಗೆ ಬ್ರಾಹ್ಮಣರು ಮಾಡುವ ಒಂದು ಪ್ರಾರ್ಥನೆಯನ್ನು ಇಲ್ಲಿ ಹೀಗೆ ಸಂಗ್ರಹಿಸಬಹುದು. "ಎಲೈ ಪವಮಾನ ಸೋಮನೇ ! ಯಾವ ದಿವ್ಯಲೋಕ ದಲ್ಲಿ ಬೆಳಕು ಶಾಶ್ವತವಾಗಿದೆಯೋ, ಎಲ್ಲಿ ಸೂರ್ಯನ ತೇಜಸ್ಸು ಸ್ಥಾಪಿತವಾಗಿ ದೆಯೋ. ಅಂತಹ ಅಮೃತವೂ ಕ್ಷಯರಹಿತವೂ ಆದ ಲೋಕದಲ್ಲಿ ನನ್ನನ್ನು ಪ್ರತಿಷ್ಠಿಸು. ಎಲ್ಲಿ ವಿವಸ್ವಂತ ಪುತ್ರನು ಪ್ರಭುವೋ, ಮತ್ತು ಗಂಗಾದಿ ಸಕಲ

ಪರಿಶುದ್ಧ ಉದಕಗಳು ಇವೆಯೋ ಅಲ್ಲಿ ನಾನು ಅಮರನಾಗಿ ಬಾಳುವಂತಾಗಲಿ. ಪರಮಾತ್ಮನ ಮೂರು ಪಾದಗಳ ಸಂಚಾರ ಪ್ರದೇಶಗಳಲ್ಲಿ ಶ್ರೇಷ್ಠವಾದ ತೃತೀಯಚರಣ ಸ್ಪಷ್ಟವಾದ ಯಾವ ದೇವಲೋಕದಲ್ಲಿ ಸೂರ್ಯನ ಬೆಳಕು ಸ್ವತಂತ್ರವಾಗಿ ಚರಿಸುವುದೋ, ಎಲ್ಲಿ ಸಕಲ ಲೋಕಗಳೂ ತೇಜೋವಂತವಾಗಿ ಪ್ರತಿಷ್ಠಿತವಾಗಿವೆಯೋ ಅಲ್ಲಿ ನನ್ನನ್ನು ಮರಣರಹಿತನನ್ನಾಗಿ ಮಾಡು. ಎಲ್ಲಿ ಸಕಲ ಕಾಮಗಳೂ ಧ್ಯೇಯಗಳೂ ಪರಿಪೂರ್ಣವಾಗಿ ಕರ್ಮಪ್ರೇರಕನಾದ ಆದಿತ್ಯನ ಪವಿತ್ರಸ್ಥಾನವಿದೆಯೋ, ಎಲ್ಲಿ ಅನ್ನವೂ ತೃಪ್ತಿಯೂ ಇವೆಯೋ ಅಲ್ಲಿ ನನ್ನನ್ನು ಸ್ಥಾಪಿಸು. ಎಲ್ಲಿ ನಿರತಿಶಯ ಬ್ರಹ್ಮಾನಂದವೂ, ಹರ್ಷವೂ, ಸುಖ-ಸಾಧನವೂ, ಸುಖಾನುಭವವೂ, ಅಪೇಕ್ಷಾಪೂರ್ತಿಯೂ ಇರುವುವೋ ಅಲ್ಲಿ ನನ್ನನ್ನು ಸ್ಥಾಪಿಸು". ( IX-11·3- ) ಇಂತಹ ಪ್ರಾರ್ಥನೆಯ ಹಿನ್ನೆಲೆಯಲ್ಲಿ-ರುವ "ಸೋಮ" ಸ್ವರೂಪವನ್ನು ಯಥಾವತ್ತಾಗಿ ಗ್ರಹಿಸಬೇಕು. ಈ "ಸೋಮ"ವು ತ್ರಿವಿಕ್ರಮನ ಮೂರನೇ ಪಾದದಲ್ಲಿ ಹುಟ್ಟಿತೆಂದೂ, ಪುರಾಣಗಳಲ್ಲಿ ಅದು ಶಿವನ ತಲೆಯಲ್ಲಿ ಆಭರಣವಾಗಿ ಅವನನ್ನು "ಸೋಮಶೇಖರ" ನನ್ನಾಗಿ ಮಾಡಿತೆಂದೂ ವರ್ಣಿಸಿರುವುದು ಗಮನೀಯ. ಸೋಮನು ವಿಶೇಷವಾಗಿ ಬ್ರಾಹ್ಮಣರಿಗೆ ರಾಜನೆಂದೂ ವರ್ಣಿಸಲ್ಪಟ್ಟಿರುವುದನ್ನು ಕಾಣಬೇಕು. ಹೀಗೆ "ಸೋಮತತ್ತ್ವ"ವು ವಿಖ್ಯಾತವಾದ ಆಧ್ಯಾತ್ಮಿಕ ಅರ್ಥವನ್ನು ಹೊಂದಿ ಪ್ರಸಿದ್ಧವಾಗಿದೆ.



ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

## ೬. ನಾರದ-ಸನತ್ಕುಮಾರ ಸಂವಾದ

ಛಾಂದೋಗ್ಯ ಉಪನಿಷತ್ತಿನ ಕೊನೆಯಲ್ಲಿ ಈ ಕಥೆ ಬರುತ್ತದೆ :—

ಒಮ್ಮೆ ದೇವರ್ಷಿ ನಾರದರು ಮನಶ್ಶಾಂತಿ ಇಲ್ಲದೆ ಮಹಾಬ್ರಹ್ಮಜ್ಞಾನಿಯಾದ ಸನತ್ಕುಮಾರರನ್ನು ಸಮೀಪಿಸಿ, ನಮಸ್ಕರಿಸಿ ವಿನಯಾನ್ವಿತರಾಗಿ ಪ್ರಾರ್ಥಿಸಿದರು : "ಭಗವನ್, ನನಗೆ (ಶಾಂತಿಗೆ ಕಾರಣವಾದ ಬ್ರಹ್ಮವಿದ್ಯೆಯನ್ನು) ಅನುಗ್ರಹಿಸಿ". ಆಗ ಸನತ್ಕುಮಾರರು ಹೇಳಿದರು, "ಈಗಾಗಲೇ ನೀನು ಏನನ್ನು ತಿಳಿದಿರುವೆಯೋ ಹೇಳು, ಮುಂದಿನದನ್ನು ಉಪದೇಶಿಸುತ್ತೇನೆ." ನಾರದರು ತಾವು ಕಲಿತಿದ್ದ ವಿದ್ಯೆಗಳ ಹೆಸರನ್ನೆಲ್ಲ ಹೇಳಿದರು. "ಭಗವನ್, ಋಗ್ವೇದವನ್ನೂ ಯಜುಸ್ಸು, ಸಾಮ, ಅಥರ್ವಣ ವೇದಗಳನ್ನೂ, ಇತಿಹಾಸ, ಪುರಾಣಗಳೆಂಬ ಐದನೆಯ ಶಾಸ್ತ್ರವನ್ನೂ, ವ್ಯಾಕರಣ, ಶ್ರಾದ್ಧಕಲ್ಪ, ಗಣಿತ, ಜ್ಯೋತಿಷ, ಶಕುನ ಶಾಸ್ತ್ರ, ನಿಧಿಶಾಸ್ತ್ರ, ತರ್ಕ, ನೀತಿ, ನಿರುಕ್ತ, ಶಿಕ್ಷಾ ಕಲ್ಪ ಛಂದಸ್ಸುಗಳು, ಭೂತ ವಿದ್ಯೆ, ಧನುರ್ವೇದ, ಸರ್ಪವಿದ್ಯೆ, ನೃತ್ಯಗೀತ, ವಾದ್ಯ, ಶಿಲ್ಪ, ಪರಿಮಳ ದ್ರವ್ಯಗಳ ತಯಾರಿಕೆಯ ವಿದ್ಯೆ ಇವೆಲ್ಲವನ್ನೂ ತಿಳಿದಿದ್ದೇನೆ, ವೇದದಲ್ಲಿಯೂ ಕೇವಲ ಶಬ್ದಬ್ರಹ್ಮಾತ್ಮಕವಾದ ಮಂತ್ರಭಾಗದ ಹೊರ-ಹೊದ್ದಿಕೆಯ ಅಂಶವನ್ನು ಮಾತ್ರ, ತಿಳಿದಿರುತ್ತೇನೆ. ಆದರೆ ಆತ್ಮವಿದನಲ್ಲ. ಭಗವತ್ಸ್ವರೂಪರಾದ, ಆತ್ಮಜ್ಞಾನವುಳ್ಳ, ತಮ್ಮಂಥವರು ಮಟ್ಟಿಗೆ ಶೋಕವನ್ನು ಧಾಟರುತ್ತಾರೆ ಎಂಬುದಾಗಿ ಕೇಳಿದ್ದೇನೆ. ನಾನು ಮಟ್ಟಿಗೆ ದುಃಖದಲ್ಲಿಯೇ ಇದ್ದೇನೆ. ಇಂಥ ನನಗೆ ಶೋಕದ ದಡವನ್ನು ಸೇರಿಸಬೇಕು" ಎಂದು. (ಇದೇ ರೀತಿಯಲ್ಲಿ ಮುಂಡಕೋಪನಿಷತ್ತಿನಲ್ಲಿಯೂ ಶೌನಕರೆಂಬ ಋಷಿಗಳು ಮಹಾಗೃಹಸ್ಥರಾದ ಅಂಗಿರಸರ ಬಳಿಗೆ ಹೋಗಿ ವಿಧಿವತ್ತಾಗಿ ಅವರನ್ನು ಪ್ರಾರ್ಥಿಸುತ್ತಾರೆ. "ಸ್ವಾಮೀ ! ಯಾವುದೊಂದನ್ನು ತಿಳಿದರೆ ಸಮಸ್ತವನ್ನೂ ತಿಳಿದಂತಾಗುವುದು ?" ಎಂದು. ಆಗ ಅಂಗಿರಸರ ಉತ್ತರ ಹೀಗಿದೆ : "ಈ ವಿಷಯದಲ್ಲಿ ತಿಳಿಯಬೇಕಾದದ್ದು ಎರಡು ಭಾಗವುಳ್ಳ

ವಿದ್ಯೆ, ಎಂಬುದಾಗಿ ಬ್ರಹ್ಮವಿದರು ಹೇಳುತ್ತಾರೆ; ಅದರಲ್ಲಿ ಪರೋಕ್ಷ ಜ್ಞಾನವನ್ನು ಮಾತ್ರ ಕೊಡುವ ಅಪರಾ ಎನಿಸಿಕೊಳ್ಳುವ ಒಂದು ಮತ್ತು ಪ್ರತ್ಯಕ್ಷ ಅನುಭೂತಿಯನ್ನೇ ಉಂಟುಮಾಡುವ ಪರಾ ಎಂದು ಪ್ರಸಿದ್ಧವಾದ ಇನ್ನೊಂದು. ಈಗ ಮೊದಲು, ಋಗ್ಯಜುಸ್ಸಾಮಾದಿ ಚತುರ್ವೇದಗಳೂ, ವೇದಷಡಂಗಗಳೂ ಸಹ ಶಬ್ದಬ್ರಹ್ಮರೂಪವಾದ ಅಪರಾ ವಿದ್ಯೆ, ಎನಿಸುತ್ತವೆ. ಇವುಗಳೆಲ್ಲದರ ಜ್ಞಾನವನ್ನೂ ಪಡೆದು, ಕೊನೆಯಲ್ಲಿ ಬರುವ ಸ್ವಾನುಭೂತಿಯು. ಪ್ರತ್ಯಕ್ಷ ಜ್ಞಾನರೂಪವಾಗಿ ಅಕ್ಷರ ಸ್ವರೂಪವಾದ ಪರಬ್ರಹ್ಮ ಪ್ರಾಪ್ತಿಗೆ ಕಾರಣವಾಗುವ ಅವಸ್ಥೆಯಲ್ಲಿ, ಅದಕ್ಕೇ ಪರಾ ಎಂದು ಹೇಳುತ್ತಾರೆ" ಎಂದು. ಇದನ್ನೇ ವಿಷ್ಣುಪುರಾಣದಲ್ಲಿ :— ೧. "ಶಬ್ದಬ್ರಹ್ಮಾಗಮಮಯ" ವಿದ್ಯೆಯೆಂದೂ, ೨. "ಬ್ರಹ್ಮ ವಿವೇಕದಿಂದ ಬರತಕ್ಕದ್ದೆಂದೂ" ಹೇಳಲಾಗಿದೆ. ಒಟ್ಟಿನಲ್ಲಿ ಕೇವಲ ಶಬ್ದಸ್ವರೂಪವಾದ ಜ್ಞಾನವು ಬ್ರಹ್ಮಪ್ರಾಪ್ತಿಗೆ ಸಾಕಾಗಲಾರದೆಂದು ಅಭಿಪ್ರಾಯವೇ ಹೊರತು, ಅದು ಸಂಪೂರ್ಣ ನಿಷ್ಫಲವೆಂಬುದು ಇಲ್ಲಿ ಅಭಿಪ್ರಾಯವಲ್ಲ.)

ನಾರದರು ಇನ್ನೂ ಶಬ್ದಬ್ರಹ್ಮದಲ್ಲಿಯೇ ಉಳಿದಿದ್ದರು ಎಂಬುದು ಅವರ ಮಾತುಗಳಿಂದಲೇ ತಿಳಿದು ಬರುತ್ತದೆ. ಭಗವಂತನು ಈ ವಿಷಯವನ್ನೇ, ಗೀತೆಯಲ್ಲಿ "ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ" ಎಂಬುದಾಗಿ ಹೇಳಿರುತ್ತಾನೆ:– ಬೌದ್ಧಿಕವಾಗಿ ಅಷ್ಟೇ ತಿಳಿಯಬೇಕೆಂಬ ಜಿಜ್ಞಾಸು ಸಹ ಬ್ರಹ್ಮಾನುಭವ ಕಾಲದಲ್ಲಿ ಶಬ್ದಬ್ರಹ್ಮವನ್ನು ಮೀರಿ ಬ್ರಹ್ಮಯೋಗದಲ್ಲಿ ಮುಳುಗಿರುತ್ತಾನೆ ಎಂದು ಇದರ ತಾತ್ಪರ್ಯ. ಹೀಗೆ ಅರ್ಥ ಅರ್ಥಜ್ಞಾನ, ಆದರಿಂದ ಬರುವ ಬ್ರಹ್ಮ ತನ್ಮಯತೆ ಮುಂತಾದ ಪರಿಪೂರ್ಣ ಬ್ರಹ್ಮಾನುಭೂತಿಯಲ್ಲಿ ಪರ್ಯವಸಾನ ಹೊಂದದ ಶಾಸ್ತ್ರ ಪಾಂಡಿತ್ಯವು ಶಾಂತಿಗಾಗಲೀ, ಪರತತ್ತ್ವ ಸಾಧನೆಗಾಗಲೀ ಕಾರಣವಲ್ಲ ಎಂಬುದು ಈ ಪ್ರಕರಣದಿಂದ ಸಿದ್ಧವಾಗುತ್ತದೆ. ಆಗ ಸನತ್ಕುಮಾರರು ಕೊಟ್ಟ ಪ್ರಸಿದ್ಧ ಉಪದೇಶಕ್ಕೆ ಭೂಮವಿದ್ಯೆ ಎಂದು ಹೆಸರಿದೆ. (ಬ್ರಹ್ಮಸೂತ್ರದಲ್ಲಿ ಭೂಮಾಧಿಕರಣದಲ್ಲಿ ಇದನ್ನು ವೇದವ್ಯಾಸರು ಚರ್ಚಿಸಿರುತ್ತಾರೆ.) ಅದರ ಸಾರಾಂಶ ಹೀಗಿದೆ :—

"ಋಗ್ವೇದಾದಿ ಚತುರ್ವೇದಗಳು ಮತ್ತು ಇತರ ಯಾವ ಶಾಸ್ತ್ರಗಳನ್ನು ನೀನು ಯಾವರೀತಿಯಲ್ಲಿ ಎಷ್ಟರಮಟ್ಟಿಗೆ ಕಲಿತಿರುವೆಯೋ ಇವು ನಾಮ

ರೂಪಾತ್ಮಕವಾದ ಒಂದು ಬ್ರಹ್ಮಾಂಶವನ್ನಷ್ಟೇ ತಿಳಿಸಿಕೊಡುತ್ತವೆ, ಅದನ್ನು ಗೌರವಿಸು ಮತ್ತು ಉಪಾಸಿಸು. ಹೀಗೆ ಮಾಡಿದನು ನಾಮರೂಪದ ಬ್ರಹ್ಮೋಪಾಸನೆಯಿಂದ ಸಿಕ್ಕುವಷ್ಟು ಕಾಮಚಾರಿಯಾಗಿ (ಸ್ವತಂತ್ರನಾಗಿ) ಆಗುವನು."

ಆಗ ನಾರದರ ಪ್ರಶ್ನೆ : "ಸ್ವಾಮಿ, ನಾಮಕ್ಕಿಂತಲೂ ಅಧಿಕವಾದುದೊಂದು ಇದೆಯೇ ? ಇದ್ದರೆ ಅದನ್ನು ಉಪದೇಶಿಸಿ."

ಸನತ್ಕುಮಾರರು ಹೇಳುತ್ತಾರೆ " ನಾಮವೆಂಬುದು ವಾಕ್ಕಿನಿಂದ ಉಂಟಾದ್ದರಿಂದ ಇದಕ್ಕಿಂತ ದೊಡ್ಡದು ನಾಮಗಳು, ವರ್ಣಾತ್ಮಕವಾದವು. ವಾಕ್ ಆದರೋ, ನಾಲಿಗೆ ಮೊದಲಾದ ಎಂಟು ಸ್ಥಾನಗಳಲ್ಲಿದ್ದು, ಸಕಲ ವರ್ಣಗಳನ್ನೂ ಅಭಿವ್ಯಕ್ತಮಾಡುವ ಇಂದ್ರಿಯ, ಈ ವಾಕ್ಕಿನಿಂದಲೇ ಋಗ್ವೇದಾದಿ ವೇದಗಳನ್ನೂ ಮತ್ತಿತರ ವಿದ್ಯೆಗಳನ್ನೂ ಸಮಸ್ತಲೋಕಗಳನ್ನೂ ಪಂಚಭೂತಗಳನ್ನೂ ದೇವ ಮಾನುಷ್ಯಾದಿ, ಸಕಲ ಜಂತುಗಳನ್ನೂ ಸತ್ಯಾನೃತ ಧರ್ಮಾಧರ್ಮಾದಿ ವಿವೇಕ ಜ್ಞಾನವನ್ನೂ ಪಡೆಯಲು ಸಾಧ್ಯ. ಇದಿಲ್ಲದಿದ್ದರೆಅಧ್ಯಯನ, ಅರ್ಥ ಶ್ರವಣಾದಿ ಜ್ಞಾನ ಸೋಪಾನಕ್ಕೆ ಆಶ್ರಯ ವಿಲ್ಲ. ಆದ್ದರಿಂದ ವಾಕ್ ಸಹ ಬ್ರಹ್ಮವೇ. ಹೀಗೆಂದು ಉಪಾಸಿಸು. ಆಗ ವಾಕ್ಕಿನಗತಿ ಇರುವಷ್ಟು ನಿನಗೆ ಸ್ವತಂತ್ರಗತಿ ಲಭ್ಯವಾಗುವುದು."

ನಾರದರು ಇದಕ್ಕಿಂತ ಅಧಿಕವಾದದ್ದನ್ನು ಕುರಿತು ಪ್ರಶ್ನಿಸಿದರು. ಆಗ ಸನತ್ಕುಮಾರರು ವಾಕ್ಕಿಗಿಂತ ಮನಸ್ಸು ದೊಡ್ಡದೆಂದು ಉಪದೇಶಿಸಿದರು. "ಮುಷ್ಟಿಯಲ್ಲಿ ಎರಡು ನೆಲ್ಲೀ ಕಾಯಿಗಳನ್ನು ಅಥವಾ ಬದರೀ ಕಾಯಿಗಳನ್ನು (ಬಾರೀಕಾಯಿ) ಅಥವಾ ತಾರೆಕಾಯಿಗಳನ್ನು (ವಿಭೀತಕ) ಹಿಡಿಯುವಂತೆ ಮನಸ್ಸು ನಾಮವನ್ನೂ ವಾಕ್ಯವನ್ನೂ ಒಳಕೊಳ್ಳುತ್ತದೆ. ಮನಸ್ಸಿದ್ದರೆ ಅಧ್ಯಯನಕ್ಕೆ ಉಪಕ್ರಮಿಸುತ್ತಾನೆ,; ಮನಸ್ಸಿದ್ದರೆ ಕರ್ಮಗಳನ್ನು ಮಾಡುತ್ತಾನೆ. ಪಶು ಪುತ್ರಾದಿಗಳನ್ನು ಇಚ್ಛಿಸುತ್ತಾನೆ. ಈ ಲೋಕ ಪರಲೋಕಗಳನ್ನು ಹೊಂದುತ್ತಾನೆ, ಆದ್ದರಿಂದ ಮನಸ್ಸು ವಿಶ್ವಾತ್ಮನ ಅಥವಾ ಪರಬ್ರಹ್ಮನ ಅಂಶವು. ಹಾಗೆಂದು ಉಪಾಸಿಸು" ಎನ್ನುತ್ತಾರೆ. ಹೀಗೆ ಮಾಡಿದವನು ಮತ್ತಷ್ಟು ಸ್ವತಂತ್ರಗತಿವುಳ್ಳವನಾಗುತ್ತಾನೆ.

ಮುಂದೆ ನಾರದರು ಇದಕ್ಕಿಂತ ಮೇಲ್ಪಟ್ಟ ತತ್ತ್ವವನ್ನು ಪ್ರಶ್ನಿಸಿದಾಗ ಅವರಿಗೆ ಸಂಕಲ್ಪ ತತ್ತ್ವವನ್ನು ಸನತ್ಕುಮಾರರು ಉಪದೇಶಿಸುತ್ತಾರೆ. "ಇದು ಅಂತಃಕರಣದ ಒಂದು ವೃತ್ತಿ. ಹೇಗೆ ಸಂಕಲ್ಪವೋ ಹಾಗೆಯೇ ಮನಸ್ಸು. ಆದ್ದರಿಂದ ಇದು ಹಿಂದೆ ಹೇಳಿದ ತತ್ತ್ವಗಳಿಗಿಂತ ದೊಡ್ಡದು. ಮನಸ್ಸಿನಿಂದ ಕರ್ಮಗಳವರೆಗಿರುವ ಸಕಲ ಪ್ರಪಂಚವೂ ಸಂಕಲ್ಪ ಒಂದನ್ನೇ ಆಶ್ರಯಿಸಿ ಅದೊಂದರಲ್ಲಿಯೇ ಪ್ರತಿಷ್ಠಿತವಾಗಿ ಅದೊಂದನ್ನೇ ಗತಿಯಾಗಿ ಪಡೆದಿರುತ್ತದೆ. ದ್ಯಾವಾ ಪೃಥ್ವಿಗಳು, ಇತರ ಪಂಚಭೂತಗಳು, ಮಳೆ, ಅನ್ನ, ಪ್ರಾಣ, ಮಂತ್ರ, ಕರ್ಮಗಳು ಎಲ್ಲವು ಸಂಕಲ್ಪಾಶ್ರಿತಗಳು. ಆದ್ದರಿಂದ ಸಂಕಲ್ಪವನ್ನು ಬ್ರಹ್ಮವೆಂದು ತಿಳಿಯಬೇಕು. ಹೀಗೆ ಮಾಡಿದವನು ಶಾಶ್ವತವಾಗಿ, ಪ್ರತಿಷ್ಠಿತನಾಗಿ, ವ್ಯಥೆ ಇಲ್ಲದೆ ತದನುಗುಣವಾದ ಲೋಕಗಳನ್ನು ಹೊಂದಿ ಮತ್ತಷ್ಟು ಸ್ವತಂತ್ರವಾಗುತ್ತಾನೆ.

ನಾರದರ ಪ್ರಶ್ನೆ ನಿರಂತರವಾಗಿ ಮೇಲಿನ ತತ್ತ್ವಗಳನ್ನೇ ಕೇಳುತ್ತದೆ. ಆಗ ಸನತ್ಕುಮಾರರು ಕ್ರಮವಾಗಿ ಚಿತ್ತ, ಧ್ಯಾನ, ವಿಜ್ಞಾನ, ಬಲ, ಅನ್ನ ಆಪ, ತೇಜಸ್ಸು, ಆಕಾಶ, ಸ್ಮೃತಿ, ಆಶೆ, ಪ್ರಾಣ, ಎಂಬ ತತ್ತ್ವಗಳನ್ನು ಉಪದೇಶಿಸುತ್ತಾರೆ.

"ಚಿತ್ತವು, ಸಂಕಲ್ಪಕ್ಕೂ ಪ್ರೇರಕ. ಚಿತ್ತದಲ್ಲಿಯೇ ಹಿಂದಿನದೆಲ್ಲವೂ ಪ್ರತಿಷ್ಠಿತ. ಧ್ಯಾನವು ಚಿತ್ತವನ್ನು ಮೀರಿದುದು. ಪ್ರಮಾಣ ಜನ್ಯ ಜ್ಞಾನರೂಪವಾದ ವಿಜ್ಞಾನವು ಸ್ಮೃತಿ ಸಂತಾನ ರೂಪವಾದ ಧ್ಯಾನಕ್ಕಿಂತಲೂ ದೊಡ್ಡದು. ಇದಿದ್ದರೆ ವಿವೇಕರೂಪವಾದ ತಿಳುವಳಿಕೆ ಸಾಧ್ಯ. ಇದೂ ಬ್ರಹ್ಮವೇ. ಬಲವು ಅಂದರೆ ಅನ್ನಾದಿ ಉಪಯೋಗದಿಂದ ಮನಸ್ಸಿನ ತಿಳುವಳಿಕೆಯ ಸಾಮರ್ಥ್ಯ, ಜ್ಞಾನಕ್ಕಿಂತಲೂ ದೊಡ್ಡದು. ಇದು ಉಂಟಾಗುವುದು ಅನ್ನ ಬಲದಿಂದ. ಅನ್ನವು ಉಳಿದೆಲ್ಲಕ್ಕಿಂತ ದೊಡ್ಡದು. ಏಕೆಂದರೆ ಹತ್ತು ರಾತ್ರಿಗಳು ಊಟ ಮಾಡದೆಯೂ ಬದುಕಿದ್ದರೆ ಅವನು ನೋಡುವ, ಕೇಳುವ, ಮನನ ಮಾಡುವ, ಅರಿಯುವ, ಕೆಲಸ ಮಾಡುವ, ಮತ್ತು ಫಲವನ್ನು ಅನುಭವಿಸುವ ಶಕ್ತಿಗಳು ನಷ್ಟವಾಗುತ್ತವೆ. ಆದುದರಿಂದ ಅನ್ನವು ಬ್ರಹ್ಮಾಂಶ. ಈ ಅನ್ನವು ನೀರಿನಿಂದ ಹುಟ್ಟುವುದು. ಸುವೃಷ್ಟಿಯಿಲ್ಲದೆ ಅನ್ನವಿಲ್ಲ. ನೀರಿನ ವಿವಿಧ

ಮೂರ್ತ ಸ್ವರೂಪಗಳೇ ಸಮಸ್ತ ಲೋಕಗಳೂ, ದೇವಾದಿ ಸ್ಥಾವರ ಜಂಗ ಮಾತ್ಮಕವಾದ ಜೀವಿಗಳೂ ಆಗಿವೆ. ಹೀಗೆ ನೀರು ಬ್ರಹ್ಮಸ್ವರೂಪವೇ. ಇದು ತೇಜಸ್ಸಿನಿಂದ ಉದ್ಭವವಾದದ್ದು. ಇದು ಮಳೆಗೆ ಕಾರಣ. ಇದಿಲ್ಲ ದಿದ್ದರೆ ಮಳೆಯಿಲ್ಲ, ಆದ್ದರಿಂದ ನೀರಿಗಿಂತ ಮೇಲ್ಪಟ್ಟುದು. ಹೀಗೆಯೇ ಆಕಾಶವು ತೇಜಸ್ಸಿಗಿಂತಲೂ ಹಿರಿಯದು; ತೇಜಸ್ಸಿನ ಅಭಿಮಾನಿಗಳಾದ ಸೂರ್ಯ, ಚಂದ್ರ, ನಕ್ಷತ್ರಗಳು, ಅಗ್ನಿ, ಇವುಗಳು ಆಕಾಶವನ್ನು ಅವಲಂಬಿಸಿ ರುತ್ತವೆ. ಆಕಾಶವಿಲ್ಲದಿದ್ದರೆ, ಕೇಳುವುದಾಗಲೀ, ಒಬ್ಬನು ಮತ್ತೊಬ್ಬನನ್ನು ಕರೆಯುವುದು, ಇತ್ಯಾದಿ ವ್ಯವಹಾರಗಳು, ಸಾಧ್ಯವಿಲ್ಲ. ಆದ್ದರಿಂದ ಆಕಾಶವು ಮೇಲ್ಪಟ್ಟ ಬ್ರಹ್ಮಾಂಶ. ಸ್ಮೃತಿ ಎಂಬುದು (ನೆನಪಿಗೆ ಕಾರಣವಾದ ಅಂತಃಕರಣದ ಧರ್ಮ) ಆಕಾಶಕ್ಕಿಂತ ಅಧಿಕ. ಏಕೆಂದರೆ ಸ್ಮೃತಿ ಇಲ್ಲದವರು ಬಹು ಮಂದಿ ಒತ್ತಟ್ಟಿಗೆ ಕುಳಿತಿದ್ದರೂ ಕೇಳುವುದಾಗಲೀ, ಮನನ ಮಾಡುವು ದಾಗಲೀ ಅರಿಯುವುದಾಗಲೀ, ಸಾಧ್ಯವಿಲ್ಲ. ಸ್ಮೃತಿ ಇದ್ದರೆ ಪಶುಪುತ್ರಾದಿ ವಿವೇಕವು ಸಾಧ್ಯ. ಹೀಗೆ ಸ್ಮೃತಿಯೂ ಬ್ರಹ್ಮಾಂಶ; ಇದು ಆಶೆ ಇದ್ದಾಗ ಉದ್ದೀಪಿತವಾಗುವದರಿಂದ ಅಧ್ಯಯನಕ್ಕೂ, ಸಕಲ ವ್ಯಾಪಾರಗಳಿಗೂ ಪಶು ಪುತ್ರಾದಿ ಪ್ರಾಪ್ತಿಗೂ ಕಾರಣ. ಹೀಗೆ ಆಶೆಯು ಉಳಿದೆಲ್ಲಕ್ಕಿಂತ ದೊಡ್ಡದು.

ಇದು ಪ್ರಾಣದಲ್ಲಿ ಪ್ರತಿಷ್ಠಿತವಾಗಿದೆ. ರಥ ಚಕ್ರದ ನಾಭಿಯಲ್ಲಿ ಅರೇ ಕಾಲುಗಳು ಏಕೀಭವವಾಗುವಂತೆ ಸಮಸ್ತವೂ ಪ್ರಾಣವನ್ನೇ ಆಧಾರವಾದಿ ಹೊಂದಿವೆ, ಇದೇ ತಂದೆ. ತಾಯಿ, ಸೋದರ, ಸೋದರಿ, ಆಚಾರ್ಯ ಮತ್ತು ಬ್ರಾಹ್ಮಣ. ತಂದೆ ತಾಯಿ ಮುಂತಾದ ಪೂಜ್ಯರಿಗೆ ಅನುರೂಪವಲ್ಲದ ಮಾತನ್ನು ಹೇಳಿದಾಗ ವಿವೇಕಿಗಳು "ನಿನಗೆ ಧಿಕ್ಕಾರವಿರಲಿ ನೀನು ಪಿತೃ ಹತ್ಯೆ ಮಾತೃ ಹತ್ಯೆ ಆಚಾರ್ಯ ಹತ್ಯಾದಿ ದ್ರೋಹ ಮಾಡಿದವನು." ಎಂದು ಶಪಿಸುತ್ತಾರೆ. ಪ್ರಾಣವಿದ್ದಾಗಲೇ ಪಿತ್ರಾದಿ ಶಬ್ದಗಳೂ ಉಂಟು. ಪ್ರಾಣವು ಹೋದ ಮೇಲೆ ಶೂಲಕ್ಕೆ ಹಾಕಿದರೂ, ದಹಿಸಿದರೂ, ಛಿದ್ರ ಛಿದ್ರ ಮಾಡಿದರೂ ಪಿತೃಹತ್ಯೆ, ಮಾತೃಹತ್ಯ ಇತ್ಯಾದಿ ಪಾಪಗಳಿಗೆ ಅವಕಾಶವಿಲ್ಲ. (ಪ್ರಾಣತ್ಯಾಗ ಮಾಡಿದ ಹಿರಿಯರಿಗೆ ಅಗ್ನಿಸಂಸ್ಕಾರಗಳನ್ನು ನಡೆಸಿದರೆ ಇದನ್ನು ಹತ್ಯವೆಂದಾಗಲಿ ದ್ರೋಹವೆಂದಾಗಲೀ ಹೇಳದಿರುವುದಷ್ಟೇ ಅಲ್ಲದೆ ಪುಣ್ಯಕಾರ್ಯಗಳೆಂದು

ಸ್ತುತಿಸುವುದುಂಟು.) ಹೀಗೆ ಪ್ರಾಣವೇ ಉಳಿದೆಲ್ಲಕ್ಕೂ ಆಧಾರ. ಪ್ರಾಣದಿಂದ ಉಳಿದ ಶ್ರವಣ, ಮನನಾದಿ, ವ್ಯಾಪಾರಗಳನ್ನು ನಡೆಸುತ್ತಿರುವವನನ್ನು ಅತಿವಾದಿ ಎಂದು ಜನರು ಕೊಂಡಾಡುತ್ತಾರೆ. ಇದು ಬೈಗಳ ಶಬ್ದವಲ್ಲ. ಪ್ರಾಣವಿಜ್ಞಾನಿಯು ತಾನು ಅತಿವಾದಿ ಯೆಂಬುದನ್ನು ನಿರಾಕರಿಸಬಾರದು. ಏಕೆಂದರೆ ನಿಜವಾದ ಅತಿವಾದಿಯು ಸತ್ಯದ ಬಲದಿಂದಲೇ (ಸತ್ಯವನ್ನು ತಿಳಿದೇ) ಅತಿವಾದ ಮಾಡುವನು; ಹೀಗೆ ಮಾಡುವುದು ವೇದವಿಹಿತವೇ ಆಗಿದೆ. ಸತ್ಯವನ್ನು ತಿಳಿಯದಿದ್ದರೆ ಇದು ಸಾಧ್ಯವಿಲ್ಲ.

ಹೀಗೆ ಸತ್ಯವು ಅತಿವಾದಕ್ಕೆ ಕಾರಣ. ಮತ್ತು ಪ್ರಾಣಕ್ಕಿಂತ ದೊಡ್ಡದು ಕೇವಲ ಪ್ರಾಣವಿದನು ಇಂತಹ ಅತಿವಾದಿಯಲ್ಲ. ಸತ್ಯವು ಮನನ ದಿಂದ ತಿಳಿಯುವುದು. ಮನನವು ಶ್ರದ್ಧೆ ಯಿಂದ ಬರುವುದು. ಹೀಗೆ ಸತ್ಯಕ್ಕಿಂತ ಮನನವೂ, ಅದಕ್ಕಿಂತ ಶ್ರದ್ಧೆಯೂ ದೊಡ್ಡವು. ಇವೆರಡೂ ನಿಷ್ಠೆಯಿಂದ ಬರತಕ್ಕವು. ನಿಷ್ಠೆ ಇಲ್ಲದೆ, ಶ್ರದ್ಧೆ ಇಲ್ಲ, ಇಂದ್ರಿಯ ಸಂಯಮವೇ ಮೊದಲಾದ ಚಿತ್ತದ ಏಕಾಗ್ರತೆಯನ್ನು ಸಾಧಿಸಿಕೊಡುವ ತಪೋರೂಪವಾದ ಕರ್ಮವು ನಿಷ್ಠೆಗೆ ಕಾರಕವಾದುದರಿಂದ ಅದಕ್ಕಿಂತ ದೊಡ್ಡದು. ಈ ತಪಸ್ಸು ಸುಖದಲ್ಲಿ ಇರುವವನಿಗೆ ಸಾಧ್ಯ. ಅಸುಖಿಯಾದವನು ಕರ್ಮಶೀಲನಲ್ಲ. "ಸುಖಮೇವ ಲಬ್ಧ್ವಾ ಕರೋತಿ" ಅಂದರೆ ಈ ಸುಖತತ್ತ್ವವನ್ನೇ ಸಮಸ್ತಕ್ಕಿಂತ ದೊಡ್ಡದೆಂಬುದನ್ನಾಗಿ ತಿಳಿಯಬೇಕು. ಇಂತಹ ಶಾಶ್ವತ ಸುಖವು ನಿರತಿಶಯವಾಗಿ, ದೊಡ್ಡದಾದ-ಮಹತ್, ಬೃಹತ್, ಭೂಮಾ ಎನಿಸಿ-ಕೊಂಡ_ಪರಬ್ರಹ್ಮ ತತ್ತ್ವವನ್ನೇ ಅವಲಂಬಿಸಿದೆ. ಇದಲ್ಲದ ಅಲ್ಪ ವಸ್ತುಗಳು ಸುಖವನ್ನು ಕೊಡಲಾರವು. ಅವು ಏನಿದ್ದರೂ ವ್ಯರ್ಥವಾದ ದಾಹ-ವನ್ನೂ, ದುಃಖವನ್ನೂ, ರೋಗಗಳನ್ನೂ, ಜರಾಮರಣಾದಿ ದುರವಸ್ಥೆಗಳನ್ನೂ ಮಾತ್ರ ಉಂಟುಮಾಡಬಲ್ಲವು. ಇಂತಹ ಶಾಶ್ವತ ಸುಖಕ್ಕೆ ಆಶ್ರಯವಾದ ಭೂಮವು ಹೇಗಿದೆಯೆಂದರೆ (ಯೋಗಾವಸ್ಥೆಯಲ್ಲಿ) ಯಾವಾಗ ಬೇರೊಂದನ್ನು ನೋಡದೆ, ಕೇಳದೆ, ಅರಿಯದೆ, ತಲ್ಲೀನತೆಯಲ್ಲಿ ಇರುವೆಯೋ ಆಗ ವೇದ್ಯವಾಗುವುದು. ಭೂಮವೇ ಅಮೃತ, ಉಳಿದದ್ದು ಮರ್ತ್ಯ ಮತ್ತು ಅಲ್ಪ. ಇಂತಹ ಪರಬ್ರಹ್ಮವು ತನ್ನ ಮಹಿಮೆಯಲ್ಲಿ ತಾನೇ ಪ್ರತಿಷ್ಠಿತವಾಗಿರುವದಲ್ಲದೆ

ತನಗಿಂತ ಬೇರೆ ಯಾವ ಪದಾರ್ಥದ ಆಶ್ರಯವನ್ನೂ ಹೊಂದಿರುವುದಿಲ್ಲ. ಅಂದಮೇಲೆ ಇದೇ ಜಗನ್ಮೂಲ, ಜಗದಾಧಾರ, ಜಗತ್ತಿಗೆ ಏಕಾವಲಂಬನ.

ದಡ್ಡರು ಗೋವುಗಳನ್ನೊ, ಕುದುರೆಗಳನ್ನೋ ಆನೆಗಳನ್ನೊ, ಅಥವಾ ಧನ ಕನಕ ವಸ್ತುವಾಹನಾದಿಗಳನ್ನೋ ಪುತ್ರ ಮಿತ್ರ ಭಾರ್ಯಾದಿ ಕಳತ್ರ ಗಳನ್ನೋ, ಹೊಲ, ಗದ್ದೆ, ಮನೆ, ಮುಂತಾದ ಕ್ಷೇತ್ರ ವಿಶೇಷಗಳನ್ನೋ, ಸುಖಕ್ಕೆ ಕಾರಣವಾದ ಭೂಮಾ (ದೊಡ್ಡದು) ಎಂದು ಭ್ರಮಿಸಿರುವರು. ನನ್ನ ಅಭಿಪ್ರಾಯ ಹೀಗಿಲ್ಲ. ಏಕೆಂದರೆ ಇವೆಲ್ಲವೂ ಮತ್ತೊಂದರಲ್ಲಿ ಪ್ರತಿಷ್ಠಿತವಾಗಿರುವುದು ಸ್ಪಷ್ಟವೇ ಆಗಿದೆ. ಭೂಮವಾದರೋ ಹೀಗಿಲ್ಲದೆ ಸ್ವಪ್ರತಿಷ್ಠಿತ ವಾಗಿದೆ. ಈ ಪರಬ್ರಹ್ಮ ಮಹಿಮೆಯು ಸರ್ವವ್ಯಾಪಿ, ಮೇಲೆ, ಕೆಳಗೆ. ಹಿಂದೆ, ಮುಂದೆ, ಎಡಬಲಗಳಲ್ಲಿ ಎಲ್ಲ ಕಡೆಯೂ ಇದೆ. ಇದನ್ನು ನೋಡಿ ಮನಸ್ಸಿಗೆ ತಂದುಕೊಂಡು ತಿಳಿದು ಆತ್ಮರತಿ ಯಾಗಿ ( ಇದನ್ನು ಪ್ರೇಮಿಸಿ ) ಆತ್ಮಕ್ರೀಡನಾಗಿ ( ಮಾಡುವುದೆಲ್ಲವನ್ನೂ ಅವನಿಗೆ ಅರ್ಪಿಸಿ ) ಆತ್ಮಮಿಥುನನಾಗಿ ( ತದಿತರವಾದ, ತದ್ವ್ಯತಿರಿಕ್ತವಾದ, ಪದಾರ್ಥಗಳ ಸ್ಸಂಗರಹಿತನಾಗಿ, ) ಆತ್ಮಾನಂದನೂ ಆಗಿ ( ಬ್ರಹ್ಮಾನಂದ ಆಸಕ್ತನಾಗಿ ) ಆದವನು. ಸ್ವರಾಟ್ ಆಗುತ್ತಾನೆ. ಅಂದರೆ ಜ್ಞಾನಿಯಾಗಿ ಸ್ವಚ್ಛಂದ ಗತಿ-ಯನ್ನು, ಸಕಲ ಲೋಕಗಳಲ್ಲಿಯೂ ಪಡೆಯುತ್ತಾನೆ. ಇದನ್ನು ತಿಳಿಯದೆ ಇತರ ವಸ್ತುಗಳನ್ನಷ್ಟೇ ಅರಿತವರು ಅನ್ಯಾಧೀನರಾಗಿ ಅಶಾಶ್ವತ ಲೋಕಗಳಲ್ಲಿ ವಾಸಿಸಿ, ಲೋಕಾನುಸಾರಿಗಳಾಗುವರೇ ವಿನಾ ಸ್ವೇಚ್ಛಂದಗತಿಯನ್ನು ಪಡೆಯ ಲಾರರು. ಹೀಗೆ ನೋಡಿ ತಿಳಿದವನು ಆ ಪರಮಾತ್ಮನಿಂದಲೇ ಪ್ರಾಣ, ಆಶೆ, ಸ್ಮೃತಿ. ಆಕಾಶ, ಮುಂತಾದ ಹಿಂದೆ ಹೇಳಿದ ಎಲ್ಲ ತತ್ವಗಳನ್ನೂ, ನಾಮ ಬ್ರಹ್ಮದವರೆಗೂ ತಾನಾಗಿಯೇ ಪಡೆಯುತ್ತಾನೆ. ಅವನ (ಪರಮಾತ್ಮನ) ಅನುಗ್ರಹವಿದ್ದರೆ ಇವೆಲ್ಲವೂ ಲಭ್ಯ. ಹೀಗೆ ಸ್ವರಾಜ್ಯವನ್ನು ಪಡೆದ ಜ್ಞಾನಿಯು ಮೃತ್ಯುವನ್ನು ದಾಟಿ, ರೋಗಾತೀತನಾಗಿ, ದುಃಖಲೇಶವನ್ನೂ ಕಾಣಲಾರನು. ಮತ್ತು ಎಲ್ಲವನ್ನೂ ನೋಡಿದವನಾಗಿ. ಏನನ್ನು ಬೇಕಾದರೂ ಎಲ್ಲಕಡೆಯಲ್ಲೂ ಪಡೆಯಬಲ್ಲನು. ಅವನು ಏಕಕಾಲಕ್ಕೆ ಒಂದೋ ಮೂರೋ ಐದೋ ಏಳೋ ಒಂಭತ್ತೋ ಹನ್ನೊಂದೋ ನೂರಹತ್ತೋ ಅಥವಾ ಸಾವಿರದಇಪ್ಪತ್ತೋ

( ಶರೀರಸಮೇತನಾಗಿ ) ಆಗಬಲ್ಲದು. ಹೀಗೆ ಮಾನವನ ಬ್ರಹ್ಮಪ್ರಾಪ್ತಿಗೂ ಅದಕ್ಕೆ ಕಾರಣವೂ ಆದ ಇತರ ಸಾಧನಗಳಿಗೂ ಮೂಲವಾದದ್ದು ಅವನ ಆಹಾರ.ಇದು ಶುದ್ಧಿಯಾಗಿದ್ದರೆ ಸತ್ವಶುದ್ಧಿ ಆಗುವುದು. ಇದರಿಂದ ಶಾಶ್ವತ ಸ್ಮೃತಿಯೂ, ಇದರಿಂದ ಸರ್ವಗ್ರಂಥಿಗಳ ( ಸಂಸಾರದ ಗಂಟುಗಳ ) ಮೋಕ್ಷವುಂಟಾಗುವುದು.

ಹೀಗೆಂಬುದಾಗಿ ರಾಗದ್ವೇಷವಿಮುಕ್ತರಾದ ನಾರದರಿಗೆ, ಭಗವಾನ್ ಸನತ್ಕುಮಾರರು ಅಜ್ಞಾನ, ಶೋಕ, ರೂಪಗಳಾದ ಕತ್ತಲೆಯ ಆಚೆಯ ದಡವನ್ನು ತೋರಿಸಿದರು. ಆದಕ್ಕಾಗಿಯೇ ದಡಕ್ಕೆ ದಾಟಿಸಿದ ಅವರಿಗೆ, ಸ್ಕಂದ ಎಂಬ ಅನ್ವರ್ಥದ ಹೆಸರಾಯಿತು. ಪ್ರಸಿದ್ಧವಾದ ಈ ಭೂಮ ವಿದ್ಯೆಯು ಸಾಮ ವೇದದ ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯದ ತುಂಬ. ಇಪ್ಪತ್ತಾರು ಖಂಡಗಳಲ್ಲಿ ಮನೋಹರವಾಗಿ ವಿವರಿಸಲ್ಪಟ್ಟಿದೆ. ಬೃಹತ್ಸ್ವರೂಪನಾದ, ಬ್ರಹ್ಮಶಬ್ದವಾಚ್ಯನಾದ, ಭಗವಂತನನ್ನು ಅರಿತ ಹೊರತು ಯಾವನೊಬ್ಬ ಚೇತನನಿಗೂ ಮನಶ್ಶಾಂತಿ ದೊರೆಯಲಾರದೆಂದೂ, ಅಲ್ಪ ವಿಷಯೋಪಭೋಗಗಳನ್ನೇ, ಅವುಗಳ ಸಲಕರಣೆಗಳನ್ನೇ ಶಾಶ್ವತ ಸುಖ ಸಾಧನಗಳೆಂದು ಬಗೆಯುವುದು ಕೇವಲ ಭ್ರಾಂತಿಯೆಂದೂ ಇಲ್ಲಿ ಕೊಟ್ಟಿರುವ ಉಪದೇಶವು ಇಂದಿನ ಜಗತ್ತಿಗೆ ಮತ್ತು ಈ ಯಾಂತ್ರಿಕ ಯುಗಕ್ಕೆ ಎಷ್ಟು ಚೆನ್ನಾಗಿ ಹೊಂದುವುದೆಂಬುದನ್ನು ಮನಗಾಣುವುದು ಆವಶ್ಯವಾಗಿದೆ. ಎಲ್ಲ ವೇದರಾಶಿಯ ಸಂದೇಶವೂ ಇದೇ ಆಗಿದೆ.

— —

ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

## ೭. ಅನ್ನದಾನದ ಹಿರಿಮೆ

ಅನ್ನವನ್ನು ಬ್ರಹ್ಮವೆಂದು ಅನ್ನದಾನದ ಮಹಿಮೆಯನ್ನು ಕೊಂಡಾಡುವ ಅನೇಕ ಸೂಕ್ತಗಳು ಹೇರಳವಾಗಿ ವೇದದಲ್ಲಿ ಇವೆ. ಇಂತಹದೊಂದು, ಪ್ರಸಿದ್ಧವಾದ ಭಿಕ್ಷು (ಆಂಗಿರಸ) ಸೂಕ್ತ. (ಋಗ್ವೇದದ ೧೦ನೇ ಮಂಡಲದಲ್ಲಿ ೧೧೭ನೇ ಸೂಕ್ತ). ಇದನ್ನು ಹೀಗೆ ಸಂಗ್ರಹಿಸಬಹುದು.

"ಮಾನವನು ಹಸಿವಿನಿಂದ ಬಳಲಿ ಸಾಯಬೇಕೆಂಬುದು ದೇವತೆಗಳ ಸಂಕಲ್ಪವಲ್ಲ. ಏಕೆಂದರೆ ಚೆನ್ನಾಗಿ ತಿನ್ನುವವನೂ ಸಹ ಹಸಿವನ್ನು ಕಾಣದಿದ್ದರೂ ಮೃತ್ಯುವಶನಾಗುವುದು ಖಂಡಿತ. ಅಲ್ಲದೇ ಧನ-ಧಾನ್ಯಗಳನ್ನು ದಾನ ಮಾಡಿದವನಿಗೆ ಏನೂ ಕಡಿಮೆಯಾಗುವದಿಲ್ಲ. ದಾನ ಶೀಲನಲ್ಲದ ಜಿಪುಣನಿಗಾದರೋ ಯಾರಿಂದಲೂ ಸುಖ-ಶಾಂತಿಗಳೂ, ಕೊನೆಗೆ ಸಹಾಯವೂ ಸಹ ದೊರೆಯುವದಿಲ್ಲ. ಆದ್ದರಿಂದ ಮರಣಕ್ಕೂ ಹಸಿವೆಗೂ ಸಂಬಂಧವಿಲ್ಲ. (ತಾನೂ ತಿಂದು ಚೆನ್ನಾಗಿ ಬದುಕಿ ಇತರರಿಗೂ ದಾನ ಮಾಡಬೇಕೆಂದುದೇ ದೇವತೆಗಳಿಗೆ ಅಭಿಮತವಾದ ವಿಷಯ. ಇದೇ ವೇದ ಮಾರ್ಗವೂ ಸಹ.) ಮೃತ್ಯುವು ಉಪವಾಸವಿರುವವನಿಗೂ, ಇಲ್ಲದವನಿಗೂ, ಒಂದೇ ಸಮವಾದಿದಯೇ ವಿನಾ ಪಕ್ಷಪಾತ ಮಾಡಲಾರದು. ಆದ್ದರಿಂದ ಮನುಷ್ಯನು ದಾನ ಶೀಲನಾಗಬೇಕು. ಯಾವನು ತನಗೆ ಸಾಕಷ್ಟು ಅನ್ನಪಾನಗಳಿದ್ದರೂ, ದರಿದ್ರನಾಗಿ ಅನ್ನಯಾಚಿಸುವ ಅತಿಥಿಯ ವಿಷಯದಲ್ಲಿ ಕಲ್ಲು ಮನಸ್ಸಿನವನಾಗುತ್ತಾನೋ ಅವನ ವಿಷಯಕ್ಕೆ ಯಾರಿಗೂ ಕನಿಕರ ಬರುವದಿಲ್ಲ. ಅವನಿಗೆ ಯಾವೂ ಸುಖವನ್ನೂ ಕೋರುವುದಿಲ್ಲ. ಆದರೆ ನಿಜವಾದ ಅನ್ನದಾತನು ದರಿದ್ರನಾದ ಅತಿಥಿಗೂ ಅನ್ನವನ್ನು ನೀಡಿ ಉತ್ತಮವಾದ ಯಜ್ಞಾನುಷ್ಠಾನ ಫಲವನ್ನು ಪಡೆಯುವುದಲ್ಲದೆ, ಶತ್ರುಗಳನ್ನೂ ಮಿತ್ರರನ್ನಾಗಿಸಿಕೊಳ್ಳುತ್ತಾನೆ. ಇವನಿಗೆ ಎಲ್ಲರೂ ಮಿತ್ರರೇ. ಕೆಲವರು ತಮ್ಮನ್ನೇ ಅನುಸರಿಸಿ,

ಜೊತೆಯಲ್ಲಿದ್ದು ಸರ್ವದಾ ಹಿತವನ್ನು ಕೋರುವ ಸ್ನೇಹಿತನಿಗೂ ಸಹ ಅನ್ನ ದಾನ ಮಾಡುವುದಿಲ್ಲ. ಇದು ನಿಜವಾದ ಸ್ನೇಹವಲ್ಲ. ಅನ್ನಾಪೇಕ್ಷಿಯು ಇಂಥವರ ಬಳಿ ಸೇರಬಾರದು. ಭೋಜನ ವ್ಯವಹಾರವಿಲ್ಲದೆ ನಿಜವಾದ ಸ್ನೇಹ ನಿಲ್ಲಲಾರದು. ಲೋಭಿಯು ಸ್ನೇಹಿತನಂತೆ ನಟಿಸಿದರೂ ಸ್ನೇಹಿತ ನಾಗಲಾರನು.

ಐಶ್ವರ್ಯವಂತನು ಯಾಚಕನಿಗೆ ದಾನ ಮಾಡದಿದ್ದರೆ ಐಶ್ವರ್ಯವು ರಥ ಚಕ್ರದಂತೆ ಸ್ಥಿರವಾಗಿ ನಿಲ್ಲದೆ ಒಬ್ಬನಿಂದ ಮತ್ತೊಬ್ಬನಲ್ಲಿಗೆ ಹೋಗಿ ಸೇರುವುದು ಖಂಡಿತ. ಆದ್ದರಿಂದ ಧನಸಂಪತ್ತು ಇರುವಾಗಲೇ ದಾನ ಮಾಡುವುದು ಜಾಣತನ". ಸೂಕ್ತದ ಋಷಿಯು ಘೋಷಿಸುತ್ತಾನೆ : "ನಾನು ಇದನ್ನು ಸತ್ಯವಾಗಿ ಹೇಳುತ್ತೇನೆ. ಅನ್ನದಾನ ಪ್ರವೃತ್ತಿ ಇಲ್ಲದ ಮನುಷ್ಯರಲ್ಲಿ ಸೇರಿರುವ ಅನ್ನವೂ ವ್ಯರ್ಥ; ಅವನ ಅನ್ನವೇ ಅವನಿಗೇ ಮೃತ್ಯು ವಾಗಬಲ್ಲದು. ಯಾವನು ದೇವತೆಗಳಿಗೆ ಹವಿರ್ದಾನದಿಂದಲೂ, ಸ್ನೇಹಿತ ನಿಗೆ ಅನ್ನದಾನದಿಂದಲೂ, ಊಟಮಾಡುವಾಗ ಬಂದ ಅತಿಥಿಗೆ ಸಹ ಭೋಜನದಿಂದಲೂ, ತೃಪ್ತಿ ಪಡಿಸದೆ, ತಾನೊಬ್ಬನೇ ಊಟಮಾಡು ವನೋ ಅವನು ಕೇವಲ ಪಾಪಿಷ್ಠನು." (ಭಗವದ್ಗೀತೆಯಲ್ಲಿ "ಭುಂಜತೇ ತೇ ತು ಅಘಂ ಪಾಪಾಃ ಯೇ ಪಚಂತಿ ಆತ್ಮಕಾರಣಾತ್" (ಅಧ್ಯಾಯ ೩) ಎಂದು ಭಗವಂತನು, ಅನ್ನದಾನ ಶೀಲನಲ್ಲದ ಸ್ವಾರ್ಥಿಯನ್ನು ನಿಂದಿಸಿರುವುದೂ ಈ ಮಹಾ ಮೌಲ್ಯದ ಹಿನ್ನಲೆಯಲ್ಲೇ. "ಕೇವಲಾಘೋ ಭವತಿ ಕೇವ ಲಾದೀ" ಎಂಬ ವೇದ ವಾಕ್ಯದ ಅಪರಾವತಾರದಂತಿದೆ ಈ ಭಗವದ್ಗೀತಾ ವಾಣಿ.) ಗೃಹಸ್ಥನ ಮುಖ್ಯ ಕರ್ತವ್ಯವೇ ಅತಿಥಿ ಭೋಜನ. ಅನ್ನದಾನಕ್ಕೆ ಸ್ತ್ರೀ ಪುರುಷರೆಂದಾಗಲಿ, ಬ್ರಾಹ್ಮಣಾದಿವರ್ಣಭೇದವಾಗಲೀ ಇಲ್ಲ. ಹಸಿದ ಯಾವುದೇ ಪ್ರಾಣಿಯು ದಾನಕ್ಕೆ ಪಾತ್ರನು ಎಂದು ಪುರಾಣಾದಿಗಳಲ್ಲಿಯೂ ಇದನ್ನೇ ಹೇಳಿದೆ. ಕೃಷಿ ಮಾಡುವ ಒಕ್ಕಲಿಗನಿಗೆ ಅವನ ನೇಗಿಲು ಅನ್ನದಾನ ಮಾಡುತ್ತದೆ. ಸೇವಕನೂ ಸಹ ಯಜಮಾನನಿಗಾಗಿ ದುಡಿದು ಅನ್ನ ಸಂಪಾದನೆಗೆ ಕಾರಣನಾಗುತ್ತಾನೆ. (ದಾನ ಮಾಡದವನು ನೇಗಿಲಿ ಗಿಂತಲೂ ಕಡೆ, ಸೇವಕನೇ ಅವನಿಗಿಂತ ವಾಸಿ ಎಂದು ಇದರ ಅರ್ಥ.)

ಜ್ಞಾನವೂ ಅನ್ನವೇ. ವೇದಾರ್ಥವನ್ನು ತಿಳಿದು ಇತರರಿಗೆ ದಾನಮಾಡುವ ಬ್ರಾಹ್ಮಣನು ವೇದಾರ್ಥವನ್ನು ತಿಳಿಯದ ಕೇವಲ ಜಾತಿ ಬ್ರಾಹ್ಮಣನಿಗಿಂತಲೂ ಶ್ರೇಷ್ಠ. ಪರೋಪಕಾರಿಯು ಲೋಭಿಗೆ ಬಂಧುವಾದರೆ ಅವನಿಗೂ (ಲೋಭಿಗೂ) ದಾತೃತ್ವ ಬುದ್ಧಿ ಕಾಲಾನುಕ್ರಮದಲ್ಲಿ ಬರುವಂತಾಗಬಹುದು. ದಾತೃವಿಗೂ, ಲೋಭಿಗೂ ಇರುವ ವ್ಯತ್ಯಾಸವನ್ನು ಒಂದು ದೃಷ್ಟಾಂತದಿಂದ ಹೀಗೆ ವರ್ಣಿಸ ಬಹುದು : ಒಂದೇ ಕಾಲಿನಲ್ಲಿ ನಡೆಯುವವನು, ಎರಡು ಕಾಲಿನವನಂತೆ ನಡೆಯ ಲಾರದೆ ನಿರ್ದಿಷ್ಟವಾದ ಸ್ಥಾನಕ್ಕೆ ಸೇರಲಾರನು. ಅಥವಾ ಹೆಚ್ಚು ಕಾಲವನ್ನು ತೆಗೆದು ಕೊಳ್ಳುವನು. ಹೀಗೆಯೇ ಎರಡು ಪಾದವುಳ್ಳವನು, ಮೂರು ಪಾದ ದವನಿಗಿಂತ ಹಿಂದೆ ಬಿದ್ದವನು. ಆದರೆ, ನಾಲ್ಕು ಪಾದದವನು ಎಲ್ಲರಿಗಿಂತಲೂ ಶ್ರೇಷ್ಠನು. ಗತಿಯಲ್ಲಿ ಯಾರೂ ಅವನಿಗೆ ಸಮರಲ್ಲ. ಇಲ್ಲಿ "ಕಾಲು" ಗಳೆಂದರೆ ಧನಾಂಶ. ಉಳಿದವರಂತಲ್ಲದೆ, ನಾಲ್ಕು "ಕಾಲಿನವನು" ಪೂರ್ಣ ದಾನಿ ಅಥವಾ ಮತ್ತೊಂದು ಉದಾಹರಣೆ. ಎರಡೂ ಕೈಗಳು ನೋಡುವುದಕ್ಕೆ ಸಮವಾಗಿ ಕಂಡರೂ ಬಲಗೈಗೆ ಇರುವ ಶಕ್ತಿಯು ಎಡಗೈಗೆ ಇರುವದಿಲ್ಲ. ಹಸುಗಳು ಒಂದೇ ಸಂಖ್ಯೆಯ ಕರುಗಳನ್ನು ಹಾಕಿದರೂ ಒಂದೇ ಪ್ರಮಾಣದ ಹಾಲನ್ನು ಕೊಡುವುದಿಲ್ಲ. ಅವಳೀ ಮಕ್ಕಳೂ ಸಹ ಒಂದೇ ವಿಧವಾದ ಸಾಮರ್ಥ್ಯ ಶಾಲಿಗಳಾಗಿ ಹುಟ್ಟಿರುವುದಿಲ್ಲ. ಅಷ್ಟೇಕೆ ? ಒಂದೇ ಕುಲದ ಬಂಧುಗಳೂ ಸಮಾನ ದಾನಶೀಲರಾಗುವದಿಲ್ಲ. ಆದರೂ ಪ್ರತಿ ಯೊಬ್ಬನೂ ದಾತೃತ್ವ ಶಕ್ತಿಯನ್ನು ಪಡೆಯಲು ಯತ್ನಿಸ ಬೇಕು."

ಈ ಋಕ್ಸೂಕ್ತದಲ್ಲಿ ವ್ಯಕ್ತವಾಗಿರುವ ಅನ್ನದಾನದ ಮಹಿಮೆಯು ಭಾರತೀಯ ಸನಾತನ ಸಂಸ್ಕೃತಿಯ ಅಡಿಗಲ್ಲಾಗಿದೆ. ಪಾಶ್ಚಾತ್ಯ ಸಂಸ್ಕೃತಿಗೂ ನಮ್ಮ ಅನಾದಿ ಸಂಸ್ಕೃತಿಗೂ ಇರುವ ಬಹುಮುಖ್ಯ ಭೇದಗಳಲ್ಲಿ ಇದು ಬಹಳ ಮಹತ್ತ್ವವುಳ್ಳದ್ದಾಗಿದೆ. ಈ ಕಾಲದಲ್ಲಿ ನಮ್ಮ ದೇಶದಲ್ಲಿ ತೋರಿಕೊಂಡಿ ರುವ ಅತೃಪ್ತಿಯ ಅವತಾರವಾದ ಹಾಹಾಕಾರಕ್ಕೂ, ಅಶಾಂತಿಗೂ, ವರ್ಗ ಕಲಹಗಳಿಗೂ ಮೂಲವೇನೆಂದರೆ ನಾವು ಈ ಸನಾತನ ಮೌಲ್ಯವನ್ನು ಕಡೆ ಗಣಿಸಿರುವುದೇ. ಸಂಸ್ಕೃತಿಯೆಂಬುದು ಹಸಿದ ಹೊಟ್ಟೆಯ ಆಧಾರದ ಮೇಲೆ ಎಂದೂ ನಿಲ್ಲತಕ್ಕದ್ದಲ್ಲ. ಜೀವನಾವಶ್ಯವಾದ ಅನ್ನದಂತಹ ದಿನ

ಬಳಕೆಯ ವಸ್ತುಗಳೂ, ಜೀವನವನ್ನು ಸುಂದರವನ್ನಾಗಿ ಸಾರ್ಥಕ ಗೊಳಿಸಿಕೊಳ್ಳಲು ಬೇಕಾಗುವ, ಸುವಿಚಾರ ಪರತೆಗೆ ಆಧಾರವಾದ, ಜ್ಞಾನವೂ, ಕೌಟುಂಬಿಕ ಜೀವನಕ್ಕೆ, ಅದರ ಶಾಂತಿಮಯ ವಾತಾವರಣಕ್ಕೆ ಮೂಲವಾದ ಸತಿ-ಪತಿಯರ ಅನ್ಯೋನ್ಯತೆಗೆ ಆಧಾರವಾದ ಕುಲೀನಸ್ತ್ರೀಯ, ಶೀಲ, ರೂಪ ವೆಂಬುದೂ ಮಾರಾಟಕ್ಕೆ ವಸ್ತುಗಳಾಗಬಾರದೆಂಬುದು ಭಾರತೀಯರ ವಿಶಿಷ್ಟ ಮೌಲ್ಯ. ಅನ್ನವಿಕ್ರಯ, ವೇದವಿಕ್ರಯ ರೂಪವಿಕ್ರಯಗಳು ಜೀವನವನ್ನು ಹದಗೆಡಿಸಿ, ನಾಶದತ್ತ ಒಯ್ಯುವ ನರಕ ಸಾಧನೆಗಳೆಂದು ಋಷಿಗಳು ಸಾರಿ ಹೇಳಿರುವುದು, ಹದಗೆಟ್ಟ ನಮ್ಮ ಇಂದಿನ ಜೀವನಕ್ಕೇ ಉದ್ದೇಶವಾಡಿ ಹೇಳಿದಂತಿದೆ: ಶ್ರೀ ವೇದವ್ಯಾಸರ ಕೂಟ ಶ್ಲೋಕಗಳಲ್ಲಿ ಪ್ರಸಿದ್ಧವಾದ ಈ ಶ್ಲೋಕವು ಇದನ್ನೇ ಬೋಧಿಸುತ್ತದೆ:

ಅಟ್ಟ ಶೂಲಾ ಜನಪದಾಃ ಶಿವ ಶೂಲಾಶ್ಚತುಷ್ಪಥಾ: ॥
ಕೇಶ ಶೂಲಾಃ ಸ್ತ್ರಿಯೋ ರಾರ್ಜ ಭವಿಷ್ಯಂತಿ ಯುಗಕ್ಷಯೇ ॥
(ಮಹಾಭಾರತ, ವನಪರ್ವ, ಅಧ್ಯಾಯ ೧೮೮ ಶ್ಲೋಕ, ೪೨)

("ಅಟ್ಟ" ವೆಂದರೆ ಅನ್ನವೆಂದು ಸಂಸ್ಕೃತದಲ್ಲಿ ಅರ್ಥ ಇದೆ. "ಶೂಲ" ವೆಂದರೆ "ವಿಕ್ರಯ" ವೆಂದೂ ಇದೆ. ಹಾಗೆಯೇ "ಶಿವ" ವೆಂದರೆ "ವೇದ" ವೆಂದೂ, "ಚತುಷ್ಪಥ" ರೆಂದರೆ "ಬ್ರಾಹ್ಮಣ" ರೆಂದೂ, "ಕೇಶ" ವೆಂದರೆ "ಸ್ತ್ರೀಯೋನಿ"—"ಭಗ" ಎಂದೂ ಗೂಢಾರ್ಥಗಳಿವೆ.

ಅಟ್ಟಮನ್ನಂ ಶಿವೋ ವೇದೋ ಬ್ರಾಹ್ಮಣಾಶ್ಚ ಚತುಷ್ಪಥಾಃ ।
ಕೇಶೋ ಭಗಂ ಸುವಿಖ್ಯಾತಂ ಶೂಲಂ ತದ್ವಿಕ್ರಯಂ ವಿದುಃ ॥

ಎಂದು ಪೂರ್ವಿಕರ ವ್ಯಾಖ್ಯಾನ ಸಂಕ್ಷೇಪ). ಹೀಗೆ ಇದು ಮಾರ್ಕಂಡೇಯರು ಧರ್ಮರಾಜನಿಗೆ ಧರ್ಮ ಬೋಧೆ ಮಾಡಿದ ಪ್ರಸಂಗದಲ್ಲಿ ಉಕ್ತವಾಗಿ, ಈ ಅರ್ಥವನ್ನು ಕೊಡುತ್ತದೆ: "ಯುಗಕ್ಷಯ ಕಾಲವಲ್ಲಿ, ಜನರು ಹಸಿವೆಯ ಬಾಧೆಗೆ ಒಳಗಾಗಿರುತ್ತಾರೆ; (ಕಾರಣ, ಅನ್ನವು ಮಾರಾಟದ ವಸ್ತುವಾಗುತ್ತದೆ). ಬ್ರಾಹ್ಮಣರು ವೇದವನ್ನು ಮಾರಾಟ ಮಾಡುವವರಾಗುತ್ತಾರೆ. (ಅಂದರೆ ಎಲ್ಲರಿಗೂ ಇದು ದೊರೆಯದಂತಾಗುತ್ತದೆ). ಸ್ತ್ರೀಯರು (ವಿವಾಹಿತರಾದಿದ್ದರೂ) ಶೀಲವನ್ನು ಮಾರಿ ಜೀವನ ನಡೆಸುತ್ತಾರೆ." (ಅಥವಾ

ಚತುಷ್ಪಥಗಳು–ನಾಲ್ಕು ರಸ್ತೆಗಳು ಸೇರುವ ಕಡೆಗಳು–ವಿಟವಾರಾಂಗನೆಯ ರಿಂದ ಕೂಡಿರುತ್ತವೆ, ಎಂದೂ ವಿಶೇಷ ಅರ್ಥವಿದೆ. )

ಭಾರತೀಯರ ಜೀವನಕ್ರಮದಲ್ಲಿ, ಹಣಕ್ಕಾಗಿ ವಿದ್ಯೆಯನ್ನು ಮಾರುವ ಸಂಬಳ ಪಡೆದ "ಅಧ್ಯಾಪಕ"ನ ಕಲ್ಪನೆಯೂ, ಹಣಕ್ಕಾಗಿ ಅನ್ನವನ್ನು ಮಾರುವ "ಹೋಟೆಲು"ಗಳ ಕಲ್ಪನೆಯೂ, ಸ್ತ್ರೀಯರ ರೂಪವು ಪ್ರದರ್ಶನಕ್ಕಾದಿಯೇ ಪ್ರಕೃತಿ ನಿರ್ಮಿತವೆಂಬುದೂ ಕಾಮ ಪ್ರಚೋದನೆಯನ್ನುಂಟು ಮಾಡುವ ರೀತಿಯಲ್ಲಿ ಧರಿಸುವ ಹೊಸ ಹೊಸ ದೂದರಿಯ ಉಡಿಗೆ ತೊಡಿಗೆ ಗಳೂ ಅಥವಾ ಇವುಗಳ ಅಭಾವವೇ ರೂಪ ಪೋಷಕವೆಂಬ ಕಲ್ಪನೆಯೂ, ಈಚೆಗೆ ಪರಕೀಯರ ಪ್ರಭಾವದಿಂದ ಬಂದು ಸೇರಿಕೊಂಡಿದ್ದು ನಮ್ಮ ಜೀವನ ಕ್ರಮಕ್ಕೆ, ಧ್ಯೇಯಗಳಿಗೆ, ಆರೋಗ್ಯಕ್ಕೆ, "ಕ್ಯಾನ್ಸರ್" (Cancer) ಎಂಬ ರೋಗದಂತಿವೆ. "ಇದರಲ್ಲಿ ಏನು ತಪ್ಪು ?" ಎಂದು ವಾದಿಸುವವರ ಸಂಖ್ಯೆ ಬೆಳೆಯುತ್ತಿರುವುದು, ಇದು ಗುಣವಾಗಲಾರದ ರೋಗವೋ ಎಂಬ ಸಂದೇಹ ವನ್ನೇ ಹೆಚ್ಚು ಉಂಟು ಮಾಡುವಂತಿದೆ. ಇವರಿಗೆ ಉತ್ತರವನ್ನು ಹೀಗೆ ಹೇಳ ಬಹುದು. ಮಾರಾಟ ಎಂದರೆ "ಮೌಲ್ಯ"ಗಳ ಮೇಲೆ ಹಣವೆಂಬ ಪಿಶಾಚಿ ಯನ್ನು ಕೂಡಿಸಿ ಪೂಜೆ ಮಾಡಿದಂತೆ ಆಗುತ್ತದೆ, ಎಂಬುದನ್ನು ಅನೇಕರು ಪರಿಗಣಿಸಿದಂತಿಲ್ಲ. "ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" (ಗೀತಾ ನಾಲ್ಕನೆಯ ಅಧ್ಯಾಯ)– "ಜ್ಞಾನಕ್ಕೆ ಸಮವಾಗಿ ಪವಿತ್ರವಾದದ್ದು ಮತ್ತೊಂದು ಇಲ್ಲ" – ಎಂಬುದು ನಮ್ಮ ಮುಖ್ಯ ಸನಾತನಧ್ಯೇಯಗಳಲ್ಲಿ ಒಂದು. ಈ ಜ್ಞಾನವು "ಹಣಕ್ಕೆ" ಮಾರಾಟದ ವಿಷಯ ಎಂದು ಭಾವಿತ ವಾದರೆ, ನಮ್ಮ ಧ್ಯೇಯ ನಾಶವಾಗಿ ಜ್ಞಾನಕ್ಕಿಂತ ಮೇಲ್ಪಟ್ಟದ್ದು "ಹಣ" ಎಂಬುದನ್ನು ಒಪ್ಪಿದಂತಾರಿ, ಜ್ಞಾನಾರಾಧನೆ ಆಗಬೇಕಾದ ಕಡೆಗಳಲ್ಲಿ "ಹಣ"ವೇ ಆರಾಧಿಸಲ್ಪಟ್ಟಂತಾಗುವುದು.

ಪೂರ್ವಕಾಲದಲ್ಲಿ ಜ್ಞಾನವು ಕೇವಲ ಕೆಲವರ ಸ್ವತ್ತೇ ಆದಿತ್ತೆಂದೂ ಈಗೀಗ ಅದು ಎಲ್ಲರಿಗೂ "ಸಿಕ್ಕಿ"ರುವುದಕ್ಕೆ ಪಾಶ್ಚಾತ್ಯಕ್ರಮದ "ಉದಾರ" ವಿದ್ಯಾಭ್ಯಾಸವೇ ಕಾರಣವೆಂದೂ ಭಾವಿಸುವವರು ಎಷ್ಟೊಂದು ಆತ್ಮವಂಚನೆ ಗೀಡಾಗಿದ್ದಾರೆಂಬುದನ್ನು ಗಮನಿಸಬೇಕಾಗಿದೆ. ಇಂದಿನ ಜೀವನವನ್ನು

ಹೊತ್ತು ನಿಂತಿರುವ ಅನೇಕ ಭ್ರಮೆಗಳಲ್ಲಿ ಇದೂ ಒಂದು ಮುಖ್ಯವಾದು ದಾಗಿದೆ. ಪೂರ್ವ ಕಾಲದಲ್ಲಿ ವೇದವನ್ನು ಕೆಲವೊಂದು ಅರ್ಹತೆಗಳನ್ನು ಪಡೆದವರೇ ಅಭ್ಯಸಿಸುತ್ತಿದ್ದುದು ನಿಜ. ಆದರೆ ಇದರ ಫಲ ಎಲ್ಲರಿಗೂ ದೊರೆಯುತ್ತಿರಲಿಲ್ಲವೆಂಬುದು ಕಟ್ಟು ಕಥೆ. ಹಾಗಾಗಿದ್ದರೆ ಕನ್ಯಾಕುಮಾರಿಯಿಂದ ಕಾಶ್ಮೀರದ ವರೆಗೆ, ಬಂಗಾಳದಿಂದ ಪಂಜಾಬದ ವರೆಗೆ ಒಂದೇ ಸಂಸ್ಕೃತಿಯೂ, ಸತ್ಯ, ಧರ್ಮ, ಋತ, ಅಹಿಂಸೆ, ಶಾಂತಿ ಮುಂತಾದ ಪ್ರಧಾನ ವೈದಿಕ ಮೌಲ್ಯಗಳೂ, ರಾಮಾಯಣ ಮಹಾಭಾರತಾದಿ ಕಾವ್ಯಗಳೂ ಇವುಗಳನ್ನು ಆಧರಿಸಿದ ಏಕರೂಪ ಜೀವನ-ಕ್ರಮವೂ ಭಾಷಾ ಭೌಗೋಳಿಕಾದಿ ಭೇದಗಳ ನಡುವೆಯೂ ಪಸರಿಸಿ ಉಳಿದು ಬಂದದ್ದು ಹೇಗೆ ಎಂಬುದನ್ನು ಮನಸ್ಸಿಗೆ ಒಪ್ಪುವಂತೆ ವಿವರಿಸುವುದು ಸಾಧ್ಯವಾಗಲಾರದು. ವೇದಾಭ್ಯಾಸಕ್ಕೆ ಬೇಕಾದ ನಿರುಕ್ತ, ವ್ಯಾಕರಣ, ಮುಂತಾದ ಕಠಿಣ ಶಾಸ್ತ್ರಗಳ ಪರಿಶ್ರಮ ಎಲ್ಲರಿಗೂ ಆಗಲಾರದಾದುದರಿಂದ, ಸಮರ್ಥರಾದವರು ಮಾತ್ರ ಅದರಲ್ಲಿ ನುರಿತು, ಉಳಿದವರಿಗೆ ಅದರ ಪ್ರಯೋಜನವನ್ನು ನೀಡುತ್ತಿದ್ದರು. ಎಲ್ಲರೂ ಎಲ್ಲದರಲ್ಲಿಯೂ ನುರಿತಿರಬೇಕೆಂಬುದೂ, ಹಾಗಾದಾಗ ಮಾತ್ರ ಜ್ಞಾನ ಪ್ರಸಾರವಾಯಿತೆಂದು ಭಾವಿಸುವುದೂ ವಿವೇಕವಲ್ಲ. ಇದು ಯಾವುದೇ ಕಾಲದಲ್ಲಿಯೂ ಸಾಧ್ಯವಿಲ್ಲದುದು ಮಾತ್ರವಲ್ಲದೇ ಅಪೇಕ್ಷಣೀಯವೂ ಅಲ್ಲ. ಉದಾಹರಣೆಗೆ ಈ ಕಾಲದಲ್ಲಿ ವಿದ್ಯುಚ್ಛಕ್ತಿಯ ಉಪಯೋಗವನ್ನು ನೋಡೋಣ. ಎಲ್ಲರ ಮನೆಗೂ ಅವಶ್ಯವಾದದ್ದು ಬೆಳಕು. ಆದರೆ ಎಲ್ಲರೂ ವಿದ್ಯುಚ್ಛಕ್ತಿಯ ಉತ್ಪಾದನಾಕ್ರಮವನ್ನು ತಿಳಿಯಬೇಕಾಗಿಲ್ಲ. ಅದು ತಿಳಿದ ಹೊರತು ಬೆಳಕು ಬೆಳಕಾಗಲಾರದೆಂದು ವಾದಿಸುವುದು ಅವಿವೇಕವಲ್ಲವೆ ? ಹಾಗೆಯೇ ವಾಹನಾದಿ ಯಂತ್ರಗಳ ಚಾಲಕರು ಅದನ್ನು ನಡೆಸಲು ತಿಳಿದರೆ ಸಾಕು. ಮತ್ತೆ ಉಳಿದವರಿಗೆ ಇದೂ ಅವಶ್ಯವಿಲ್ಲ. ಎಲ್ಲರೂ ಯಂತ್ರ ನಿರ್ಮಾಪಕರಾಗುವ ಅವಶ್ಯಕತೆ ಇಲ್ಲ. ಕೆಲವರ ಶ್ರಮದಿಂದ ಇತರರು ಸುಖವನ್ನು ಹೊಂದಿ ಬಾಳುವಂತಾಗ ಬೇಕೆಂಬುದು ಸಹಜೀವನದ ಮುಖ್ಯ ತತ್ತ್ವ. ಎಲ್ಲರೂ ಎಲ್ಲ ವಿಷಯದಲ್ಲೂ ಒಂದೇ ವಿಧ ಶ್ರಮದಿಂದಲೇ ಜೀವಿಸ ಬೇಕೆಂದು ಆಸೆ ಪಡುವುದು ಒಬ್ಬರೊಬ್ಬರಲ್ಲಿ ಪರಸ್ಪರ ಅಪನಂಬಿಕೆಯನ್ನಷ್ಟೇ ಸೂಚಿಸುತ್ತದೆ, ಮತ್ತು ಸಹಬಾಳ್ವೆಯ ಆಧಾರವನ್ನೇ ಕಿತ್ತು ಹಾಕುತ್ತದೆ. ಅಷ್ಟು

ಕೂಟಗಳು ವೃದ್ಧಿಯಾದ ಮಾತ್ರದಿಂದ ಎಲ್ಲರಿಗೂ ಜ್ಞಾನ ದೊರಕಿಯೇ ಹೋಗಿದೆಯೇ ಎಂಬುದು ವಿಚಾರಣೀಯ. ಪಂಚಾಂಗಗಳೇನೋ ಎಲ್ಲ ಅಂಗಡಿಗಳಲ್ಲೂ ಎಲ್ಲ ಊರುಗಳಲ್ಲೂ ದುಡ್ಡು ಕೊಟ್ಟು ಕೊಳ್ಳುವವರೆಲ್ಲರಿಗೂ ದೊರಕುತ್ತದೆ, ನಿಜ. ಆದರೆ ಎಷ್ಟು ಜನರಿಗೆ ಖಗೋಳ ವಿಜ್ಞಾನ ಇದರಿಂದ ತಿಳಿಯಿತು ಎಂಬುದನ್ನು ನಮಗೆ ನಾವೇ ಕೇಳಿಕೊಳ್ಳಬೇಕಾಗಿದೆ. ಅಲ್ಲದೆ, ವಿದ್ಯಾರ್ಥಿಗಳ ಅಶಿಸ್ತು, ಅಧ್ಯಾಪಕರನೇಕರ ಜ್ಞಾನಪರಾಙ್ಮುಖತೆ, ರಾಜಕೀಯವು ವಿದ್ಯಾ ಕ್ಷೇತ್ರಗಳಲ್ಲಿ ಕಾಲಿರಿಸಿರುವುದು ಇತ್ಯಾದಿ ಅನಿಷ್ಟಗಳಿಗೆ ಯಾರು ಹೊಣೆ ? "ಗುರುಕುಲ ಪದ್ಧತಿ" ಇಂದು ಬೇಕಾಗಿದೆ ಎಂದು ಅಲ್ಲಲ್ಲೇ ಕೆಲವು ಮಹನೀಯರುಗಳು "ಸಮಯೋಚಿತವಾಗಿ" ವೇದಿಕೆಗಳ ಮೇಲೆ ಆಡಿದರೂ, ಅಧಿಕಾರ ಕೈಯಲ್ಲಿದ್ದರೂ, ಏನು ಮಾಡದಿರುವುದಕ್ಕೆ ಯಾರು ಹೊಣೆ ? ದುಡ್ಡಿಗಾಗಿ ದುಡಿಯುವ ಅಧ್ಯಾಪಕನಿಗೂ, ಅದೇ ದುಡ್ಡಿಗಾಗಿ ದುಡಿಯುವ ಕಲ್ಲು ಒಡೆಯುವ ಒಡ್ಡನಿಗೂ ಏನು ವ್ಯತ್ಯಾಸ ? ಹೀಗೆ ವಿದ್ಯೆಯ ತಲೆಯಲ್ಲಿ ಹಣವನ್ನು ಹೊರಿಸಿದ್ದುದರಿಂದಲೇ ವಿದ್ಯೆಗೂ, ಅಧ್ಯಾಪಕನಿಗೂ ಸಮಾಜ ಸೇವೆಯ, ಸುಧಾರಣೆಯ, ವಿಷಯದಲ್ಲಿರುವ ಶಕ್ತಿಯನ್ನು ಕಳೆದು ಹಾಕಿದಂತೆ ಎಂಬುದು ಎಲ್ಲರಿಗೂ ಅರ್ಥವಾಗುವ ವಿಷಯ.

ಇದಕ್ಕೊಂದು ಪರೀಕ್ಷೆ : ಒಂದು ದೇಶದಲ್ಲಿ ಎಲ್ಲ ವೃತ್ತಿಯ ಜನರಿಗೂ ಜೀವನ ಅವಶ್ಯಕ್ಕೆ ಬೇಕಾಗುವಂತೆ ಒಂದೇ ಕನಿಷ್ಠ ಮಿತಿಯ ಸಂಬಳವನ್ನು ಗೊತ್ತು ಮಾಡಿದರೆ, ಉದಾಹರಣೆಗೆ ರೈಲ್ವೆ ಪೋರ್ಟರನಿಗೂ, ಪೋಸ್ಟ್ ಜವಾನನಿಗೂ, ವಿಶ್ವವಿದ್ಯಾಲಯಗಳ ವಿಭಾಗಗಳ ಮುಖ್ಯಸ್ಥರಿಗೂ ಒಂದೇ ಸಂಬಳವಾದರೆ, ಇಂದೇ ಅನೇಕರು ವಿದ್ಯಾಸ್ಥಾನಗಳನ್ನು ಬಿಟ್ಟು ರೈಲ್ವೆ ಪೋರ್ಟರನ ಕೆಲಸದಿಂದಲೇ ತೃಪ್ತರಾಗುವುದರಲ್ಲಿ ಸಂದೇಹವಿಲ್ಲ. ಇದು ಅತಿಶಯೋಕ್ತಿಯಲ್ಲ. ದುಡಿತದಲ್ಲಿ ಕೆಳ ಮಿತಿಯೂ ಹಣದಲ್ಲಿ ಮೇಲಿನ ಮಿತಿಯೂ ಇರಲೆಂದು ಅನೇಕರ ಆಸೆ. ವಿದ್ಯೆಯ ಮೇಲೆ ಹಣವನ್ನು ಹೊರಿಸಿರುವುದೇ ಅರ್ಹತೆಯಿಲ್ಲದವರೂ ಅದಕ್ಕಾಗಿ ಗುದ್ದಾಟ ಮಾಡುವಂತೆ ಮಾಡುತ್ತಿರುವ ತಂತ್ರ. ಹಣವನ್ನು ವಿದ್ಯೆಯಿಂದ ಬೇರ್ಪಡಿಸಿ ನೋಡೋಣ, ಗುದ್ದಾಟವಮಾಯವಾಗುತ್ತದೆ. ಸರಿಯಾಗಿ ಜ್ಞಾನ

ನಿಷ್ಠೆ ಇರುವವನು ಮಾತ್ರ ಇದರಿಂದ ಅವನು ಸಾಯುವಂತಾದರೂ ಬಿಡದೆ, ಜ್ಞಾನ ಪ್ರಸಾರ ದೀಕ್ಷಿತನಾಗಿಯೇ ತೃಪ್ತಿಯಿಂದ ಸಾಯುವನು. ವಿದ್ಯೆ ಪರಂಪರೆಯಿಂದ ಬಂದಿರುವುದೇ ಹೀಗೆ ನಮ್ಮ ದೇಶದಲ್ಲಿ.

ಅನ್ನದ ವಿಷಯವೂ ಹೀಗೆಯೇ. ಪಾಶ್ಚಾತ್ಯರ ಸಮಾಜ "ಸ್ಪರ್ಧೆ" (Competition) ಎಂಬ ತತ್ವವನ್ನು ಆಧರಿಸಿ ನಿಂತಿದೆ. ನಮ್ಮ ಸಮಾಜ "ಸಹಕಾರ" ಎಂಬ (Co-operation) (ವರ್ಣ) ತತ್ತ್ವವನ್ನೇ ಆಧರಿಸಿ, ನೆನ್ನೆ ಮೊನ್ನೆಯ ತನಕ ನಿಂತಿತ್ತು. ಇದು ಅನಾಗರೀಕತೆಯ ಲಕ್ಷಣವೆಂದು ಬಗೆದ ನಮ್ಮ "ಮುಂದಾಳುಗಳು" ನಮ್ಮ ಸಮಾಜವನ್ನು ಯಾವ ದಿಕ್ಕಿನ ಕಡೆಗೆ ಒಯ್ಯುತ್ತಿದ್ದಾರೆಂಬುದು, ಇನ್ನೂ ದಿಕ್ಕುಗೆಡದವರಿಗೆ ತಿಳಿಯುತ್ತಿದೆ. ಒಬ್ಬನಿಗಿಂತ ಒಬ್ಬನು ಸುಸಂಸ್ಕೃತನಾಗುವ ವಿಷಯದಲ್ಲಿ ಸ್ಪರ್ಧೆಯಿರಲಿ, ಬೇಡ ವೆಂದು ಯಾರೂ ಹೇಳಲಾರರು. ಆದರೆ "ನೆರೆಯವನು ಹಸಿವಿನಿಂದ ಸಾಯಲಿ, ನಾನು ಮಾತ್ರ ಅವನ ಅನ್ನವನ್ನು ಕಿತ್ತುತಿನ್ನೋಣ"ವೆಂಬ ವರ್ಗಕಲಹ ಮೂಲವಾದ ಅನ್ನ-ಸ್ಪರ್ಧೆಯು ಸಮಾಜಕ್ಕೆ ಖಂಡಿತ ಹಾನಿಕರ. ಈ ಶತ ಮಾನದ ವಿಖ್ಯಾತ ತತ್ತ್ವಜ್ಞಾನಿಯೆಂದೆನಿಸಿದ, ದೀರ್ಘಾಯುಷಿಯಶಾಗಿ ಬಾಳಿ ಬದುಕಿದ, ಬರ್ಟ್ರೆಂಡ್ ರಸ್ಸೆಲ್ ಮಹಾಶಯನು ಸ್ವಯಂ ಪಾಶ್ಚಾತ್ಯನಾಗಿ ದ್ದರೂ, ಪಾಶ್ಚಾತ್ಯ ಜೀವನದ ಅಡಿಗಲ್ಲೆನಿಸಿರುವ ಈ ಸ್ಪರ್ಧೆಯ ತತ್ತ್ವವನ್ನು ಉಗ್ರವಾಗಿ ಹೀಗೆ ಟೀಕಿಸಿದ್ದಾನೆ :

"ಹೊಟ್ಟೆಯುರಿ ಪಡುವ ಸ್ವಭಾವದ ಪರಿಣಾಮಗಳಲ್ಲಿ ಮುಖ್ಯವಾದ ದ್ದೊಂದು ಯಾವುದೆಂದರೆ, ವೈಯ್ಯಕ್ತಿಕವಾಗಿಯೂ, ರಾಷ್ಟ್ರೀಯವಾಗಿಯೂ, ಆರ್ಥಿಕ ಸ್ವಾರ್ಥತೆಯ ಬಗೆಗೆ ಸಂಪೂರ್ಣ ತಪ್ಪು ಕಲ್ಪನೆಯನ್ನುಂಟುಮಾಡಿ ರುವುದು.....ಪ್ರತಿಯೊಂದು ರಾಷ್ಟ್ರಕ್ಕೂ ಇಂದು ಹೀಗೆ ಮನವರಿಕೆಯಾಗಿದೆ..... "ತನ್ನ ಆರ್ಥಿಕ ಸ್ವಾರ್ಥತೆಯು ಮತ್ತೊಂದರದಕ್ಕೆ ಅವಶ್ಯವಾಗಿ ವಿರುದ್ಧವಾ ಗಿಯೇ ಇದೆ, ಅದು ಹಾಳಾದರೆ ಮಾತ್ರ ತಾನು ಖಂಡಿತ ಲಾಭಹೊಂದುವುದು ಸಾಧ್ಯ" ಇತ್ಯಾದಿ. *[Ideas That Have Harmed Mankind]*

ಪ್ರಭಾವಶಾಲಿಯಾದ ಆಂಗ್ಲ ಕವಿಯೊಬ್ಬನು (ಈ ಶತಮಾನದವನು) ಕೇಳುತ್ತಾನೆ : (Why should we have to fight for a living? Living Should be as free to a man as to a bird...)

"ಉಸಿರು ಹಿಡಿದು ಬದುಕಲು ನಾವೇಕೆ ಸ್ಪರ್ಧೆಯಿಂದ ಪರಸ್ಪರ ಹೋರಾಡ-ಬೇಕು ? ಬದುಕೆಂಬುದು ಪಕ್ಷಿಗಳಿಗೆ ಹೇಗೋ ಹಾಗೆ ಮನುಷ್ಯನಿಗೂ ಉಚಿತ-ವಾಗಿ ಆಗಬೇಕು"

(Bread should be free,
Shelter should be free,
Fire should be free,
To all and any body, all and anybody, all over the world.)

"ಅನ್ನವು ಉಚಿತವಾಗಬೇಕು, ನೆರಳು, ಆಶ್ರಯ ಉಚಿತವಾಗಬೇಕು, ಬೆಂಕಿ ಹಾಗೇ ಆಗಬೇಕು, ಎಲ್ಲರಿಗೂ, ಯಾವನೊಬ್ಬನಿಗೂ..... ಪ್ರಪಂಚದಲ್ಲೆಲ್ಲ."

(Work is the clue to a man's life.
But it must be free work, not done just for money, but for fun.)

"ದುಡಿಮೆಯು ಮಾನವನ ಜೀವನಕ್ಕೆ ಮಾರ್ಗ ದರ್ಶಕ ಆಗಬೇಕು. ಆದರೆ ಅದು ಸ್ವಯಂಪ್ರೇರಿತ ದುಡಿಮೆ ಆಗಬೇಕು. ಹಣಕ್ಕಾಗಿ ಮಾಡಿದುದಲ್ಲ; ಆನಂದಕ್ಕಾಗಿ, ವಿನೋದಕ್ಕಾಗಿ".

(Money is our madness, our vast collective madness)

"ಹಣವು ನಮ್ಮ ಹುಚ್ಚುತನ. ನಮ್ಮ ಅಗಾಧ, ಸಾಮೂಹಿಕ ಹುಚ್ಚುತನ"

(The root of our present evil is that we buy and sell.
Ultimately, we are all busy buying and selling one another.)

"ನಮ್ಮ ಇಂದಿನ ಅನ್ಯಾಯಗಳ ಮೂಲ, ನಮ್ಮ "ಕೊಳ್ಳಾಟ", "ಮಾರಾಟ", ಕೊನೆಗೆ ನಾವೆಲ್ಲ ಒಬ್ಬರನ್ನೊಬ್ಬರು "ಕೊಂಡು" "ಮಾರುವು"ದಲ್ಲಿ ಬಿಡುವಿಲ್ಲದೆ ಆಸಕ್ತರಾಗುತ್ತೇವೆ."

*The complete poems of* D. H. Lawrence,
Vol II ದಿಂದ ಆರಿಸಿದ ಸಾಲುಗಳು]

ಹೀಗೆ ವಿವೇಕಿಗಳಾದ ಕೆಲವು ಪಾಶ್ಚಾತ್ಯರಿಗೆ ಈದೀಗ ತಿಳಿಯುತ್ತಿರುವ ಈ ಸುಖ ಜೀವನ ಮರ್ಮ, ಧರ್ಮ, ನಮ್ಮ ಋಷಿಗಳಿಂದ ಹಿಂದೆಯೇ ಸಾರ್ವಕಾಲಿಕ, ಸಾರ್ವದೇಶಿಕ, ಧರ್ಮವೆಂದು ಸಾರಲ್ಪಟ್ಟದ್ದನ್ನು ಇನ್ನಾದರೂ, ಭಾರತೀಯರಾದ ನಾವು ಮನಗಾಣಬೇಕು.

ತೈತ್ತಿರೀಯೋಪನಿಷತ್ತಿನಲ್ಲಿ "ಅತಿಥಿಯನ್ನು ದೇವರೆಂದು ತಿಳಿದು ಪೂಜಿಸು" ಎಂದು ಕರೆಕೊಟ್ಟಿರುವುದು ಗಮನೀಯ. ನಿನ್ನೆಮೊನ್ನೆಯತನಕ ಸಾಮಾನ್ಯವಾಗಿ ಎಲ್ಲ "ಪೂರ್ವ ದೇಶಗಳೂ", ವಿಶೇಷವಾಗಿ ನಮ್ಮ ಭಾರತ ಭೂಮಿಯೂ ಅತಿಥಿ ಸತ್ಕಾರಕ್ಕೆ ಹೆಸರಾದದ್ದೆಂದು ಈ ಹಿಂದೆ ಎಲ್ಲ ಪಾಶ್ಚಾತ್ಯ ಚರಿತ್ರಕಾರರೂ ಒಪ್ಪಿ ಬರೆದಿದ್ದಾರೆ. ನಮ್ಮ ಈ ಚಾರಿತ್ರ್ಯಕ್ಕೆ ಈ ವೇದ ಸಂದೇಶವೇ ಆಧಾರ. ಇದಲ್ಲದೆ ಅನ್ನಪ್ರಶಂಸಾಪರವಾದ ಇತರ ವಾಕ್ಯಗಳೂ ವೇದದಲ್ಲಿ, ಇತಿಹಾಸ ಪುರಾಣಗಳಲ್ಲಿ ವಿಪುಲವಾಗಿವೆ. ಬ್ರಹ್ಮಾನಂದವಲ್ಲೀ ಉಪನಿಷತ್ತಿನಲ್ಲಿ ಹೀಗೆ ಕೊಂಡಾಡಿದೆ: "ಭೂಮಿಯಲ್ಲಿರುವ ಎಲ್ಲ ಪ್ರಾಣಿಗಳೂ ಅನ್ನದಿಂದಲೇ ಹುಟ್ಟಿವೆ, ಬದುಕಿವೆ, ಅನ್ನದಲ್ಲೇ ಲಯವಾಗುತ್ತವೆ. ಆದುದರಿಂದ ಪ್ರಾಣಿಗಳಲ್ಲಿ ಅನ್ನವೇ "ಜ್ಯೇಷ್ಠ". ಮತ್ತು ಎಲ್ಲ ಔಷಧಿಗಳಲ್ಲಿ ಹಿರಿಯದು, ("ಊಟ ಬಲ್ಲವನಿಗೆ ರೋಗವಿಲ್ಲ" ಎಂಬ ಗಾದೆಯು ಈ ವೇದ ವಾಕ್ಯದ ಅಪರಾವತಾರ.) ಹೀಗೆ ಅನ್ನವು ಬ್ರಹ್ಮಸ್ವರೂಪಿ. ಹೀಗೆಂದು ಉಪಾಸಿಸುವವನಿಗೆ ಅನ್ನ ಎಲ್ಲಾದರೂ ದೊರೆಯುತ್ತದೆ. ತಿನ್ನಲ್ಪಟ್ಟು, ತಿನ್ನುವುದರಿಂದ—(''ಅದ್'' ಧಾತುವಿನಿಂದ)— ಅನ್ನ ಎಂದಾಗಿದೆ.

ಭೃಗುವಲ್ಲಿಯಲ್ಲಿಯೂ ಇದನ್ನೇ ಹೇಳಿದೆ; ''ಅನ್ನವನ್ನು ನಿಂದಿಸ ತಕ್ಕದ್ದಲ್ಲ. ಇದು ವ್ರತ. (ಏಕೆಂದರೆ ಜಗತ್ತೆಲ್ಲ ಅನ್ನಮಯ, ಹೇಗೆಂದರೆ) ಪ್ರಾಣ ಅನ್ನ: ಶರೀರವು ಇದನ್ನು ತಿನ್ನುವ ಅನ್ನಾದ. (ಒಂದು ದೃಷ್ಟಿಯಿಂದ) ಪ್ರಾಣದಲ್ಲಿ ಶರೀರವು ಪ್ರತಿಷ್ಠಿತವಾಗಿದೆ. (ಇನ್ನೊಂದು ದೃಷ್ಟಿಯಿಂದ) ಶರೀರದಲ್ಲಿ ಪ್ರಾಣವು ಪ್ರತಿಷ್ಠಿತವಾಗಿದೆ. (ಹೀಗೆ) ಅನ್ಯೋನ್ಯಾಶ್ರಯದಿಂದ ಅನ್ನವು ಅನ್ನಾದದಲ್ಲಿ ಪ್ರತಿಷ್ಠಿತವಾಗಿದೆ. ಈ ರೀತಿ ತಿಳಿಯು

ವವನು ಪ್ರತಿಷ್ಠಿತನಾಗುವನು, ಅನ್ನವಂತನಾಗುವನು. ಅನ್ನಾದನೂ ಆಗುವನು. ಪುತ್ರ ಪಶು ಸಮೃದ್ಧಿಯಿಂದ, ಬ್ರಹ್ಮವರ್ಚಸ್ಸಿನಿಂದ "ದೊಡ್ಡ" ವನಾದಿ, ಕೀರ್ತಿವಂತನಾಗುತ್ತಾನೆ."

"ಅನ್ನವನ್ನು ನಿರಾಕರಿಸತಕ್ಕದ್ದಲ್ಲ. (ಚೆಲ್ಲಬಾರದು). ಅದು ವ್ರತ" "ಅನ್ನವನ್ನು ಬಹುವಾಗಿ ಮಾಡಬೇಕು. ಅದು ವ್ರತ. ಮನೆಯಲ್ಲಿ ವಸತಿಯನ್ನು ಬಯಸಿ ಬಂದ ಯಾವನನ್ನೂ ನಿರಾಕರಿಸಬಾರದು. ಅದು ವ್ರತ. ಯಾವುದೇ ವಿಧದಿಂದಲಾದರೂ (ಸಾತ್ತ್ವಿಕ ಕ್ರಮದಿಂದ) ಬಹಳ ಅನ್ನವನ್ನು ಸಂಪಾದಿಸಿ ತೀರಬೇಕು (ಅತಿಥಿ ಸತ್ಕಾರಕ್ಕಾಗಿ). ಹೀಗೆ ಮಾಡಿದ (ಮನುಷ್ಯನಾದ) ಇವನಿಗೆ ಅನ್ನವು ಸಿದ್ಧವಾಗಿ(ಯೇ) ಇದೆಯೆಂದು (ತಿಳಿದವರು) ಹೇಳುತ್ತಾರೆ." ಇಂತಹ ಅನ್ನವು ಮತ್ತೊಬ್ಬನಿಗೆ, "ಮುಖತಃ" "ಮಧ್ಯತಃ" "ಅನ್ತತಃ" ಎಂದು ಹೇಳಲ್ಪಟ್ಟಿರುವಂತೆ ಸಾತ್ತ್ವಿಕ, ರಾಜಸ, ತಾಮಸ ಎಂಬ ಶ್ರದ್ಧಾತ್ರಯದ ಹಿನ್ನೆಲೆಯಲ್ಲಿ ದಾನ ಮಾಡಲ್ಪಟ್ಟರೆ, ಅದೇ ವಿಧವಾದ ಭಾವನೆಗಳಿಂದ ಅನ್ನದಾನ ಮಾಡಿದ ಅವನಿಗೆ ಉತ್ತಮಾಧಮಮಧ್ಯಮ ಫಲ ರೂಪವಾದ "ಅನ್ನ"ವು ಬೇರೆ ಕಡೆಯಲ್ಲಿ ಸಿಗುವುದೆಂದು ತರ್ಕಬದ್ಧವಾಗಿ ಉಕ್ತವಾಗಿದೆ. ಇದೇ ಉಪನಿಷತ್ತಿನ ಕೊನೆಯಲ್ಲಿ ಬ್ರಹ್ಮಸ್ವರೂಪಿಯಾದ "ಅನ್ನವು" ನಿರಂತರವಾಗಿ ಮಾಡುತ್ತಿರುವ ವೈಯಕ್ತಿಕವಾದ ಸಾಮಗಾನವನ್ನು ಸಂಗ್ರಹಿಸಿದೆ. ಅನ್ನವು ಹೇಳುತ್ತಿದೆ: ಅಹೋ! ಅಹೋ! ಅಹೋ! ನಾನು ಅನ್ನ, ನಾನು ಅನ್ನ, ನಾನು ಅನ್ನ! ನಾನೇ ಅನ್ನಾದ. ನಾನೇ ಅನ್ನಾದ, ನಾನೇ ಅನ್ನಾದ. ನಾನೇ ಶ್ಲೋಕಕರ್ತೃ, ಶ್ಲೋಕ ಕರ್ತೃ, ಶ್ಲೋಕ ಕರ್ತೃ. ಋತಕ್ಕಿಂತ ಮೊದಲು ಹುಟ್ಟಿದವನು ನಾನು. ದೇವತೆಗಳಿಗೂ ಹಿರಿಯನು ನಾನು. ಅಮೃತತ್ತ್ವಕ್ಕೆ ನಾಭಿಯಾಗಿ ಕೇಂದ್ರವಾಗಿರುವವನೂ ನಾನೇ. ನನ್ನನ್ನು ಅನ್ನಾರ್ಥಿಗಳಿಗೆ ಕೊಡುವುದೇ ನನ್ನನ್ನು ಕಾಪಾಡುವ ವಿಧಾನ. ಇತರರಿಗೆ ಅನ್ನವನ್ನು ಕೊಡದೇ ತಿನ್ನುವವನನ್ನು ನಾನು ತಿನ್ನುತ್ತೇನೆ. (ಹೀಗೆ) ಸಮಸ್ತ ಲೋಕವನ್ನು (ಬ್ರಹ್ಮಸ್ವರೂಪಿಯಾದ ನಾನೇ) ಉಪಸಂಹಾರ ಮಾಡುತ್ತೇನೆ. ಸುವರ್ಣಮಯವಾದ ಸೂರ್ಯಜ್ಯೋತಿಯೇ ನಾನು."

... ತೈತ್ತಿರೀಯ ಬ್ರಾಹ್ಮಣದಲ್ಲೂ (II-4-6) ಅನ್ನ ಪ್ರಶಂಸೆಯಿದ್ದು "ಅನ್ನವೇ ಪ್ರಾಣ. ಅನ್ನವೇ ಮೃತ್ಯು" ಎಂದು ಸಿದ್ಧಾಂತ ಮಾಡಿರುವುದು ಮಾರ್ಮಿಕವಾಗಿದೆ. "ಅನ್ನಂ ಪ್ರಾಣಮನ್ನಮಪಾನಮಾಹುಃ । ಅನ್ನಂ ಮೃತ್ಯುಂ ತಮು ಜೀವಾತುಮಾಹುಃ ।.... ಸತ್ಯಂ ಬ್ರವೀಮಿ ॥" ಎಂದರೆ, ಇದರ ಭಾವ ಹೀಗಿದೆ: ಯಾವ ಸಮಾಜದಲ್ಲಿ ಅನ್ನವೂ, ದಾತೃವೂ ಸಮೃದ್ಧವೋ ಅಲ್ಲಿ ಅನ್ನವು ಸಮಾಜದ ಉಸಿರಾಗಿ, ಪ್ರಾಣವಾಗಿ, ಅದನ್ನು ಬದುಕಿಸುತ್ತದೆ. ಹಾಗಲ್ಲದೆ, ಎಲ್ಲಿ ಇದು ವಿಕ್ರಯಕ್ಕೆ ವಸ್ತುವಾಗಿ, ಹಾಹಾ ಕಾರಕ್ಕೆ ಎಡೆ ಮಾಡಿ ಕೊಟ್ಟ ಸಮಾಜ ಶೋಷಣೆಗೆ ಮೂಲವಾಗುವುದೋ ಅಲ್ಲಿ ಅನ್ನವೇ ಮೃತ್ಯುವಾಗಿ ಎಲ್ಲರನ್ನೂ (ಲಾಭ ಬಡುಕರನ್ನೂ ಪ್ರಭಾರಿ ಗಳನ್ನೂ, ಅವರು ತಿಂದು ಗಟ್ಟಿಯಾಗಿದ್ದರೂ) ಕೊಲ್ಲುತ್ತದೆ. ಇದು ಸತ್ಯ ಎಂದು ವೇದ ದರ್ಶನ. ನಮ್ಮ ಅನುಭವಕ್ಕೆ ಈ ಮಾತು ಎಷ್ಟೊಂದು ಸಮಂಜಸವಾಗಿದೆಯೆಂದು ಹೆಚ್ಚು ವಿವರಿಸುವ ಅಗತ್ಯವಿರಲಾರದು.

ಒಂದು ಕಾಲದಲ್ಲಿ ಉಚಿತವಾಗಿ ಅನ್ನದಾನ ಮಾಡುವ ಅನ್ನದ ಸತ್ರಗಳು ನಮ್ಮ ದೇಶಾದ್ಯಂತ ಹರಡಿಕೊಂಡು ರಾಜರುಗಳಿಂದ ಪೋಷಿತವಾಗಿತ್ತೆಂಬುದು ಚರಿತ್ರೆಯಿಂದ ದೃಢ ಪಡುತ್ತದೆ. ರಾಜನ ಮುಖ್ಯ ಕರ್ತವ್ಯ ಪ್ರಜಾಪಾಲನೆ; ಹೇಗಾದರೂ ಅಧಿಕಾರದಲ್ಲಿ ಉಳಿಯಬೇಕೆಂಬುದಲ್ಲ. ಪ್ರಜೆಗಳ ತೃಪ್ತಿಗೆ ಅನ್ನದಾನ ಬಹುಮುಖ್ಯ. ಇದಕ್ಕಾಗಿ ನೆಪಹೂಡಿ ಬಹಳ ದೊಡ್ಡ ಪ್ರಮಾಣ ದಲ್ಲಿ ಅನೇಕ ವರ್ಷಗಳ ವರೆಗೆ ನಡೆಯುವ ಯಜ್ಞಗಳು ಏರ್ಪಡುತ್ತಿದ್ದವು. ಮಹಾಭಾರತದಲ್ಲಿ ಬರುವ ಜನಮೇಜಯನ ಸರ್ಪಯಾಗವೂ, ಶೌನಕರ (ಅನ್ನ) ಸತ್ರವೂ ಜಗದ್ವಿಖ್ಯಾತವಾದುವು. ಇದೊಂದು ಜೀವನಕ್ರಮವಾಗಿ, ಇದರ ಸುತ್ತ ಸಾಂಸ್ಕೃತಿಕ ಚಟುವಟಿಕೆಗಳು ಹೆಣೆದುಕೊಂಡು ಮಾನವರೆಲ್ಲರೂ ಆಧ್ಯಾತ್ಮಿಕ ಉನ್ನತಿಗೆ ಶ್ರಮಿಸಲು ವಿಶೇಷ ಅವಕಾಶವಿತ್ತು. ವಿದ್ಯಾಕೇಂದ್ರಗ- ಳಲ್ಲೂ: "ಏಕೋ ದಶಸಹಸ್ರಾಣಿ ಯೋಽನ್ನದಾನಾದಿನಾ ಭರೇತ್ । ಸವೈ ಕುಲಪತಿಃ" ಎಂಬ ರೀತಿಯಲ್ಲಿ, ಹತ್ತಾರು ಸಾವಿರ ವಿದ್ಯಾರ್ಥಿ- ಗಳಿಗೆ ಅನ್ನವನ್ನು ಕೊಟ್ಟು ವಿದ್ಯೆಯನ್ನು ದಾನಮಾಡಲು ಸಾಮರ್ಥ್ಯವುಳ್ಳ- ವನು ಕುಲಪತಿ ಎನಿಸುವನು ಎಂದಿದೆ. ಕಾಳಿದಾಸನ ಶಾಕುಂತಲ ನಾಟಕದಲ್ಲಿ

ಬರುವ ಕಣ್ವರೂ ಇಂತಹ ಒಬ್ಬರು ಆಗಿದ್ದರು. ಇದೆಲ್ಲ ಬರೀ ಕಟ್ಟು ಕಥೆಯೆ? ಹಿಂದೆ ಹೀಗಿದ್ದದ್ದು ಸಾಧ್ಯವಾದರೆ, ಈಗೇಕೆ ಆಗುತ್ತಿಲ್ಲ, ಆಗಬಾರದು. ಎಂಬುದು ವಿವೇಚನೀಯ. ವಿದ್ಯೆಯು "ಡಿಗ್ರೀ" (ಕನಿಷ್ಠ ಪಕ್ಷ) ತರಗತಿಗಳ ವರೆಗೂ ಎಲ್ಲರಿಗೂ ಉಚಿತವಾಗಿ ದೊರೆಯಬೇಕೆಂಬುದು "ಮುಂದಾಳು"ಗಳ ಕಣ್ತಪ್ಪಿಸಿ "ಸುಖೀ ರಾಜ್ಯ"ದ ಕಲ್ಪನೆಯಲ್ಲಿ ಹೇಗೋ ಉಳಿದುಬಂದಿದೆ, ಮಾತಿನಲ್ಲಾದರೂ, ಪುಣ್ಯಕ್ಕೆ! "ಬಹುಭ್ಯೋದೀಯತೇ ಯತ್ರ ತೃಪ್ಯಂತಿ ಪ್ರಾಣಿನೋ ಬಹು! ಕರ್ತಾರೋ ಬಹವೋ ಯತ್ರ ತತ್ಸತ್ರಮಭಿಧೀಯತೇ" ಎಂಬಂತೆ, ಸಮಸ್ತ ಪ್ರಾಣಿಗಳಿಗೂ ತೃಪ್ತಿಯಾಗುವಂತೆ ಬಹು ಕರ್ತೃಗಳು ಸೇರಿ ನಡೆಸುವ "ಸತ್ರ" ಗಳೆಂಬ ಸಂಸ್ಥೆಗಳಿಗಂತೂ ಇಂದಿನ ಸಮಾಜ ತಿಲಾಂಜಲಿ ಯಿತ್ತು, ಇದರ ಜಾಗದಲ್ಲಿ "ಹೋಟೆಲು" ಗಳು ಬಂದಿವೆ. ದುಡ್ಡಿಗಾಗಿ ಅನ್ನವನ್ನು ಮಾರುವವನು ಹಣಕ್ಕಾಗಿ ಏನನ್ನು ತಾನೇ ಅನ್ನದಲ್ಲಿ ಕಲಬೆರಕೆ ಮಾಡಲಾರ? ತಾನೇ ಉಣ್ಣುವ ಅನ್ನದಲ್ಲಿ ಹೀಗೆ ಮಾಡಿಯಾನೇ? ದೇವರ ಪ್ರೀತಿಗಾಗಿ ಮಾಡುವ ಅನ್ನದಾನಕ್ಕೂ, ಮಾರಾಟಕ್ಕೆ ಆದದ್ದಕ್ಕೂ ಹೀಗೆ ವ್ಯತ್ಯಾಸವಿದ್ದೇ ಇರುತ್ತದೆ. ಧರ್ಮದ ತಳಹದಿಯಿಲ್ಲದೇ ಯಾವ ಕಾನೂನಿ ನಿಂದಲೂ, ಇದನ್ನು ಪೂರ್ಣ ಸರಿಪಡಿಸಲು ಆಗದು.

ಇನ್ನು ಸಂತುಷ್ಟರಾದ ಜನರು ಅನ್ನ ಸಮೃದ್ಧಿಯಿಂದ ಬದುಕಿ ಸಂಸ್ಕೃತರಾಗಿ ಬಾಳಿದರೆ, ಅಧಿಕಾರಾರೂಢರಾದವರನ್ನು ಕೇಳುವರಾರು? ಎಂಬ ಧೋರಣೆಯಿಂದ, ಆಳರಸರು ಜನರನ್ನು ಹತೋಟಿಯಲ್ಲಿಟ್ಟುಕೊಳ್ಳಲು ಆಗಾಗ "ಕೃತಕ ಕ್ಷಾಮ" ಗಳನ್ನುಂಟು ಮಾಡಿ ಯಂತ್ರ ಜೀವನದಲ್ಲಿ ಅವರನ್ನು ಬೇಯಿಸಿ ಜನರ ಅತ್ಯಂತ ದೊಡ್ಡ ಬಯಕೆಗಳು ಅನ್ನ-ನಿದ್ದೆ ಎಂಬ ಎರಡೇ ಆಗುವಂತೆ ತಮ್ಮ ನಿಯಂತ್ರಣದಲ್ಲೇ ಅನ್ನದಿಂದ ಹಿಡಿದು ಪಾನಪನೆ ಎಲ್ಲ ಅವಶ್ಯವಸ್ತುಗಳನ್ನೂ ಇಟ್ಟುಕೊಳ್ಳುವ ಪ್ರಯತ್ನ ನಡೆಸುತ್ತಿರುವುದೂ ಪ್ರಪಂಚದ ಅನೇಕ ಭಾಗಗಳಲ್ಲಿ ಸುವಿದಿತವಾಗಿದೆ. ಇದರ ಛಾಯೆ ಭರತ ಭೂಮಿಯ ಮೇಲೂ ಆಗುತ್ತಿದೆ. ಸಾಮಾಜಿಕ ನ್ಯಾಯ ಈ ಕುತಂತ್ರದಿಂದ ಸಿದ್ಧಿಸುವುದೇ ಅಥವಾ ಹಿಂದೆ ಹೇಳಿದಂತೆ ನಮ್ಮ ಸನಾತನ ಧರ್ಮದ ದೃಷ್ಟಿಯ ಅನ್ನಬ್ರಹ್ಮ-ಉಪಾಸನೆಯಿಂದಲೇ ಸಿದ್ಧಿಸುವುದೇ ಎಂಬುದನ್ನು

ಬುದ್ಧಿವಂತರಾದವರು ಈ ವಿಚಾರಧಾರೆಯ ಹಿನ್ನೆಲೆಯಲ್ಲಿ ಇನ್ನಾದರೂ ಮಾಡಬೇಕಾಗಿದೆ.

ಅನ್ನವು ಬಹ್ಮವಾದುದರಿಂದ, ಅನ್ನವನ್ನು ಮಾರುವುದೂ, ನಿರಾಕರಿಸುವುದೂ, ದೇವರನ್ನು ಮಾರಿದಂತೆ, ದೇವರನ್ನು ಇನ್ನೊಬ್ಬನಿಗೆ ನಿರಾಕರಿಸಿದಂತೆ ಎಂದು ಮನಗಾಣುವುದೇ ಸುಖ, ಶಾಂತಿ ಸಮೃದ್ಧವಾದ ಸಮಾಜ ರಚನೆಗೆ ಶಾಶ್ವತ ಮಾರ್ಗ. ಇದೇ ವೇದಮಾರ್ಗ. ಯಥಾಶಕ್ತಿ ಪ್ರತಿಯೊಬ್ಬನೂ ಇದನ್ನು ಅನುಷ್ಠಾನವಲ್ಲಿ ತರಲು ಯತ್ನಿಸಿ, ಇದೇ ಆಕರ್ಷಕವಾಗುವಂತೆ ಮಾಡಬೇಕು.



॥ ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ॥

# ೮. ದೇವರು ಮತ್ತು ದೇವತೆಗಳು

ಯೋಗೇನ ದಾಕ್ಷ್ಯೇಣ ದಮೇನ ಬುದ್ಧ್ಯಾ ಬಾಹುಶ್ರುತ್ಯೇನ ತಪಸಾ
ನಿಯೋಗೈಃ।

ಉಪಾಸ್ಯಾಃ ತಾಃ ಕೃತ್ಸ್ನಶೋ ದೇವತಾ ಯಾ ಋಚೋ ಹ ಯೋ
ವೇದ ಸವೇದ ದೇವಾ೯ ।

ಯಜೂಂಷಿ ಯೋ ವೇದ ಸವೇದ ಯಜ್ಞಾ೯ ಸಾಮಾನಿ ಯೋ
ವೇದ ಸ ವೇದ ತತ್ತ್ವಂ ॥

ಇದು, ಈಗ ೩೦೦೦ ವರ್ಷಗಳಿಗಿಂತಲೂ ಹಿಂದೆಯೇ, ಶೌನಕರೆಂಬ ಮಹರ್ಷಿಗಳು. ವೇದದಲ್ಲಿ ಪ್ರದಿಪಾದಿತರಾಗಿರುವ ದೇವತೆಗಳ ಸ್ವರೂಪ, ಗುಣ, ಕರ್ಮ, ಸ್ಥಾನಮಾನ ಇತ್ಯಾದಿಗಳನ್ನು ತಿಳಿಯಲು ಬಯಸಿದವನಿಗೆ ಕೊಟ್ಟಿರುವ ಎಚ್ಚರಿಕೆಯ ಮಾತು. ( ಬೃಹದ್ದೇವತಾ VIII-130 ) :

" ಏಕಾಗ್ರತೆಯುಳ್ಳ ಮನಸ್ಸಿನ ಯೋಗಬಲದಿಂದಲೂ, ತಪಸ್ಸಿನ ದಕ್ಷತೆಯೆಂಬ ಸಾಮರ್ಥ್ಯದಿಂದಲೂ, ಇಂದ್ರಿಯ ಸಂಯಮದಿಂದಲೂ, ಚುರುಕಾದ ಮತ್ತು ಪರಿಶುದ್ಧವಾದ ಬುದ್ಧಿಯಿಂದಲೂ, ವೇದಗಳನ್ನು ಬಹುವಾಗಿ ಅಭ್ಯಸಿಸಿಯೂ ( ಬಹಳ ವೇದಾಧ್ಯಯನದಿಂದಲೂ ), ಶರೀರ ದಂಡನಾಪೂರ್ವಕವಾದ ಕರಣತ್ರಯಗಳ ತಪಸ್ಸಿನಿಂದಲೂ ಪೂರ್ವಿಕರ ಆದೇಶಗಳೊಡನೆ ಕೂಡಿದ ಪ್ರಮಾಣಗ್ರಂಥಗಳ ಮಾರ್ಗದರ್ಶನ ದಿಂದಲೂ, ಸಮಸ್ತ ದೇವತೆಗಳನ್ನೂ ಸರ್ವಪ್ರಕಾರಗಳಲ್ಲಿಯೂ, ಉಪಾಸನೆ ಮಾಡಬೇಕು. ( ಪ್ರೇಮಪೂರ್ವಕವಾಗಿ ಸತತವೂ ಅನುಧ್ಯಾನಿಸಿ ಪ್ರತ್ಯಕ್ಷ ಮಾಡಿಕೊಳ್ಳಬೇಕು. ) ಸ್ತೋತ್ರ ರೂಪವಾದ ಋಗ್ಭಾಗದ ವೇದದಲ್ಲಿ ಕೊಂಡಾಡಲ್ಪಟ್ಟಿರುವ ಈ ದೇವತೆಗಳನ್ನು " ತಿಳಿಯಲು ", ಋಕ್ಕುಗಳನ್ನು ಮೊದಲು ಚೆನ್ನಾಗಿ ತಿಳಿಯಬೇಕು. ನಂತರ ಯಜುರ್ವೇದವನ್ನು

" ಅರಿತವನು ", ಈ ದೇವತೆಗಳ ( ಆರಾಧಕನಾಗಲು ಯೋಗ್ಯನಾಗಿ, ಅವರ ಅರ್ಚನಾ ರೂಪವಾದ ) ಯಜ್ಞ ತತ್ತ್ವವನ್ನು ಅರಿಯುವನು. (ಕೊನೆಯಲ್ಲಿ) ಸಾಮವೇದಾಧ್ಯಯನದಿಂದ ಈ ದೇವತೆಗಳ ( ಸಾಕ್ಷಾತ್ಕಾರ ರೂಪವಾದ ಅನುಭೂತಿಯಿಂದ, ಅವರ " ತತ್ತ್ವ " ವನ್ನು ಅರಿಯುವನು. "

ದೇವತೆಗಳನ್ನು ಉಪಾಸಿಸುವುದು ಎಲ್ಲರಿಗೂ ಸುಲಭವಲ್ಲವೆಂದು ಇದ ರಿಂದ ತಿಳಿಯುವುದು. " ದೇವತಾ ಸ್ವರೂಪಾದಿಗಳನ್ನು ಅರಿಯದ, ಅರ್ಥಜ್ಞಾನವಿಲ್ಲದೆ ಮಾಡಿದ ವೇದ ಮಂತ್ರಗಳ ಪಠಣದಿಂದಲೂ, ಯೋಗಾ ಚರಣೆಗಳಿಂದಲೂ ದೇವತೆಗಳೂ ಪ್ರಸನ್ನರಾಗುವದಿಲ್ಲ, ಅಂತಹ ಯಾಗಗಳಲ್ಲಿ ಅವರು ಹವಿರ್ಭಾಗಗಳನ್ನೂ ಸ್ವೀಕರಿಸುವುದಿಲ್ಲ; ಯಾವ ಮಂತ್ರಕ್ಕೆ ಯಾವ ದೇವತೆ ಎಂದು ತಿಳಿಯದೆ ಹವಿಸ್ಸನ್ನು ಅರ್ಪಿಸಿದರೆ ಅವರು ಇಂತಹ ಹವಿಸ್ಸನ್ನು ಅಪೇಕ್ಷಿಸುವುದಿಲ್ಲ ಆದುದರಿಂದ ಮಂತ್ರಗಳನ್ನು ಪಠಿಸುವಾಗ ಆಯಾ ದೇವತೆಗಳನ್ನು ಪ್ರೀತಿಯಿಂದ ಮನಸ್ಸಿನಲ್ಲಿ ಧ್ಯಾನಿಸಿಯೇ ಹವಿಸ್ಸ-ಮರ್ಪಣೆ ಮಾಡಬೇಕು. ಸ್ವಾಧ್ಯಾಯ ಕಾಲದಲ್ಲಿಯೂ ಸಹ, ಶುಚಿರ್ಭೂತ ನಾಗಿ, ಮಂತ್ರ ದೈವತವನ್ನರಿತು ಯಾವನು ವೇದಾಧ್ಯಯನ ಮಾಡುವನೋ ಅಂತಹ ಮಹಾನುಭಾವನು. ಸ್ವರ್ಗದಲ್ಲಿ ಸತ್ರಯಾಗವನ್ನು ಮಾಡುತ್ತ ಕುಳಿತಿರುವವನಂತೆ ಪೂಜಾಯೋಗ್ಯನಾಗಿ, ಅಲ್ಲಿ ಯಾರಿಂದಲೂ ಪೀಡಿಸಲ್ಪಡುವು ದಿಲ್ಲ. ಹೀಗೆ ಜಪಕಾಲದಲ್ಲಿಯೂ, ಹೋಮಗಳಲ್ಲಿಯೂ ಇದು ಬಿಡಲಾಗದ ನಿಯಮ : ವೇದ ಮಂತ್ರಗಳ ಋಷಿ, ಛಂದಸ್ಸು, ದೇವತೆಗಳ, ಹೆಸರು ಗಳನ್ನು ಪಠಿಸಿ, ಅರಿತೇ ಮಂತ್ರೋಚ್ಚಾರಣೆ ಮಾಡತಕ್ಕದ್ದು. ಇಲ್ಲದಿದ್ದರೆ ಫಲ ಲಭಿಸಲಾರದು " ಎಂದು ಶೌನಕರು ಈ ಪ್ರಸಂಗದಲ್ಲಿ ಎಚ್ಚರಿಕೆ ನೀಡಿದ್ದಾರೆ.

> ಮಂತ್ರಾಣಾಂ ದೇವತಾವಿತ್ ಯಃ ಪ್ರಯುಂಕ್ತೇ ಕರ್ಮ ಕರ್ಹಿಚಿತ್
> ಜುಷತೇ ದೇವತಾಸ್ತಸ್ಯ ಹವಿರ್ನಾದೇವತಾವಿದಃ ॥
> ಅವಿಜ್ಞಾನ ಪ್ರದಿಷ್ಟಂಹಿ ಹವಿರ್ನೇಹೇತ ದೈವತಂ ।
> ತಸ್ಮಾನ್ಮನಸಿ ಸಂನ್ಯಸ್ಯ ದೇವತಾಂ ಜುಹುಯಾದ್ಧವಿಃ ॥
> ಸ್ವಾಧ್ಯಾಯಮಪಿ ಯೋಽಧೀತೇ ಮಂತ್ರದೈವತವಿಚ್ಛುಚಿಃ ।

ಸ ಸತ್ತ್ರಸತ್ ಇವ ಸ್ವರ್ಗೇ ಸತ್ತ್ರಸದ್ಭಿರಪೇಡ್ಯತೇ ॥
ನಿಯಮೋಽಯಂ ಜಪೇ ಹೋಮೇ ಋಷಿಶ್ಛಂದೋಽಥ ದೈವತಂ ।
ಅನ್ಯಥಾ ಚೇತ್ಪ್ರಯುಂಜಾನಃ ತತ್ಫಲಾಚ್ಚ್ಯಾತ್ರ ಹೀಯತೇ ॥

(ಬೃಹದ್ದೇವತಾ VII- ಶ್ಲೋ 131–134)

ಇದು ಕಷ್ಟಸಾಧ್ಯವಾದುದರಿಂದ, "ವೇದಿತವ್ಯಂ ದೈವತಂ ಹಿ ಮಂತ್ರೇ ಮಂತ್ರೇ ಪ್ರಯತ್ನತಃ" ಎಂದು ತಮ್ಮ ಗ್ರಂಥಾರಂಭದಲ್ಲೇ ಶೌನಕರು ಹೇಳಿರುವಂತೆ ವಿವೇಕಿಯಾದವನು ಬಹು ಪ್ರಯತ್ನಪಟ್ಟು ಒಂದೊಂದು ಮಂತ್ರದಲ್ಲೂ ಸ್ತುತರಾಗಿರುವ ದೇವತೆಗಳನ್ನು ತಿಳಿಯಬೇಕು. ಇದು ಮಂತ್ರದ್ರಷ್ಟಾರರಾದ ಋಷಿಗಳಿಗೆ ಗೋಚರವಾದಂತೆಯೇ, ಅವರಿಗೆ ಅಭಿಮತವಾದಂತೆಯೇ ಅವರ ಅಭಿಪ್ರಾಯಾನುಸಾರವಾಗಿಯೇ, ಆವರಿಗೆ "ಯದ್ವಾ ತದ್ವಾ" ಆಗತಕ್ಕದಲ್ಲವೆಂದೂ ಹೇಳಿದ್ದಾರೆ.

ಈ ದೇವತೆಗಳು ಯಾರು? ಎಷ್ಟು ಸಂಖ್ಯೆಯುಳ್ಳವರು? ಏತಕ್ಕಾಗಿ ಇದ್ದಾರೆ? ಎಲ್ಲಿ ಇದ್ದಾರೆ? ನಮಗೂ ಅವರಿಗೂ ಏನು ಸಂಬಂಧ? ನಾವು ಅವರನ್ನು ಏಕೆ ಉಪಾಸಿಸಬೇಕು ? ಅವರವರೊಳಗೇ ಏನು ಸಂಬಂಧವಿದೆ ? ಇವರೆಲ್ಲರೂ ತಮ ತಮಗೆ ಸ್ವತಂತ್ರರೆ? ಅಥವಾ ಇವರಿಗೊಬ್ಬ ಅಧೀಶ್ವರನಿದ್ದಾನೆಯೇ ? — ಎಂಬ ಅನೇಕ ಪ್ರಶ್ನೆಗಳು ಇಲ್ಲಿ ಏಳುವುದು ಸಹಜ. ಇಂದಿನ ಜನಾಂಗಕ್ಕಂತೂ ಇನ್ನೂ ವಿಚಿತ್ರವಾದ ಇದೇ ರೀತಿಯ ಅನೇಕ ಪ್ರಶ್ನೆಗಳು ಏಳುವುದರಲ್ಲಿ ಸಂದೇಹವಿಲ್ಲ. ವೇದದಲ್ಲಿಯೇ ಇರತಕ್ಕ ಉತ್ತರಗಳನ್ನೂ ವೇದವನ್ನು ತಿಳಿದ ಮಹನೀಯರ ಅಭಿಪ್ರಾಯಗಳನ್ನೂ ಹೀಗೆ ಸಂಗ್ರಹಿಸಬಹುದು.

ದೇವತೆಗಳು ಲೋಕಗಳನ್ನು ಬೆಳಗುವ ತತ್ತ್ವಗಳು, ಶಕ್ತಿಗಳು, ವ್ಯಕ್ತಿಗಳು. ವಿಶ್ವದ ನಿರಂತರ ಕಾಲ ಪ್ರವಾಹದಲ್ಲಿ ದೃಗ್ಗೋಚರವಾಗುವ ಹಗಲು-ರಾತ್ರಿಗಳಿರುವಂತೆಯೇ, ಮಾನವನ ಅಥವಾ ಜೀವವುಳ್ಳ ಯಾವುದೇ ಪ್ರಾಣಿಯ ಆಂತರಿಕ ಜೀವನದಲ್ಲಿಯೂ ಹಗಲು ರಾತ್ರಿಗಳಿವೆ. ಹಗಲನ್ನುಂಟುಮಾಡಿ, ಬೆಳಕನ್ನು ಬೀರುವ ದೈವೀ ಶಕ್ತಿಗಳೇ ದೇವತೆಗಳು. ಇದರ ವಿರುದ್ಧ ಶಕ್ತಿಗಳೇ ಅಸುರರು, ಕತ್ತಲೆಯ ಅಭಿಮಾನೀ ಶಕ್ತಿಗಳು. ಇವರಿಗೂ

ದೇವತೆಗಳಿಗೂ ಸ್ವಭಾವ ಸಹಜವಾಗಿಯೇ ನಿರಂತರ ಯುದ್ಧ ನಡೆಯುತ್ತಿದೆ, ಇದೇ ಪ್ರಸಿದ್ಧವಾದ ದೇವಾಸುರ ಯುದ್ಧ. ವೇದದಲ್ಲಿ ಇದರ ವರ್ಣನೆ, ಪ್ರಸ್ತಾವ ಆಗಾಗ ವಿಪುಲವಾಗಿ ಬಂದಿದೆ. ಜೀವನವೆಂಬ ಪ್ರವಾಹ ಮುಂದೆ ಸಾಗಲು ಇದು ಬೇಕಾದದ್ದು. ಈ ಪರಸ್ಪರ ವಿರುದ್ಧ ಶಕ್ತಿಗಳು ಸುಸಂಘಟಿತ-ರಾಗಿ ಯುದ್ಧ ನಡೆಸುತ್ತಿದ್ದಾರೆಂಬುದೂ ವೇದದಲ್ಲಿ ಹೇಳಲ್ಪಟ್ಟಿದೆ. ಈ ಕಣ್ಣಿನಿಂದ ನೋಡಿದ ಋಷಿಗಳಿಗೆ ತಮ್ಮೆದುರಿಗೆ ನಡೆದ ಘಟನೆಗಳೂ ಈ ಸಾಂಕೇತಿಕ ಅರ್ಥವನ್ನೊಳಗೊಂಡೇ ನಡೆದಂತೆ ಅನಿಸಿ, ಆಗಾಗ ಚಾರಿತ್ರಿಕ ವಿಷಯಗಳನ್ನೂ ಈ ಮಾರ್ಮಿಕ ಭಾಷೆಯಲ್ಲಿ ನಿರೂಪಿಸಿದ್ದಾರೆ. ಆದರೆ ಎಲ್ಲ ವೇದಸೂಕ್ತಗಳಲ್ಲಿಯೂ ಚಾರಿತ್ರಿಕಾಂಶಗಳಿವೆ ಎಂದು ಬಗೆಯುವುದು ಸರಿಯಲ್ಲ. ಋಷಿಗಳು ಚರಿತ್ರೆ ಬರೆಯಲು ಹೊರಟವರಲ್ಲ. ಅವರು "ತತ್ತ್ವ ದರ್ಶಿಗಳು". ಚರಿತ್ರೆಯಲ್ಲೂ ತತ್ತ್ವವನ್ನು ಕಂಡವರು. ಮಾನವನು ನಿರಂತರವಾಗಿ ತನ್ನ ಆಂತರಿಕ ಜೀವನದಲ್ಲಿಯ ದೈವೀ ಶಕ್ತಿಗಳನ್ನು ಆರಾಧಿಸಿ, ತೃಪ್ತಿಪಡಿಸಿ, ಅವರ ಬಲ ಸಂವರ್ಧನೆಯನ್ನು ಮಾಡಬೇಕೆಂದೂ, ಈ ಮೂಲಕ ಆಸುರೀ ಶಕ್ತಿಗಳನ್ನು ದಮನಗೊಳಿಸಬೇಕೆಂದೂ ವೇದದ ಸಂದೇಶ. ಇದು ಯಜ್ಞದಿಂದ ಆಗತಕ್ಕದು. "ಯಜ್ಞ"ಕ್ಕೆ "ಅಧ್ವರ" ಎಂಬ ಪರ್ಯಾಯ ಶಬ್ದವುಂಟು. ಇದರರ್ಥ "ದಾರಿ" ಎಂದು. ಅಂದರೆ ಮಾನವನ ಜೀವನದ ಮುನ್ನಡೆಯ ದಾರಿಯೇ ಇದು. ಹೀಗೆ ದೇವತೆಗಳು ನಮ್ಮಲ್ಲಿರುವ ನಮ್ಮ ಹಿತಚಿಂತಕರು; ಅಸುರರು ನಮ್ಮಲ್ಲಿರುವ ದ್ರೋಹ ಶಕ್ತಿಗಳು, ನಮ್ಮ ಅಧಃಪಾತವನ್ನೇ ಸರ್ವದಾ ಬಯಸುತ್ತಿರುವವರು; ಪಾಶವೀ ಶಕ್ತಿಗಳು. ಈ ಪಶುಗಳನ್ನು ಅರ್ಪಿಸಿ ದೇವತ್ವವನ್ನು ನಾವು ಪಡೆಯುವಂತಾಗಬೇಕು ಎಂದು ವೇದ ಸಂದೇಶ ಇರುವುದನ್ನು ಯಜ್ಞತತ್ತ್ವ ವಿವರಣೆಯ ಅಧ್ಯಾಯದಲ್ಲಿ ಈಗಾಗಲೇ ವಿವರಿಸಿದೆ. ಈ ದೇವತೆಗಳ ಸ್ವರೂಪಾದಿಗಳನ್ನು ತಿಳಿದು ಅವರನ್ನು ಗುರುತಿಸುವುದು ಸುಲಭವಲ್ಲವೆಂಬುದನ್ನು ಹಿಂದೆಯೇ ಹೇಳಿ, ಅದಕ್ಕಾಗಿ ಪಡಬೇಕಾದ ಪರಿಶ್ರಮವನ್ನೂ ಎತ್ತಿ ತೋರಿಸಲಾಗಿದೆ. ದೇವತೆಗಳು ಯಾವಾಗಲೂ ಕಣ್ಣಿಗೆ ಕಾಣದೆಯೇ ಮರೆಯಾಗಿರಲು ಅಪೇಕ್ಷಪಡುತ್ತಾರೆಂದು ವೇದವೇ ಘೋಷಿಸಿದೆ : (ಪರೋಕ್ಷಪ್ರಿಯಾ ಇವಹಿ ದೇವಾಃ ತೈ. ಬ್ರಾಹ್ಮಣ, 11-3.)

ಕೋ ಅದ್ಧಾ ವೇದ ಕ ಇಹ ಪ್ರವೋಚದ್ದೇವಾಂ

ಅಚ್ಛಾಪಥ್ಯಾ ಕಾ ಸಮೇತಿ ।

ದದೃಶ್ರ ಏಷಾಮುವಮಾ ಸದಾಂಸಿ ಪರೇಷು

ಯಾ ಗುಹ್ಯೇಷು ವ್ರತೇಷು ॥

( ಋಕ್ಸಂಹಿತಾ III-54-5 )

" ಸತ್ಯಾರ್ಥವನ್ನು ತಿಳಿಸುವ ( ದೇವ ) ಮಾರ್ಗ ಯಾವನಿಗೆ ತಾನೇ ತಿಳಿದಿರುವುದು ? ಯಾವನು ತಾನೇ ನಮಗೆ ಈ ವಿಷಯದಲ್ಲಿ ನಿಶ್ಚಯಮಾಡಿ ಹೇಳಬಲ್ಲನು ? ದೇವತೆಗಳೆಡೆಗೆ, ಅವರಿಗೆ ಅಭಿಮುಖವಾಗಿ ಕರೆದು ಕೊಂಡು ಹೋಗುವ ಮಾರ್ಗವನ್ನು ಯಾರೂ ತಿಳಿಯಲಾರರು. ನಕ್ಷತ್ರ ರೂಪದಲ್ಲಿರುವ ದೇವತೆಗಳ ಕೆಳಗಿನ ವಾಸಸ್ಥಾನಗಳು ಮಾತ್ರ ( ಕಣ್ಣಿಗೆ ) ಕಾಣಿಸುತ್ತವೆ. ಉತ್ತಮವಾದ ಗೂಢ ಕರ್ಮಗಳಲ್ಲಿ ನಿರತ ರಾಗಿರುವ ದೇವತೆಗಳ ಗುಹ್ಯವಾದ ( ರಹಸ್ಯಮಯವಾದ ) ಸ್ಥಾನಗಳನ್ನು ಯಾರೂ ತಿಳಿಯಲಾರರು. "

ಜೀವನದ ಗತಿಯು ನಿಂತಕಡೆ ನಿಲ್ಲದೇ ಸಾಗುತ್ತಿದೆಯಷ್ಟೆ. ಇದನ್ನು ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ಎಳೆದಾಡಿ ತಮ್ಮ ಪ್ರಭುತ್ವವನ್ನು ಇದರ ಮೇಲೆ ಸ್ಥಾಪಿಸುವ ಯತ್ನದಲ್ಲಿ ದೇವತೆಗಳೂ, ಅಸುರರೂ ಯಾವಾಗಲೂ ತೊಡ ಗಿರುತ್ತಾರೆ. ಇದಕ್ಕಾಗಿಯೇ ಅವರಲ್ಲಿ ಕಲಹ. ಮಾನವರಾದ ನಾವೂ ಈ ವಿಷಯದಲ್ಲಿ ತಟಸ್ಥಧೋರಣೆಯಿಂದ ಇರುವಂತಿಲ್ಲ. ದೇವತೆಗಳ ಉನ್ನತಿಗಾಗಿ ನಾವು ಶ್ರಮಿಸಬೇಕು. ಏಕೆಂದರೆ ಅವರ ಉನ್ನತಿಯಲ್ಲೇ ನಮ್ಮ ಪ್ರಗತಿಯ ತತ್ತ್ವ ಇದೆ. ಭಗವಂತನೂ ಗೀತೆಯಲ್ಲಿ :

ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।

ಪರಸ್ಪರಂ ಭಾವಯನ್ತಃ ಶ್ರೇಯಃ ಪರಂ ಅವಾಪ್ಸ್ಯಥ ॥

ಎಂದು ಆದೇಶ ನೀಡಿದ್ದಾನೆ : " ಯಜ್ಞದಿಂದ ದೇವತೆಗಳನ್ನು ಭಾವಿಸಿ ತೃಪ್ತಿಗೊಳಿಸಿರಿ. ತೃಪ್ತರಾದ ಅವರು ನಿಮ್ಮನು ಅನುಗ್ರಹಿಸಲಿ, ಹೀಗೆ ಪಾರಸ್ಪರ್ಯ ಭಾವನೆಯಿಂದ ಇಬ್ಬರೂ ಶ್ರೇಯಸ್ಸನ್ನು ಹೊಂದಿರಿ." ಹೀಗೆ

ವೇದದಿಂದ ಇತಿಹಾಸ ಪುರಾಣಗಳ ವರೆಗೆ ಎಲ್ಲ ಕಡೆಯಲ್ಲಿಯೂ ಈ ಮಹಾ ಸಂದೇಶ ಇದೆ. ದೇವತೆಗಳು ಕಣ್ಣಿಗೆ ಕಾಣಲಿ, ಬಿಡಲಿ. ಅವರ ವ್ಯಾಪಾರ ಮಾತ್ರ ನಡೆದೇ ಇದೆ. ಮಾನವರು ಯಜ್ಞಗಳಿಂದ ಅವರ ಕೈ ಭದ್ರಪಡಿಸದಿದ್ದಾಗ ಅವರು ಅಸುರರಿಂದ ಪರಾಜಿತರಾದದ್ದೂ ಉಂಟು, ಓಡಿ ಹೋದದ್ದೂ ಉಂಟು. ಮತ್ತೆ ಬಲಿಷ್ಠರಾಗಿ ಬಂದು ಅವರನ್ನು ಗೆದ್ದದ್ದೂ ಉಂಟು. ಇದು ನಡೆಯುತ್ತಲೇ ಇದೆ. ಕೊಟ್ಟಕೊನೆಗೆ ( ಕೊನೆಯೆಂಬುದು ಇದ್ದರೆ ) ದೇವತೆಗಳಿಗೇ ವಿಜಯ ಶಾಶ್ವತವಾಗಿ ದೊರೆಯತಕ್ಕದ್ದು. ಇದು ಋತ ಧರ್ಮ. ಆದರೆ ಇದಕ್ಕಾಗಿ ಮಾನವರೂ ಶ್ರಮಿಸಬೇಕು. " ದೇವಾಸುರ " ಯುದ್ಧಗಳಲ್ಲಿ ಮಹಾವೀರರೂ ಧರ್ಮಾತ್ಮರೂ ಆದ ಚಕ್ರವರ್ತಿಗಳನೇಕರು ಭಾಗವಹಿಸಿದ ಕಥೆಗಳನ್ನೂ ಪುರಾಣಗಳಲ್ಲಿ, ಇತಿಹಾಸಗಳಲ್ಲಿ ಕಾಣುತ್ತೇವೆಯಷ್ಟೆ.

ಮಾನವನ ಅಂತರಂಗ ಜೀವನದಲ್ಲಿಯೂ " ಊರ್ಧ್ವ " ಲೋಕಗಳೂ " ಅಧೋ " ಲೋಕಗಳೂ ಉಂಟು. ದೇವತೆಗಳು ಈ " ಊರ್ಧ್ವ " ಲೋಕಗಳಿಗೆ ಸಂಬಂಧಪಟ್ಟವರು. ಇವು ಏಳು ಪ್ರಸಿದ್ಧವಾಗಿವೆ— ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಂ— ಎಂಬೀ ಪ್ರಸಿದ್ಧ ಸಪ್ತ ವ್ಯಾಹೃತಿಗಳೇ ಇವಕ್ಕೆ ಸಂಕೇತಗಳು. ಇವುಗಳಲ್ಲಿಯೂ ಮೊದಲಿನ ಮೂರು ಬಹುಮುಖ್ಯವೂ ಪ್ರಸಿದ್ಧವೂ ಆಗಿವೆ. " ಈ ಲೋಕ " ಗಳೆಲ್ಲದರಲ್ಲಿ ವಾಸಿಸುವ ದೇವತೆಗಳ ಒಟ್ಟು ಸಂಖ್ಯೆಯ ವಿಚಾರವನ್ನು ಈಗ ಮಾಡೋಣ.

ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಶಂಚ್ಚ ದೇವಾ ನವ ಚಾ
ಸಪರ್ಯನ್ ।
ಔಕ್ಷನ್ ಘೃತೈ ರಸ್ತೃಣನ್ ಬರ್ಹಿರಸ್ಮಾ ಆದಿದ್ಧೋತಾರಂ
ನ್ಯಸಾದಯಂತ ॥

( ಋ. ಸಂ. III–9-9 ಮತ್ತು ಅದೇ X 52-6 )

ಎಂಬ ಸೂಕ್ತದಲ್ಲಿ ದೇವತೆಗಳ ಸಂಖ್ಯೆಯನ್ನು 3339 ಎಂದು ಗಣಿಸಲಾಗಿದೆ. ಈ ದೇವತೆಗಳೆಲ್ಲರಿಂದ ಪೂಜಿಸಲ್ಪಟ್ಟ " ಅಗ್ನಿ " ಯನ್ನು ಮಾನವರಾದ ನಾವೂ ಅರ್ಚಿಸಬೇಕೆಂದು ಸೂಕ್ತದ ಆಶಯ.

"ಯೇ ದೇವಾಸೋ ದಿವ್ಯೇಕಾದಶಸ್ಥ" (ಋ. ಸಂ. I-139-11) ಎಂಬ ಸೂಕ್ತದಲ್ಲೂ, ಮತ್ತಿತರ ಸೂಕ್ತಗಳಲ್ಲೂ (ಋ ಸಂ. I-34-II, I-42, III-6-9, VIII-30-2, VIII-35-3, IX-92-4) ದೇವತೆಗಳ ಸಂಖ್ಯೆಯನ್ನು ಮುಖ್ಯವಾಗಿ ಮೂವತ್ತಮೂರು ಎಂಬುದಾಗಿ ಪರಿಗಣಿಸಲಾಗಿದೆ. ಅಷ್ಟವಸುಗಳೂ, ಏಕಾದಶರುದ್ರರೂ, ದ್ವಾದಶಾದಿತ್ಯರೂ, ದ್ಯಾವಾಪೃಥಿವಿಗಳೆಂಬ ಎರಡೂ ಸೇರಿ ಮೂವತ್ತಮೂರೆಂದು ಶತಪಥ ಬ್ರಾಹ್ಮಣದಲ್ಲಿ (IV-5-7-2) ಹೇಳಿದೆ. ಐತರೇಯ ಬ್ರಾಹ್ಮಣದಲ್ಲಿಯೂ (II-18) ಹೀಗೆಯೇ ಉಕ್ತವಾಗಿದೆ. ಬೃಹದಾರಣ್ಯಕಾದಿ (III 9) ಉಪನಿಷದ್ಭಾಗಗಳಲ್ಲಿಯೂ ಮೂವತ್ತಮೂರು ದೇವತೆಗಳನ್ನೇ ಹೇಳಿರುವುದನ್ನು ಶ್ರೀ ಸಾಯಣಾಚಾರ್ಯರು ಎತ್ತಿ ತೋರಿಸಿದ್ದಾರೆ.

ಆದರೆ ಇನ್ನೂ ಬೇರೆ ಸಂದರ್ಭಗಳಲ್ಲಿ ವೇದದಲ್ಲಿಯೇ ದೇವತೆಗಳನ್ನು ಪ್ರಾಧಾನ್ಯೇನ ಮೂರೇ ಎಂದೂ ಹೇಳಿದೆ. ನಿರುಕ್ತದಲ್ಲಿ ಯಾಸ್ಕ ಮಹರ್ಷಿಗಳು:—

"ತಿಸ್ರ ಏವ ದೇವತಾ ಇತಿ ನೈರುಕ್ತಾಃ। ಅಗ್ನಿಃ ಪೃಥಿವೀಸ್ಥಾನೋ ವಾಯುರ್ವಾ ಇಂದ್ರೋವಾ ಅಂತರಿಕ್ಷಸ್ಥಾನಃ ಸೂರ್ಯಃ ದ್ಯುಸ್ಥಾನಃ। ತಾಸಾಂ ಮಹಾ ಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ। ಅಥವಾ ಕರ್ಮ ಪೃಥಕ್ತ್ವಾತ್ ।" (ನಿ. VII-5) ಎಂದು ಸಮಂಜಸವಾಗಿ ವಿವರಿಸಿದ್ದಾರೆ. ಇದರರ್ಥ "ನಿರುಕ್ತಕಾರರ ಮತದಂತೆ ದೇವತೆಗಳ ಮೂರೇ ಸಂಖ್ಯೆಯವರು. (ಹೆಚ್ಚೂ ಇಲ್ಲ, ಕಮ್ಮಿಯೂ ಇಲ್ಲವೆಂದು ತಾತ್ಪರ್ಯ.) ಪೃಥಿವೀ ಸ್ಥಾನದಲ್ಲಿ ಅಗ್ನಿಯೂ, ಅಂತರಿಕ್ಷಸ್ಥಾನದಲ್ಲಿ ವಾಯುವೂ ಅಥವಾ ಇಂದ್ರನೂ, ದ್ಯುಸ್ಥಾನದಲ್ಲಿ ಸೂರ್ಯನೂ. (ವಾಯು ಎಂದರೂ ಇಂದ್ರ ಎಂದರೂ ನಿರುಕ್ತಕಾರರ ಮತದಂತೆ ಒಂದೇ ದೇವತೆ.) ಆದರೆ ತಮ್ಮ ತಮ್ಮ ಮಹದೈಶ್ವರ್ಯ ಯೋಗದಿಂದ ಈ ಒಬ್ಬೊಬ್ಬ ದೇವತೆಗೂ ಅನೇಕ ನಾಮಧೇಯಗಳಾಗಿ ಬಹುಸಂಖ್ಯೆಯನ್ನು ಹೊಂದುತ್ತಾರೆ. ಅಥವಾ ತಮ್ಮ ಕಾರ್ಯಗಳ ಭೇದದಿಂದ ನಾಮಭೇದಗಳನ್ನೂ ಹೊಂದಿ ಬಹುವಾಗುತ್ತಾರೆ."

ಶೌನಕ ಮಹರ್ಷಿಗಳು ದೇವತೆಗಳನ್ನು ಮೂರು ಎಂದರೆ ಮೂರು ವರ್ಗದವರೆಂದೂ ವಿಭಾಗಿಸಿರುತ್ತಾರೆ. ಪೃಥಿವೀಸ್ಥಾನ ದೇವತೆಗಳು, ಅಂತರಿಕ್ಷ ಸ್ಥಾನದವರು, ದ್ಯುಸ್ಥಾನದವರೆಂದು. (ಹಿಂದೆ ಹೇಳಿದ ಭೂಃ ಭುವಃ ಸುವಃ ಎಂಬ ಪ್ರಥಮ ವ್ಯಾಹೃತಿಗಳಿಗೆ ಸಂಬಂಧ ಪಟ್ಟಂತೆ.) ನೈರುಕ್ತರ ಮತಕ್ಕೆ ಕೇವಲ ಅಲ್ಪ ವ್ಯತ್ಯಾಸ ಇಲ್ಲಿರುವಂತಿದೆ. ದೇವತೆಗಳ ಹೆಸರುಗಳು "ಕರ್ಮ ಭ್ಯೋನಾಮ ಜಾಯತೇ" ಎಂಬಂತೆ ಅವರ ವಿಶೇಷಕರ್ಮಗಳಿಂದ ಬಂದಿವೆ. ಹೆಸರು (ನಾಮ) ಎಂಬುದು (ನವ) ಎಂಬ ಶಬ್ದದಿಂದ ನಿಷ್ಪನ್ನವಾಗಿದೆ ಯೆಂಬ ಅನೇಕ ಪ್ರಾಚೀನ ಋಷಿಗಳ (ಮಧುಕ, ಶ್ವೇತಕೇತು, ಗಾಲವ, ಇತ್ಯಾ ದಿಗಳ) ಅಭಿಪ್ರಾಯವನ್ನು ಎತ್ತಿತೋರಿಸಿ, ಈ ಒಂಭತ್ತು ಯಾವುವೆಂದರೆ, ನಿವಾಸಸ್ಥಾನ ಕಾರ್ಯ ರೂಪ ಮಂಗಳ ವಾಕ್ಯ ಪ್ರಾರ್ಥನೆ ಸಂದರ್ಭ ರೀತಿ ನೀತಿಗಳೆಂದು ಹೇಳಿದ್ದಾರೆ. ಇವುಗಳಿಗೆ ಉದಾಹರಣೆಗಳನ್ನೂ ಕೊಟ್ಟಿ ದ್ದಾರೆ. ವಿಸ್ತಾರವಾಗಿ ಒಂದೊಂದು ದೇವತೆಯ ಬೇರೆ ಬೇರೆ ಹೆಸರುಗಳಲ್ಲಡಕ ವಾಗಿರುವ ವಿಶೇಷ ಸ್ವರೂಪ, ಕರ್ಮ ವಿಚಾರಗಳನ್ನೆಲ್ಲ ಮನೋಹರವಾಗಿ ವಿವರಿಸಿ ಮಹೋಪಕಾರ ಮಾಡಿದ್ದಾರೆ.

ದೇವತೆಗಳ ಸಂಖ್ಯೆಯು (" ಸಂಖ್ಯಾ"–"ತಿಳಿಯುವುದು " ಎಂದು ಮೂಲದ ಅರ್ಥ; "ಎಣಿಸುವುದು"ಎಂಬುದು ಆಮೇಲೆ ಬಂದದ್ದು.) ಎಷ್ಟೆಂಬ ವಿಚಾರದಲ್ಲಿ ಬೃಹದಾರಣ್ಯಕೋಪನಿಷತ್ತಿನಲ್ಲಿ (ಮೂರನೇ ಅಧ್ಯಾಯದಲ್ಲಿ) ಅರ್ಥಪೂರ್ಣವಾದ ಮುಖ್ಯ ಆಖ್ಯಾನವೊಂದಿದೆ :—

ವಿದೇಹರಾಜನಾದ ಜನಕನು ತುಂಬಾ ದಕ್ಷಿಣೆಗಳನ್ನು ದಾನಮಾಡಿ ಒಂದು ಮಹಾಯಜ್ಞವನ್ನು ಮಾಡಿದನು. ಅಲ್ಲಿ ಪ್ರಸಿದ್ಧರಾದ ಅನೇಕ ಬ್ರಹ್ಮನಿಷ್ಠರು ಸೇರಿದ್ದರು. ಜನಕನು ಇವರಲ್ಲೆಲ್ಲ ಅತ್ಯಂತ ಶ್ರೇಷ್ಠನಾದ ಬ್ರಹ್ಮಜ್ಞಾನಿಯಾರೆಂದು ತಿಳಿಯಲು ಆಶಿಸಿ, ಒಂದು ಸಹಸ್ರ ಗೋವುಗಳನ್ನು ಅವುಗಳ ಒಂದೊಂದು ಕೊಂಬಿಗೂ ಹತ್ತು ಹತ್ತು ಚಿನ್ನದ (ನಾಣ್ಯಗಳನ್ನು) ಪಾದಗಳನ್ನು ಕಟ್ಟಿಸಿ, ದೊಡ್ಡಿಯಲ್ಲಿ ಕೂಡಿ ಹಾಕಿ, ಆ ಬ್ರಾಹ್ಮಣರಲ್ಲಿ ಮಹಾಬ್ರಹ್ಮಿಷ್ಠನು ತನ್ನ ಮಹಿಮಾ ಸ್ಥಾಪನಪೂರ್ವಕವಾಗಿ ಆ ಗೋವು ಗಳನ್ನು ಪಣವನ್ನಾಗಿ ಬಹುಮಾನವನ್ನಾಗಿ ಪಡೆಯಬಹುದೆಂದು ಘೋಷಿಸಿ

ದನು. ಬಹು ಸಂಖ್ಯೆಯ ಬ್ರಾಹ್ಮಣರು ಸ್ಪರ್ಧೆಗೆ ಹೆದರಿ ಅಸಮರ್ಥ ರಾದರು. ಯಾಜ್ಞವಲ್ಕ್ಯರು ಆಗ ಮೇಲೆದ್ದು ತಮ್ಮ ಶಿಷ್ಯನಾದ ಸಾಮಶ್ರವನಿಗೆ, ಆ ಗೋವುಗಳು ತನಗೆ ಸೇರತಕ್ಕವಾದ್ದರಿಂದ ತಮ್ಮ ಆಶ್ರಮಕ್ಕೆ ಅಟ್ಟಿಕೊಂಡು ಹೋಗುವಂತೆ ಅಪ್ಪಣೆಮಾಡಿದರು. ಅಲ್ಲಿಯವರೆಗೂ ಸುಮ್ಮನೆ ಮಾನಸಿಕ ಅಧೈರ್ಯದಿಂದ ಹಿಂದೆ ಮುಂದೆ ನೋಡುತ್ತಾ ಕುಳಿತಿದ್ದ ಅನೇಕ ಬ್ರಾಹ್ಮಣರು ಈ ಅಪಮಾನವನ್ನು ಸಹಿಸದೇ ಅಸೂಯೆಯಿಂದ, ಕೋಪದಿಂದ ಬೆಂದು ಯಾಜ್ಞವಲ್ಕ್ಯರ ಬ್ರಹ್ಮಜ್ಞಾನ ಸಂಪತ್ತನ್ನು ಪರೀಕ್ಷಿಸಲು ಒಬ್ಬೊಬ್ಬರಾಗಿ ವಿಧವಿಧವಾಗಿ ಪ್ರಶ್ನಿಸುತ್ತಾರೆ. ಮೊದಲು ಜನಕನ ಆಸ್ಥಾನದಲ್ಲೇ "ಹೋತೃ" ಎಂಬುವನ ಕೆಲಸ ನಿರ್ವಹಿಸುತ್ತಿದ್ದ ಅಶ್ವಲನೆಂಬವನು ಪ್ರಶ್ನಿಸಿ ಸೋಲನ್ನೊಪ್ಪುತ್ತಾನೆ. ನಂತರ ಕ್ರಮವಾಗಿ, ಜಾರತ್ಕಾರವ ಆರ್ತಭಾಗನೂ. ಭುಜ್ಯು ಲಾಹ್ಯಾಯನಿಯೂ, ಉಶಸ್ತ ಚಾಕ್ರಾಯಣನೂ. ಕಹೋಳ ಕೌಷೀತಕೇಯನೂ, ಗಾರ್ಗೀ ವಾಚಕ್ನವೀ ಎಂಬುವಳೂ ಉದ್ದಾಲಕ ಆರುಣಿಯೂ ಪುನಃ ಗಾರ್ಗೀ ವಾಚಕ್ನವಿಯೂ ಪ್ರಶ್ನೆಗಳನ್ನು ಕೇಳಿ ಸೋಲನ್ನೊಪ್ಪುತ್ತಾರೆ. ಕೊನೆಯಲ್ಲಿ ವಿದಗ್ಧ ಶಾಕಲ್ಯನು ಕೇಳಿದ ಪ್ರಶ್ನೆಯೂ ಮತ್ತು ಅದಕ್ಕೆ ಯಾಜ್ಞ್ಯವಲ್ಕ್ಯರು ಅನುಗ್ರಹಿಸಿದ ಉತ್ತರವೂ ದೇವತೆಗಳಿಗೆ ಸಂಬಂಧಪಟ್ಟುದಾಗಿ ಇರುವುದರಿಂದ ಇಲ್ಲಿ ಅದನ್ನು ಹೀಗೆ ಸಂಗ್ರಹಿಸಬಹುದು :—

ಶಾಕಲ್ಯನ ಪ್ರಶ್ನೆ : "ಯಾಜ್ಞ್ಯವಲ್ಕ್ಯ, ದೇವತೆಗಳು ಎಷ್ಟು ?"

ಯಾಜ್ಞವಲ್ಕ್ಯರು ನಿರ್ಣಯಮಾಡಿ ಖಚಿತ ಧ್ವನಿಯಿಂದ ಹೇಳುತ್ತಾರೆ: "ವೈಶ್ವದೇವದ ಮಂತ್ರಗಳಲ್ಲಿ ಎಷ್ಟು ಜನ ದೇವತೆಗಳು ಉಕ್ತರಾಗಿರುವರೋ ಅಷ್ಟೇ! ಅಂದರೆ, ಮುನ್ನೂರ ಮೂರು ಮತ್ತು ಮೂರು ಸಾವಿರದ ಮೂರು (ತ್ರಯಶ್ಚ ತ್ರೀಚ ಶತಾ ತ್ರಯಶ್ಚ ತ್ರೀಚ ಸಹಸ್ರಾ ಇತಿ = ೩೦೩ + ೩೦೦೩ = ೩೩೦೬)"

ಸ್ಥೂಲವಾಗಿ ಇದನ್ನೊಪ್ಪಿದ ಶಾಕಲ್ಯನು ಸೂಕ್ಷ್ಮವಾಗಿ ಪರೀಕ್ಷಿಸಲು ಅದೇ ಪ್ರಶ್ನೆ ಕೇಳುತ್ತಾನೆ: "ಕತ್ಯೇವ ದೇವಾಃ ?" "(ಇವರಲ್ಲಿ) ಎಷ್ಟು ಜನ ದೇವತೆಗಳು ಮಾತ್ರ (ಮುಖ್ಯರು) ?"

ಈಗ ಯಾಜ್ಞವಲ್ಕ್ಯರು "ಮೂವತ್ತಮೂರು" ಎಂದು ಉತ್ತರಿಸು ತ್ತಾರೆ. ಶಾಕಲ್ಯನು ಅದೇ ಪ್ರಶ್ನೆಯನ್ನು ಇನ್ನೂ ಕೆಲವು ಸಲ ಹಾಕಿದಾಗ ಯಾಜ್ಞವಲ್ಕ್ಯರು ಕ್ರಮವಾಗಿ "ಆರು", "ಮೂರು", "ಎರಡು" ಒಂದುವರೆ ಮತ್ತು "ಒಂದು" ಎಂದು ಹೇಳಿ ಮುಗಿಸುತ್ತಾರೆ.

ಶಾಕಲ್ಯನು, ಹಿಂದೆ ಹೇಳಿದ ಆ ಮೂರು ಸಾವಿರದ ಮುನ್ನೂರ ಆರು ದೇವತೆಗಳು ಯಾರೆಂದು ಪ್ರಶ್ನಿಸಿದಾಗ "ದೇವತೆಗಳು ಒಟ್ಟು ಮುವ್ವತ್ತ ಮೂರೇ; ಉಳಿದವು ಇವರದೇ ಮಹಿಮೆಗಳು" ಎಂದು ಹೇಳಿ ಅಷ್ಟವಸ್ತುಗಳನ್ನೂ, ಏಕಾದಶರುದ್ರರನ್ನೂ, ದ್ವಾದಶಾದಿತ್ಯರನ್ನೂ, ಇಂದ್ರ ಪ್ರಜಾಪತಿಗಳನ್ನೂ ಮುವ್ವತ್ತಮೂರು ದೇವತೆಗಳೆಂದು ತೋರಿಸುತ್ತಾರೆ.

ವಸುಗಳು ಯಾರೆಂದು ಕೇಳಿದ ಶಾಕಲ್ಯನಿಗೆ, ಅಗ್ನಿ, ಪೃಥ್ವಿ, ವಾಯು, ಅಂತರಿಕ್ಷ, ಆದಿತ್ಯ, ದ್ಯುಲೋಕ, ಚಂದ್ರಮಾ, ನಕ್ಷತ್ರಗಳು ಇವೇ ಎಂದು ಯಾಜ್ಞವಲ್ಕ್ಯರು ಉತ್ತರಿಸುತ್ತಾರೆ.

ಮುಂದೆ ಕ್ರಮವಾಗಿ ಬೇರೆ ಪ್ರಶ್ನೆಗಳಿಗೆಲ್ಲ ಅವರು ಕೊಟ್ಟ ಉತ್ತರದ ಸಂಗ್ರಹವನ್ನು ಹೀಗೆ ಮಾಡಬಹುದು: ಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯ ಗಳೂ ಸೇರಿ ಹತ್ತೂ ಮತ್ತು ಮನಸ್ಸೊಂದು, ಹೀಗೆ ಈ ಹನ್ನೊಂದು "ಏಕಾದಶರುದ್ರರು". ಈ ಹನ್ನೊಂದು ಇಂದ್ರಿಯಗಳಿಗೆ ರುದ್ರರೆಂದು ಏಕೆ ಹೆಸರಾಯಿತು ? ಎಂದು ಕೇಳಿದರೆ, ಇವು ಮರಣ ಕಾಲದಲ್ಲಿ ಶರೀರದಿಂದ ಉತ್ಕ್ರಮಿಸಿದಾಗ, ಪುರುಷನನ್ನು (ಅಥವಾ ಅವನ ಬಂಧುಗಳನ್ನು) ಅಳು ವಂತೆ ಮಾಡುತ್ತವೆ. (ರೋದಯನ್ತಿ ತಸ್ಮಾತ್ ರುದ್ರಾ ಇತಿ). ಆದುದ ರಿಂದ ಅವು "ರುದ್ರರು".

ಸಂವತ್ಸರದಲ್ಲಿ ಹನ್ನೆರಡು ತಿಂಗಳಿರುವುವಷ್ಟೇ, ಇವೇ "ದ್ವಾದಶಾ ದಿತ್ಯರು". (ತೈತ್ತಿರೀಯ ಆರಣ್ಯಕದ ಮೊದಲನೆಯ ಪ್ರಶ್ನದಲ್ಲಿ "ನಾನಾ ಲಿಂಗತ್ವಾದೃತೂನಾಂ ನಾನಾಸೂರ್ಯತ್ವಂ" ಎಂದು ಉಕ್ತವಾಗಿರುವಂತೆ ಋತುಗಳ ಚಿಹ್ನೆಗಳು ತಿಂಗಳಿಂದ ತಿಂಗಳಿಗೆ ಬದಲಾಗುವುದರಿಂದ, ಸೂರ್ಯ ದೇವನಿಗೆ ನಾನಾತ್ವ ಬರುತ್ತದೆ. ಹೀಗೆ ಹನ್ನೆರಡು "ಆದಿತ್ಯರು")

"ಎಲ್ಲವನ್ನೂ ತೆಗೆದುಕೊಂಡು ಹೋಗುತ್ತಾರಾದುದರಿಂದ" (ಸರ್ವಮಾದದಾನಾ ಯಂತೀತ್ಯಾದಿತ್ಯಾಃ) "ಆದಿತ್ಯರೆಂದು ಹೆಸರು".

ಸಿಡಿಲುಗರೆಯುವ ಮೇಘವೇ "ಇಂದ್ರ". ಯಜ್ಞವೇ "ಪ್ರಜಾಪತಿ" ಹೀಗೆ ಇವರು ಮೂವತ್ತ ಮೂರು ದೇವತೆಗಳು.

ಆರೇ ದೇವತೆಗಳೆಂದುದರ ಭಾವ — ಇವುಗಳಲ್ಲಿ ಮುಖ್ಯವಾದ, ಅಗ್ನಿ, ಪೃಥವೀ, ವಾಯು, ಅಂತರಿಕ್ಷ, ಆದಿತ್ಯ, ದ್ಯುಲೋಕ, ಇವರಿಂದ ಉಳಿದವರೆಲ್ಲ ಆಗಿದ್ದಾರೆಂದು.

ಮೂರೇ ದೇವತೆಗಳೆಂದುದರ ಭಾವ— ಮೂರು ಲೋಕಗಳು ಎಂದು (ಭೂರ್ಭುವಸ್ವಃ). ಏಕೆಂದರೆ ಎಲ್ಲ ದೇವತೆಗಳೂ ಇವುಗಳಲ್ಲಿಯೇ ಅಡಕವಾಗಿದ್ದಾರೆ.

ಎರಡೇ ದೇವತೆಗಳೆಂದುದರ ಭಾವ—ಅನ್ನ ಮತ್ತು ಪ್ರಾಣ ಎಂದು.

ಒಂದೂವರೆ ದೇವತೆಯೇ (ಅಧ್ಯರ್ಧಃ) ವಾಯುವು. ಒಂದೇ ಆದ ವಾಯು "ಒಂದೂವರೆ" ಆಗುವುದು ಹೇಗೆಂದರೆ, ಈ ಯಾವನ ದೆಸೆಯಿಂದ ಇದೆಲ್ಲವೂ ಹೆಚ್ಚು ಋದ್ಧಿಯನ್ನು ಪಡೆಯುತ್ತಿರುವುದರಿಂದ, (ಅಧ್ಯಾರ್ಧ್ನೋತ್). ಇದು ಒಂದೂವರೆ.

ಒಂದೇ ದೇವತೆಎಂದರೆ "ಪ್ರಾಣ"; ಅದೇ ಬ್ರಹ್ಮ; "ತ್ಯತ್" (ಕಣ್ಣು ಮನಸ್ಸುಗಳಿಗೆ ಮೀರಿದುದು) ಎನಿಸುವುದು. (ಎಂದರೆ ಸಮಸ್ತ ದೇವತೆಗಳ ಉಸಿರಾದ, ಅಂತರಾತ್ಮನಾದ ಪರಮಾತ್ಮ.)

ಯಾವ ಈ ಪರಮಾತ್ಮನಿಗೆ ಪೃಥ್ವಿಯೇ ಆಶ್ರಯವೋ (ನಿಲ್ಲಲು ಪಾದಗಳಿಗೆ ಆಧಾರವೋ), ಅಗ್ನಿಯೇ ಕಣ್ಣೋ, ಸಂಕಲ್ಪ ವಿಕಲ್ಪಾದಿ ಕಾರ್ಯಗಳನ್ನು ಮಾಡುವ ಮನಸ್ಸೇ ಜ್ಯೋತಿಯೋ, ಅಂಥ ಈ ಪರಮ ಪುರುಷನನ್ನು ತಿಳಿಯತಕ್ಕದ್ದು. (ಪುರುಷ ಸೂಕ್ತದ ಛಾಯೆ ಇಲ್ಲಿರುವುದನ್ನೂ ಗಮನಿಸಬೇಕು.) ಇವನನ್ನು ಹೀಗೆ ತಿಳಿದವನೇ ನಿಜವಾಗಿಯೂ ತಿಳಿದವನು. ಶರೀರೇಂದ್ರಿಯಾದಿಗಳಿಗೆಲ್ಲ ಆಶ್ರಯನಾಗಿ, ಹೀಗೆಯೇ ಉಪಾಸ್ಯನಾಗಿರುವ

ಪರಮಾತ್ಮನು, ಜಗಚ್ಛರೀರನಾಗಿ ತಾನು ಸರ್ವಶರೀರಕನಾಗಿ, ( ನಮ್ಮಲ್ಲಿಯೇ ) ಇರುವನು.

ಇಲ್ಲಿಗೆ ವಿದಗ್ಧ ಶಾಕಲ್ಯನಿಗೆ ಬಾಯಿ ಮುಚ್ಚು ಹೋಯಿತು. ಯಾಜ್ಞವಲ್ಕ್ಯರು ಬಿಡಲಿಲ್ಲ " ಇನ್ನೂ ಪ್ರಶ್ನಿಸು " ಎಂದು ಸವಾಲು ಹಾಕುತ್ತಾರೆ. ಮುಂದಿನ ಸಂವಾದ ಸಂಗ್ರಹ ಹೀಗಿದೆ. (ಇಲ್ಲಿಂದ ಮುಂದೆ ಪರಮಾತ್ಮಾತಿರಿಕ್ತವಾದ ಯಾವುದೇ ವಸ್ತು ನಿರೂಪಣೆಯಿಲ್ಲ. ಪರಮಾತ್ಮನೇ ಮತ್ತಷ್ಟು ಚೆನ್ನಾಗಿ, ವಿಶದವಾಗಿ, ವರ್ಣಿಸಲ್ಪಟ್ಟಿದ್ದಾನೆ. )

ಈ ಸರ್ವಶರೀರ ನಿವಾಸಿಯು " ಅಮೃತನು ". ಹೀಗೆಂದು ಧ್ಯಾನಿಸಬೇಕು. ಸಂಕಲ್ಪ ರೂಪವಾದ "ಕಾಮವು" ಇವನಿಗೆ ಆಶ್ರಯ. ಹೃದಯವು ಲೋಕ (ಹೃದಯವೇ ಕಣ್ಣು). ಅಥವಾ ಸ್ತ್ರೀ ಶರೀರದಂತೆ, ಸರ್ವಲೋಕ ಮೋಹಕ ರೂಪ, ಕಾಂತಿಗಳನ್ನುಳ್ಳವನೆಂದು ಧ್ಯಾನಿಸಬೇಕು. ಇವನು ಈ ಆಕಾಶದಲ್ಲಿ ಕಾಣುವ ಸೂರ್ಯನಲ್ಲಿ ಅಂತರ್ಯಾಮಿಯಾಗಿದ್ದಾನೆ. (ಪುಂಡರೀಕಾಕ್ಷತ್ವವನ್ನು ಹೇಳುವ ಶ್ರುತಿಯನ್ನು ಇಲ್ಲಿ ಸ್ಮರಿಸಬಹುದು. ) ಇವನು ಸತ್ಯ ಸ್ವರೂಪಿ. ಆಕಾಶವೂ, "ಕತ್ತಲೆ" ಯೂ ( ಸೃಷ್ಟಿಗೆ ಪೂರ್ವದ ವಿಶ್ವಸ್ಥಿತಿ ), ಇವನಿಗೆ ಆಯತನಗಳು. ಇವನು " ಛಾಯಾ " ಪುರುಷನು (ಸರ್ವ ಸಂಹಾರಕನಾದ ಮೃತ್ಯುವೂ ಸಹ ). ಪ್ರತಿ ವಸ್ತುವಿನ ರೂಪವೂ ಇವನದೇ ಆದ್ದರಿಂದ ರೂಪಗಳೆಲ್ಲ ಇವನಿಗೆ ಆಯತನ. ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬಗಳೂ, ನೀರೂ, ಸಂತಾನ ಸಾಧಕವಾದ ರೇತಸ್ಸೂ, ಇವನ ಆಯತನಗಳು. ದೇವತೆಗಳಿಂದಲೂ, ಪ್ರತಿಷ್ಠೆಗಳಿಂದಲೂ ಕೂಡಿದ ಎಲ್ಲ ದಿಕ್ಕುಗಳೂ ಇವನಿಂದ ವ್ಯಾಪ್ತವಾಗಿವೆ. ಪೂರ್ವದಿಕ್ಕು ಸೂರ್ಯನಲ್ಲೂ, ಇವನು ಕಣ್ಣಿನಲ್ಲೂ. ಅದು ರೂಪದಲ್ಲೂ, ರೂಪವು ಮನಸ್ಸಿನಲ್ಲೂ ಪ್ರತಿಷ್ಠಿತವಾಗಿವೆ. ದಕ್ಷಿಣವು ಯಮಾಶ್ರಿತ. ಯಮನು ಯಜ್ಞಪ್ರತಿಷ್ಠಿತ. ಯಜ್ಞವು ದಕ್ಷಿಣೆಯಲ್ಲೂ, ಇದು ಶ್ರದ್ಧೆಯಲ್ಲೂ, ಅದು " ಹೃದಯದಲ್ಲೂ " ನಿಂತಿವೆ. ಉತ್ತರವು ಸೋಮನಲ್ಲೂ, ಇವನು ದೀಕ್ಷೆಯಲ್ಲೂ, ಅದು ಸತ್ಯದಲ್ಲೂ, ಸತ್ಯವು " ಹೃದಯದಲ್ಲೂ " ನಿಂತಿವೆ. ಧ್ರುವ ( ಊರ್ಧ್ವ ) ದಿಕ್ಕು ಅಗ್ನಿಯಲ್ಲೂ, ಅಗ್ನಿಯು ವಾಕ್ಕಿನಲ್ಲೂ, ವಾಕ್ಕು " ಹೃದಯದಲ್ಲೂ " ಇವೆ.

ಶಾಕಲ್ಯನು ಈಗ "ಈ ಹೃದಯವು ಎಲ್ಲಿ ಪ್ರತಿಷ್ಠಿತವಾಗಿದೆ?" ಎಂದು ತಲೆಹರಟೆಯ ಪ್ರಶ್ನೆ ಹಾಕಿದಾಗ ಯಾಜ್ಞವಲ್ಕ್ಯರು ಸಿಟ್ಟಿಗೆದ್ದು : "ಎಲೋ ! ಪಿಶಾಚಿಯೇ ! "ಹೃದಯವು" ನಮ್ಮ ಶರೀರದಲ್ಲಲ್ಲವೇ ಇರುವುದು ? ಅದು ಬೇರೆಕಡೆ ಇದ್ದಿದ್ದರೆ ನಾಯಿನರಿಗಳು ನಿನ್ನ ಶರೀರವನ್ನು ಈ ವೇಳೆಗೆ ಹರಿದು ತಿನ್ನುತ್ತಿರಲಿಲ್ಲವೆ? ಪಕ್ಷಿಗಳು ಅದನ್ನು ಛಿದ್ರ ಛಿದ್ರ ಮಾಡುತ್ತಿರಲಿಲ್ಲವೇ ?" ಎಂದು ಗರ್ಜಿಸುತ್ತಾರೆ.

ಮುಂದೆ ಹೃದಯಕ್ಕೆ ಆಶ್ರಯವಾದ ಶರೀರವನ್ನೂ ಪಂಚಪ್ರಾಣ ಗಳನ್ನೂ ಹೇಳಿ, ಇವುಗಳೆಲ್ಲವನ್ನೂ ವ್ಯಾಪಿಸಿನಿಂತ, "ನೇತಿ ನೇತಿ" ಎಂಬಂತೆ ನಿರತಿಶಯ ಮಹಿಮೆಯುಳ್ಳವನೂ, ಇಂದ್ರಿಯಗ್ರಹಣಾಯೋಗ್ಯನೂ, ಅವ್ಯಯನೂ, ನಿರ್ಲೇಪನೂ, ಕರ್ಮಬಂಧ ಶೂನ್ಯನಾದ್ದರಿಂದ ಶೋಕಾ ತೀತನೂ, ಅಹಿಂಸಿತನೂ ಆದ ಪರಿಶುದ್ಧನಾದ ಪರಮಾತ್ಮನನ್ನು ಯಾಜ್ಞ ವಲ್ಕ್ಯರು ನಿರೂಪಿಸಿದಾಗ ಶಾಕಲ್ಯನು ಇದನ್ನು ತಿಳಿಯದೆ ಕಣ್ಣು ಬಿಡು ತ್ತಿದ್ದನು. ಕೊನೆಗೆ ಸ್ಪಷ್ಟವಾಗಿ ಅವರು ಮತ್ತೆ ಕೇಳುತ್ತಾರೆ :—

"ಈ ಹಿಂದೆ ಹೇಳಿದ ಪೃಥಿವೀ ಮೊದಲಾದ ಎಂಟು ಆಧಾರಗಳನ್ನೂ ಅಗ್ನಿ ಮೊದಲಾದ ಎಂಟು ಲೋಕಗಳನ್ನೂ, ಅಮೃತವೇ ಮೊದಲಾದ ಎಂಟು ದೇವತಾ ಸ್ವರೂಪಗಳನ್ನೂ, ಶರೀರಾದಿ ಎಂಟು ಪುರುಷಾಕೃತಿ ಗಳನ್ನೂ, ತನ್ನ ಉಪಲಕ್ಷಣಗಳನ್ನಾಗಿ ಹೊಂದಿ, ಅವರುಗಳನ್ನು ಸೃಷ್ಟಿಸಿ, ಉಪಸಂಹರಿಸಿ, ಅವರೆಲ್ಲರನ್ನೂ ಅತಿಕ್ರಮಿಸಿ ತಾನೇ ತಾನಾಗಿ ನಿಂತ ಔಪನಿ ಷದ ಪುರುಷನನ್ನು (ಉಪನಿಷತ್ತುಗಳಲ್ಲೆಲ್ಲ ಕೊಂಡಾಡಲ್ಪಟ್ಟ ಅದ್ವಿತೀಯ ನಾದ ಭಗಂತನನ್ನು), ಕುರಿತು ನಿನ್ನನ್ನು ಕೇಳುತ್ತೇನೆ. (ನಿನಗೆ ಗೊತ್ತಿಲ್ಲ ವಾಗಿ) ಹೇಳಲಾರದೇ ಹೋದರೆ ನಿನ್ನ ತಲೆ ಬೀಳುವುದು."

ಬ್ರಹ್ಮಜ್ಞಾನವಿಲ್ಲದ ಶಾಕಲ್ಯನ ತಲೆಬಿದ್ದು ಹೋಯಿತು, ಯಾಜ್ಞ ವಲ್ಕ್ಯರ ಶಾಪದಿಂದ ! ಕಳ್ಳರು ಅವನ ಮೂಳೆಗಳನ್ನು ಬೇರೆ ಎಂದು ಭ್ರಮಿಸಿ (ಬೆಲೆ ಬಾಳುವುದೆಂದು). ಹೊತ್ತುಕೊಂಡು ಹೋದರು. (ಅಂದರೆ, ಎಲ್ಲ ದೇವತೆಗಳನ್ನು ತಿಳಿದಿದ್ದರೂ ಎಲ್ಲ ದೇವತೆಗಳ ಅಂತರಾತ್ಮನಾದ, ಸರ್ವ

ಶರೀರಿಯಾದ ಪರಮಾತ್ಮನನ್ನು ತಿಳಿಯದವನು ಬ್ರಹ್ಮವಿದನಲ್ಲ ಎಂದೂ, ಶಾಕಲ್ಯನ ಗತಿಯೇ ಅವರಿಗೂ ಆಗುವುದೆಂದೂ ಇಲ್ಲಿ ಸೂಚಿತವಾಗಿದೆ.)

ಸಭೆಯಲ್ಲಿ ಇನ್ನುಳಿದಿದ್ದ ಬ್ರಾಹ್ಮಣರು ಯಾರೂ ಮೇಲೇಳಲಿಲ್ಲ. ಯಾಜ್ಞವಲ್ಕ್ಯರನ್ನು ಪ್ರಶ್ನಿಸುವ ಧೈರ್ಯ ಅವರಿಗಾಗಲಿಲ್ಲ. ಆಗ ಯಾಜ್ಞವಲ್ಕ್ಯರೇ ಮುಂದುವರಿದು, ಮಾನವನ ವ್ಯಕ್ತಿತ್ವವನ್ನು ಒಂದು ಮರದ ಬೆಳವಣಿಗೆಗೆ ಹೋಲಿಸಿ ವಿವರಿಸುತ್ತಾರೆ. "ಪುರುಷನು ವನಸ್ಪತಿಯಂತೆ. ಇದು ಸತ್ಯ. ಹೇಗೆಂದರೆ, ರೋಮಗಳೇ ಎಲೆಗಳು; ಚರ್ಮವು ತೊಗಟೆ, ಮಾಂಸವು ಒಳತೊಗಟೆ. ಸ್ನಾಯುಗಳು (ನರಮಂಡಲವು) ನಾಳಗಳು, ಮಜ್ಜೆಯು ಮರದ ತಿರುಳಿನಂತೆ. ಮರವನ್ನು ಕತ್ತರಿಸಿದರೆ ಬೇರಿನಿಂದ ಹೊಸದಾಗಿ ಮೊಳೆಯುತ್ತದೆ. ಮನುಷ್ಯನು ಮೃತ್ಯುವಿನಿಂದ ಕತ್ತರಿಸಲ್ಪಟ್ಟಾಗ, ಯಾವುದರಿಂದ ಪುನಃ ಹುಟ್ಟುತ್ತಾನೆ ?" ಎಂದು ಅರ್ಥಗರ್ಭಿತವಾಗಿ ಕೇಳುತ್ತಾರೆ. ಯಾರೂ ಉತ್ತರ ಹೇಳದಾಗ ತಾವೇ ಪುನಃ ಹೇಳುತ್ತಾರೆ :

"ರೇತಸ್ಸಿನಿಂದ ಎಂದು ಹೇಳಲಾಗದು, ಏಕೆಂದರೆ ಜೀವಂತನಲ್ಲದವನಲ್ಲಿ ಇದು ಉತ್ಪನ್ನವಾಗುವದಿಲ್ಲ. ತಾನೇತಾನಾಗಿ ಹುಟ್ಟುವನೆಂದೂ ಹೇಳಲಾಗದು. ಆದ್ದರಿಂದ ಅದಕ್ಕಿಂತ ಆಳವಾದ ಬೇರು ಮರ್ತ್ಯಶರೀರದಲ್ಲಿ ಯಾವುದೆಂದರೆ ಸರ್ವವಿಜ್ಞಾತೃವೂ ಆನಂದಮಯನೂ ಬ್ರಹ್ಮಶಬ್ದವಾಚ್ಯನೂ ಆದ ಪರಮಾತ್ಮ. ಇವನು ದಾನಿಗಳಿಗೂ ತತ್ತ್ವಜಿಜ್ಞಾಸುಗಳಿಗೂ ಧ್ಯಾನಾಸಕ್ತರಾದ ಯೋಗಿಗಳಿಗೂ ಏಕಮೇವ ಆಶ್ರಯನು. ಇವನೇ ಜಗನ್ಮೂಲ (ಎಲ್ಲ ದೇವತೆಗಳ ಅಂತರಾತ್ಮ.)"

ವೇದದಲ್ಲಿ ದೇವತೆಗಳಿಗೂ - ದೇವರಿಗೂ ಇರುವ ಸಂಬಂಧವನ್ನು ಇದಕ್ಕಿಂತ ಚೆನ್ನಾಗಿ ವಿವರಿಸುವುದು ಶಕ್ಯವಿಲ್ಲವೆಂದು ತೋರುತ್ತದೆ. ತೈತ್ತಿರೀಯ ಉಪನಿಷತ್ತಿನಲ್ಲಿ ಶೀಕ್ಷಾಧ್ಯಾಯದಲ್ಲಿ, ಭೂರ್ಭುವಸ್ವಃ ಎಂಬ ಲೋಕಗಳ ದೇವತೆಗಳಿಗೆ ಮೇಲ್ಪಟ್ಟು "ಮಹಃ" ಎಂಬುದಕ್ಕೆ ಬ್ರಹ್ಮವೇ ಅಪಾಧ್ಯನವೆಂದೂ, ಇದೇ ಪರಮಾತ್ಮ ತತ್ತ್ವವೆಂದೂ ಉಳಿದ ದೇವತೆಗಳೆಲ್ಲ ಇವನ

ಅಂಗಾಂಗಗಳೆಂದೂ ಮಾಹಾಚಮಸ್ಯನೆಂಬ ಬ್ರಹ್ಮವಿದನ ಮತವನ್ನು ಸಾರಿದೆ: "ಮಹ ಇತಿ । ತದ್ಬ್ರಹ್ಮ ।ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ।" ವಿಷ್ಣುಸಹಸ್ರನಾಮದಲ್ಲಿ "ಏಕೋ ವಿಷ್ಣುಃ ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ" ಎಂದು ಕೊಂಡಾಡುವುದೂ ಇದೇ ಭಾವದಲ್ಲಿ. ಭಗವದ್ಗೀತೆಯಲ್ಲಿ ವಿಶ್ವರೂಪಾಧ್ಯಾಯದಲ್ಲಿಯೂ ಇದನ್ನೇ ಕಾಣುತ್ತೇವೆ:

"ಪಶ್ಯಾಮಿ ದೇವಾನ್ ತವ ದೇವ ದೇಹೇ
ಸರ್ವಾಂಸ್ತಥಾ ಭೂತವಿಶೇಷ ಸಂಘಾನ್ ।
ಬ್ರಹ್ಮಾಣಮೀಶಂ ಕಮಲಾಸನಸ್ಥಂ
ಋಷೀಂಶ್ಚ ಸರ್ವಾನ್ ಉರಗಾಂಶ್ಚ ದಿವ್ಯಾನ್"॥ (XI-15)

ಬ್ರಹ್ಮೇಂದ್ರಾದಿ ಸಕಲದೇವತೆಗಳೂ ಪರಮಾತ್ಮನ ಶರೀರದ ಅಂಗಗಳೆಂದೇ ಕಾಣುತ್ತವೆ, ಅರ್ಜುನನಿಗೆ. ಶ್ರೀಮದ್ರಾಮಾಯಣದಲ್ಲಿ ಸೀತಾ ಅಗ್ನಿ ಪ್ರವೇಶ ಕಾಲದಲ್ಲಿ ಬ್ರಹ್ಮದೇವನೇ ಸ್ವಯಂ ಶ್ರೀರಾಮಸ್ತವ ಮಾಡಿರುವುದರಲ್ಲೂ ಇದನ್ನೇ ಕಾಣಬಹುದು:

"ಅಹಂ ತೇ ಹೃದಯಂ ರಾಮ ಜಿಹ್ವಾದೇವೀ ಸರಸ್ವತೀ ।
ದೇವಾ ಗಾತ್ರೇಷು ರೋಮಾಣಿ ನಿರ್ಮಿತಾ ಬ್ರಹ್ಮಣಾ ಪ್ರಭೋ॥...
ಜಗತ್ಸರ್ವಂ ಶರೀರಂತೇ ಸ್ಥೈರ್ಯಂ ತೇ ವಸುಧಾ ತಲಂ ।
ಅಗ್ನಿಃ ಕೋಪಃ ಪ್ರಸಾದಸ್ತೇ ಸೋಮಃ ಶ್ರೀವತ್ಸ ಲಕ್ಷಣಾ ॥

ಇತ್ಯಾದಿ (ಯುದ್ಧ ಕಾಂಡ, 120-24-26)

ಭಗವದ್ಗೀತೆಯಲ್ಲೂ, ಸಮಸ್ತ ದೇವತಾತ್ಮಕನಾದ ತನ್ನೊಬ್ಬನನ್ನೇ ಉಪಾಸಿಸಬೇಕೆಂದು ಭಗವಂತನು ಅನೇಕಸಲ ಎತ್ತಿ ಘೋಷಿಸಿದ್ದಾನೆ: "ಮಾಂ ಏಕಂ ಶರಣಂ ವ್ರಜ", "ಮಾಂ ಏವ ಯೇ ಪ್ರಪದ್ಯನ್ತೇ", "ಅನನ್ಯಾಃ ಚಿಂತಯಂತೋ ಮಾಂ" "ಯೋಗೇನ ಅವ್ಯಭಿಚಾರಿಣ್ಯಾ" "ಮಯಿ ಚ ಅನನ್ಯಯೋಗೇನ ಭಕ್ತಿಃ ಅವ್ಯಭಿಚಾರಿಣೀ" ಇತ್ಯಾದಿ ಅನೇಕ ಕಡೆಗಳಲ್ಲಿ ವಾಸುದೇವನೊಬ್ಬನನ್ನೇ ಸರ್ವಾಂತರಾತ್ಮನೆಂದು ಧ್ಯಾನಿಸುವುದೇ ಪತಿವ್ರತೆಯ ಅವ್ಯಭಿಚಾರಿಣೀ ಪತಿಭಾವದ ಪರಿಶುದ್ಧ ಭಕ್ತಿಯೆಂದೂ, ದೇವ

ತಾಂತರಗಳನ್ನು ಉಪಾಸಿಸತಕ್ಕದ್ದಲ್ಲವೆಂದೂ ಉಪದೇಶಿಸಿದ್ದಾನೆ. ಭ್ರಾಂತ ರಾದ ಅನೇಕರಿಗೆ ಇಲ್ಲಿ ಅನೇಕ ಸಂದೇಹಗಳು ಏಳಬಹುದು. ಶ್ರೀ ವಾಸು ದೇವನು ಇತರ ದೇವತೆಗಳ ವಿಷಯಕ್ಕೆ ಅಸಹಿಷ್ಣುವೇ ? ಭಗವದ್ಗೀತೆಯು ಒಂದು ಏಕ ಪಂಥೀಯ ಗ್ರಂಥವೇ ? ಏಕಾಂತೀ ಭಕ್ತಿ-ಪ್ರಪತ್ತಿ ನಿಷ್ಠರು ಸಂಕುಚಿತ ಮನೋಭಾವದ ಮತಾಂಧರೇ ? ಹೀಗೆಲ್ಲಾ ಸಂದೇಹಗಳನ್ನು ಕಲ್ಪಿಸುವವರು ನಮ್ಮ ಸನಾತನ ಧರ್ಮದ ಮೇಲೆಯೇ ಪರಸ್ಪರ ವಿರೋಧ ವಾಗಿ ಎರಡು ಮಿಥ್ಯಾರೋಪಗಳನ್ನು ಮಾಡುತ್ತಾರೆ. "(೧) ಸನಾತನಿಗಳಲ್ಲಿ ಏಕ ದೇವತಾ ಕಲ್ಪನೆಯೇ ಇಲ್ಲ; ಬಹು ಸಂಖ್ಯಾತ ದೇವತೆಗಳನ್ನು ಮನಸ್ಸಿಗೆ ಬಂದಂತೆ ಮೂಢರೀತಿಯಿಂದ ಪೂಜಿಸುತ್ತಾರೆ (೨) ಉಗ್ರ ರೀತಿಯ ಏಕದೇವೋಪಾಸನೆಯನ್ನು ಸನಾತನ ಧರ್ಮ ಬೆಂಬಲಿಸುತ್ತದೆ; ಪರದೇವತಾ ಸಹಿಷ್ಣುತೆಯೇ ಇದರಲ್ಲಿಲ್ಲ." ಇದು ಒಟ್ಟಿನಲ್ಲಿ ಹೇಗಾದರೂ ನಮ್ಮ ಧರ್ಮ ವನ್ನು ಅಲ್ಲಗಳೆಯುವವರ ಅಪಲಾಪ, ಅಸಪ್ರಲಾಪ; ಸದ್ಯಕ್ಕೆ ಗೀತೆಯಲ್ಲಿ ಸಮನ್ವಯವನ್ನು ಕಂಡು, ಇದನ್ನು ವೇದಗಳಲ್ಲಿಯೂ ಕಾಣೋಣ.

ಭಗವಂತನು ಸರ್ವಸ್ವಾತ್ಮೇಶ್ವರನಾದ ಪುರುಷೋತ್ತಮ. ಸಮಾಧಿಕರಿಲ್ಲದ ವನು (೧೫ನೇ ಅಧ್ಯಾಯದಲ್ಲಿ ಇದು ಸ್ಪಷ್ಟವಾಗಿದೆ.) ಅವನನ್ನು ಶರಣು ಹೋಗುವುದೆಂದರೆ, ಆವನ ಶರೀರದಲ್ಲಿ ಅಂತರ್ಗತರಾದ ಎಲ್ಲ ದೇವತೆಗಳಿಗೂ ಮರ್ಯಾದೆ ಸಲ್ಲಿಸಿದಂತೆಯೇ. ಏಕಾಂತೀ ಭಕ್ತಿಯು ಗೀತೆಯಲ್ಲಿ ವಿಧಿಸಲ್ಪಟ್ಟಿ- ರುವುದು ಈ ದೃಷ್ಟಿಯಿಂದಲೇ. ಪತಿವ್ರತೆಗೆ ಗಂಡನೊಬ್ಬನೇ ಪೂಜ್ಯನು. ಇವನು ಮೂರು ಲೋಕದ ಗಂಡನಾಗಿ, "ಮಹಾಪುರುಷ" ವಾಚ್ಯನಾದ ಮೇಲೆ, ಉಳಿದವರು ಯಾರೂ ಈ ಭಾವನೆಗೆ ಪಾತ್ರರಲ್ಲ. ಹಾಗೆಂದ ಮಾತ್ರಕ್ಕೆ ಉಳಿದವರ ವಿಷಯದಲ್ಲಿ ಅವಳಿಗೆ ದ್ವೇಷವಾಗಲೀ ತಿರಸ್ಕಾರ ವಾಗಲೀ ಇಲ್ಲ. ತನ್ನ "ಗಂಡ"ನನ್ನು ಪ್ರೀತಿಸಿದವರೆಲ್ಲ ತನಗೂ ಸೇರಿದವರೇ ಆದರೂ, ಗಂಡನೂ ಗಂಡನೇ. ಗೃಹಿಣಿಗೆ, ತನ್ನ ತಂದೆ ತಾಯಿಯರಾಗಲೀ, ಮಕ್ಕಳು, ಸಹೋದರಾದಿಗಳು, ಮಿತ್ರವರ್ಗ, ದಾಸವರ್ಗ ಎಲ್ಲರೂ, ಹೇಗೆ "ಗಂಡ"ನ ಸ್ಥಾನಕ್ಕಿಂತ ಬೇರೆ ಸ್ಥಾನ ಮಾನಗಳನ್ನು ಪಡೆದವರೋ ಹಾಗೆಯೇ ಭಗವಂತನು ಅನನ್ಯ ಭಕ್ತಿಗೆ, ಕೈಂಕರ್ಯಕ್ಕೆ ಏಕಪಾತ್ರನು "ನತ್ವತ್ಸಮಃ ಅಭ್ಯಧಿಕಃ ಕುತೋಽನ್ಯಃ?" ಎಂಬ ಅರ್ಜುನೋಕ್ತಿಯನ್ನು ಮರೆಯಬಾರದು.

ಅಲ್ಲದೆ ಇತರ ದೇವತೆಗಳ ವಿಷಯಕ್ಕೆ ಸ್ವಯಂ ಭಗವಂತನೇ ಹೀಗೆ ಹೇಳಿದ್ದಾನೆ :

" ದೇವಾನ್ ಭಾವಯತಾನೇನ " ... ಇತ್ಯಾದಿ (ಅಧ್ಯಾಯ ೨) ಯಾವ ಯಾವ ಯಜ್ಞಗಳಲ್ಲಿ ಯಾವ ಯಾವ ದೇವತೆಗಳಿಗೆ ಏನೇನು ಹವಿರ್ಧಾನ ಕೊಡಬೇಕೋ ಅದನ್ನು ಕೊಟ್ಟೇ ಅವರನ್ನು ತೃಪ್ತಿಪಡಿಸಬೇಕು. ಇದು ಅವನದೇ ಅಪ್ಪಣೆ. ಆದರೆ ಪ್ರಪತ್ತಿಯೆಂಬುದು ಎಲ್ಲ ದೇವತೆಗಳಲ್ಲಿಯೂ ಮಾಡತಕ್ಕದಲ್ಲ :– " ವಾಸುದೇವನೇ ಸರ್ವಸ್ವವೆಂಬುದಾಗಿ, ಅನೇಕ ಜನ್ಮಗಳ ಕೊನೆಯಲ್ಲಿ ಜ್ಞಾನವಂತನು ತಿಳಿದು ನನ್ನನ್ನು ಪ್ರಪತ್ತಿ ಹೊಂದುತ್ತಾನೆ. ಈ ತೆರನಾದ ಮಹಾತ್ಮನು ಸುದುರ್ಲಭನು. ಆದರೆ ಉಳಿದವರು ತಮ್ಮ ತಮ್ಮ ಆಸೆಗಳಿಗನುಸಾರ ಅಪಹೃತ ಜ್ಞಾನವುಳ್ಳವರಾಗಿ ಬೇರೆ ಬೇರೆ ದೇವತೆಗಳನ್ನೇ ಶರಣು ಹೋಗುತ್ತಾರೆ. ಇದಕ್ಕೆ ಅವರವರ ಪ್ರಕೃತಿ ನಿಯಮವೇ ಕಾರಣ. ಆದರೆ ಈ ದೇವತೆಗಳೂ ನನ್ನ ಶರೀರವೇ. ನನ್ನ ಯಾವ ಯಾವ ಇಂತಹ ದೇವತಾ ಶರೀರಗಳನ್ನು ಭಕ್ತನು ಶ್ರದ್ಧೆಯಿಂದ ಅರ್ಚಿಸಲು ಇಚ್ಛಿಸುತ್ತಾನೋ, ಅವನಿಗೆ ಅಂತಹ ಶ್ರದ್ಧೆಯನ್ನೇ ನಾನು ಅನುಗ್ರಹಿಸುತ್ತೇನೆ. ಅ ದ ರಿಂ ದ ಆ ದೇವತೆಗಳ ಪ್ರೀತಿಯನ್ನು ಸಂಪಾದಿಸಲು ಪ್ರಯತ್ನಿಸುತ್ತಾನೆ. ಆ ದೇವತೆಗಳು ನನ್ನಿಂದ ಪಡೆದ ಭಾಗ್ಯ ವಿಶೇಷದಿಂದಲೇ ತಮ್ಮ ಯೋಗ್ಯತೆಗೆ ಸಾಧ್ಯವಾದಷ್ಟು ಫಲಗಳನ್ನು ನೀಡುತ್ತಾರೆ. ಆದರೆ ಮಂದಮತಿಗಳಾದ ಇಂತಹ ಭಕ್ತರು ಪಡೆಯುವ ದೇವತಾಂತರಾನುಗೃಹೀತವಾದ ಫಲಗಳಿಗೆ ಮಿತಿಯುಂಟು. ಹೀಗೆ ದೇವತೆಗಳನ್ನು ಮಾತ್ರ ನಂಬಿದವರು ಅವರನ್ನು ಹೊಂದುವ ಬಗೆ, ನನ್ನ ಭಕ್ತರಾದರೋ ನನ್ನನ್ನೂ ( ನನ್ನನ್ನೇ) ಹೊಂದುತ್ತಾರೆ. " ( ಅಧ್ಯಾಯ VI ಶ್ಲೋ. ೧೯–೨೩ ).

ಇದೇ ಗೀತೆಯ ಸಮನ್ವಯ ದೃಷ್ಟಿ. ದೇವತೆಗಳೆಲ್ಲರೂ ದೇವರಲ್ಲ, ಪರಿಪೂರ್ಣಾರ್ಥದಲ್ಲಿ. ಅವರು ಪರಮಾತ್ಮನ ಅಂಗಗಳು, ಉಪಕರಣಗಳು ಮಾತ್ರ. ಒಂದು ರಾಜ್ಯದ ಪರಮಾಧಿಕಾರ ಚಕ್ರವರ್ತಿಗೆ ಸ್ವಾಯತ್ತವಾದದ್ದು ಹಳ್ಳಿಯಲ್ಲಿ ಮುಖ್ಯನಾದ ಪಟೇಲನೂ, ಚಕ್ರವರ್ತಿಯ ಪ್ರತಿನಿಧಿಯೇ, ಆ

ಗ್ರಾಮಕ್ಕೆ ಮಾತ್ರ. ಆದರೆ ಅವನೇ ಚಕ್ರವರ್ತಿಯಲ್ಲ. ತಿಳಿಯದ ಹಳ್ಳಿಗರು ಅವನನ್ನೇ ಸರ್ವಪ್ರಭುವೆಂಬಂತೆ ಕಾಣುವುದು ಅಜ್ಞಾನದಿಂದ. ತಿಳಿದವರು ಅವನಿಗೆ ಕೊಡಬೇಕಾದ ಮರ್ಯಾದೆ ಕೊಟ್ಟು ಅವನೊಡನೆ ಸಹಕರಿಸಿ ಅವನಿಂದ ಏನೂ ಯಾಚಿಸದೆ, ಚಕ್ರವರ್ತಿಯೊಬ್ಬನಿದ್ದಾನೆಂಬುದನ್ನು ಮರೆಯದೇ, ಅವನ ಸೇವೆಯನ್ನೇ ಮಹಾನಂದ ಸ್ಥಾನವೆಂದು ತಿಳಿದು ನಿಷ್ಕಾಮ ಕೈಂಕರ್ಯವನ್ನು ಕೈಗೊಳ್ಳುವರು. ಆದರೆ, ಕಳ್ಳತನದಿಂದಲೋ ಉದ್ದಂಡತನದಿಂದಲೋ ಜೀವಿಸುವುದಕ್ಕಿಂತ, ಜೀವನಾಶಕಾರೀ ಶಕ್ತಿಗಳನ್ನು ಉಪಾಸಿಸುವುದಕ್ಕಿಂತ, ಪಟೇಲನನ್ನು ಪೂಜಿಸುವುದು ಖಂಡಿತ ವಾಸಿ. ಆದರೆ ಇದಕ್ಕಿಂತ ಉತ್ತಮವಾದದ್ದು ಇದ್ದೇ ಇದೆ. ಹಾಗೆಯೇ ತಾಮಸರು ಭೂತ ಪ್ರೇತಗಣಗಳನ್ನೂ, ರಾಜಸರು ಯಕ್ಷರಾಕ್ಷಸರನ್ನೂ, ಸಾತ್ತ್ವಿಕರು ದೇವತೆಗಳನ್ನೂ ಉಪಾಸಿಸುವುದು ತಮ್ಮ ಸ್ವಭಾವಕ್ಕನುಗುಣವಾಗಿಯೇ ಇದೆ. (ಗೀತಾ XVII-4) ಸಾತ್ತ್ವಿಕರಲ್ಲೂ ಪರಮೈಕಾಂತಿಯು ದೇವತಾಸಾರ್ವಭೌಮನಾದ ಪರವಾಸುದೇವನನ್ನೇ ಭಜಿಸುತ್ತಾನೆ ಎಂಬುದಾಗಿ ದೇವದೇವತೆಗಳಲ್ಲಿ ಬಹುಮನೋಹರ ಸಮನ್ವಯವನ್ನು ಗೀತಾಚಾರ್ಯನು ಬೋಧಿಸಿದ್ದಾನೆ. ಯಾವುದೇ ಕಾರಣದಿಂದಲೂ ದೇವರು ಒಬ್ಬನೇ ಎಂಬ ಭಾವವನ್ನು ಮರೆಯುವಂತಿಲ್ಲ. ಒಂದೂರಿನಲ್ಲಿ ಒಬ್ಬ ರಾಜನೆಂದರೆ, ಅಲ್ಲಿ ರಾಜನಲ್ಲದ ಉಳಿದ ಯಾವುದೇ ಪ್ರಜೆಗಳಾಗಲೀ, ರಾಜ ಪರಿವಾರವಾಗಲೀ, ರಾಜನ ಪತ್ನೀ ಪುತ್ರಾದಿಗಳಾಗಲೀ, ಇಲ್ಲವೆಂದು ಅರ್ಥವಲ್ಲ. ರಾಜನಂತಹ ಪ್ರಭು, ತತ್ಸಮಾಧಿಕನು ಇನ್ನೊಬ್ಬನಿಲ್ಲವೆಂದು ಅರ್ಥ. (ಇಂತಹ ಸರ್ವೇಶ್ವರನು ಇತರ ದೇವತೆಗಳ ದೊಡ್ಡತನವನ್ನು ಸಹಿಸದ ಅಸೂಯೂಪರನೆಂದು ತಿಳಿಯುವವರಲ್ಲಿ, ಸರಿಯಾದ ದೃಷ್ಟಿ ಇಲ್ಲದೆ, ಸಾತ್ತ್ವಿಕಾಂಶ ಕಮ್ಮಿಯಿದೆಯಾದ್ದರಿಂದ ಶಿಶುಪಾಲ, ಕಂಸಾದಿಗಳ ವರ್ಗಕ್ಕೆ ಸೇರಿ ಭಗವನ್ನಿಗ್ರಹಕ್ಕೆ ಪಾತ್ರರಾಗುವರೆಂದು ತೋರುತ್ತದೆ.) ಇದು ವೇದ ದರ್ಶನಪನ್ನೊಪ್ಪಿ ಗ್ರಂಥ ರಚಿಸಿರುವ ಎಲ್ಲ ಮತಾಚಾರ್ಯರುಗಳ ಏಕಾಭಿಪ್ರಾಯ.

ಈಗ ಈ ಸಮನ್ವಯ ದೃಷ್ಟಿಯನ್ನು ನಿಸ್ಸಂಕೋಚಭಾವದಿಂದ ಹೇಗೆ ವೇದ ಸಂಹಿತೆಗಳು ಬೋಧಿಸುತ್ತವೆಯೆಂದು ನೋಡೋಣ:—

೧ ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ ಅಥೋ ದಿವ್ಯಃ ಸ ಸುಪರ್ಣಃ ಗರುತ್ಮಾನ್ ।
ಏಕಂ ಸತ್ ವಿಪ್ರಾ ಬಹುಧಾ ವದಂತಿ ಅಗ್ನಿಂ ಯಮಂ, ಮಾತರಿಶ್ವಾನಮಾಹುಃ ॥

(ಋ. ಸಂ. I-164-46)

"ಒಬ್ಬನೇ ಆದ ಸತ್ ಶಬ್ದವಾಚ್ಯನಾದ ಪರಮಾತ್ಮನನ್ನು ಜ್ಞಾನಿಗಳಾದ ಮೇಧಾವಿಗಳು ಬಹುವಾಗಿ (ಅನೇಕ ಅಂಶಗಳಲ್ಲಿ) ಇಂದ್ರ, ಅಗ್ನಿ, ಮಿತ್ರ, ವರುಣ, ಮಾತರಿಶ್ವಾ, ದಿವ್ಯಾತ್ಮನೂ ಶೋಭನ ಕರಗಳಾದ ರೆಕ್ಕೆಗಳನ್ನುಳ್ಳ ಗರುತ್ಮಾನ್ ಎಂದೂ ಮುಂತಾಗಿ ವರ್ಣಿಸುತ್ತಾರೆ." "ಏಕೆಂದರೆ ಪಶುಪಕ್ಷಿ ಪ್ರಾಣಿಗಳಾದಿಯಾಗಿ ದೇವತೆಗಳವರೆಗೆ ಎಲ್ಲವೂ ಆ ಪರಮಾತ್ಮನೊಬ್ಬನನ್ನೇ ಆಶ್ರಯಿಸಿ ಸ್ಥಾಪಿತವಾಗಿವೆ. ವಿಶ್ವಮೇಕಂ ಚರತಾ ಪತತ್ರಿ ವಿಷುಣಂ ವಿಜಾತಂ— ಇತ್ಯಾದಿ)"

೨ "ಮಹತ್ ದೇವಾನಾಂ ಅಸುರತ್ವಂ ಏಕಂ" (ಅದೇ III-55) "ದೇವತೆಗಳ ಸಮಸ್ತ ಶಕ್ತಿಗಳೂ ಪರಮಾತ್ಮನ ಬಲವೊಂದನ್ನೇ ಆಶ್ರಯಿಸಿವೆ."

೩ "ತದೇಕಂ ದೇವಾನಾಂ ಶ್ರೇಷ್ಠ ವಪುಷಂ ಅಪಶ್ಯಂ" (ಅದೇ V-6.) ಇದು ವಾಮದೇವರ ದರ್ಶನ: "ಋತದಿಂದ ಋತವು ಮುಚ್ಚಲ್ಪಟ್ಟಿದೆ ಆದರೆ, ಎಲ್ಲಿ ಸೂರ್ಯದೇವನ ಸಹಸ್ರಸಂಖ್ಯಾಕವಾದ ಕುದುರೆಗಳನ್ನು ಬಿಡುಗಡೆಮಾಡಿರುತ್ತಾರೋ (ಅಂದರೆ ಪ್ರಾಕೃತ ಬೆಳಕು ಎಲ್ಲಿ ಮುಗಿಯುವದೋ ಅಲ್ಲಿಂದಾಚೆಗೆ) ಮತ್ತು ಎಲ್ಲಿ ಪ್ರಕಾಶಮಾನರಾದ ದೇವತೆಗಳ ತೇಜೋಮಯವಾದ ಶರೀರಗಳೆಲ್ಲಕ್ಕಿಂತಲೂ ಶ್ರೇಷ್ಠವಾದ ಭಗವಂತನ ದಿವ್ಯ ಮಂಗಳ ವಿಗ್ರಹವಿರುವುದೋ, ಅದನ್ನು ನಾನು ನೋಡಿದ್ದೇನೆ."

೪ "ಧ್ರುವಂ ಜ್ಯೋತಿಃ ನಿಹಿತಂ ದೃಶಯೇ ಕಂ ಮನೋಜವಿಷ್ಠಂ ಪತಯತ್ಸು ಅಂತಃ ।

ವಿಶ್ವೇ ದೇವಾಃ ಸಮನಸಃ ಸಕೇತಾಃ ಏಕಂಕ್ರತುಂ ಅಭಿವಿಯನ್ತಿ ಸಾಧು ॥ (ಅದೇ VI-9)

ಇದು ಭರದ್ವಾಜರ ದರ್ಶನ: "ಎಲ್ಲಾ ದೇವತೆಗಳೂ ತಮ್ಮ ತಮ್ಮ ವಿಭಿನ್ನವಾದ ದಾರಿಗಳಲ್ಲಿಯೂ ಒಬ್ಬನೇ ಪರಮಾತ್ಮನ ಸಂಕಲ್ಪವೊಂದನ್ನೇ ಆಶ್ರಯಿಸಿ ಪ್ರವರ್ತಿಸುತ್ತಾರೆ. ಶಾಶ್ವತವಾದ ಒಂದು ಜ್ಯೋತಿಯು ಸರ್ವ ಹೃದಯಗಳಲ್ಲಿಯೂ ಸನ್ನಿಹಿತವಾಗಿದ್ದು, ಮನಸ್ಸಿಗಿಂತ ವೇಗವಾಗಿ ಮಾರ್ಗ ದರ್ಶನ ಮಾಡುತ್ತದೆ."

೫ (VIII-33) ನೇ ಸೂಕ್ತದಲ್ಲಿಯೂ ಇಂತಹ ಪರಮಾತ್ಮನ ಬಹುವಿಧ ಅವತಾರ ರಹಸ್ಯವನ್ನು ಅಗಸ್ತ್ಯರು ತಿಳಿದಿರುವುದಾಗಿ ವರ್ಣಿಸಿದೆ.

೬ "ಯತ್ರ ಸಪ್ತರ್ಷೀನ್ ಪರ ಏಕಮಾಹುಃ ।" (X-82)

"ಸಪ್ತರ್ಷಿಗಳಿಗಿಂತಲೂ ಮೇಲ್ಪಟ್ಟ ಪರತತ್ವವೊಂದು ಉಂಟೆಂದು ಹೇಳುವರು. ॥"

೭ ಅದೇ ಸೂಕ್ತದಲ್ಲಿ ಆರನೇ ಮಂತ್ರದಲ್ಲಿ ಮತ್ತೂ ಹೀಗೆ ಹೇಳಿದೆ: "ಅಜಸ್ಯ ನಾಭೌ ಅಧಿ ಏಕಮರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ ।"

"ಅವ್ಯಯನಾದ ಪರಮಾತ್ಮನ ನಾಭಿಯಲ್ಲಿ ಸಕಲ ಜಗತ್ತೂ ಅರ್ಪಿತವಾಗಿದ್ದು ಅಲ್ಲೇ ಎಲ್ಲ ವಿಶ್ವಗಳೂ ಆಶ್ರಯ ಹೊಂದಿವೆ."

೮ "ಸುಪರ್ಣಂ ವಿಪ್ರಾಃ ಕವಯೋ ವಚೋಭಿಃ ಏಕಂ ಸಂತಂ ಬಹುಧಾ ಕಲ್ಪಯನ್ತಿ ।" (X-114)

"ಒಬ್ಬನೇ ಪರಮಾತ್ಮನನ್ನು ಮೇಧಾವಿಗಳೂ, ಕ್ರಾಂತದರ್ಶಿಗಳೂ ಆದ ಋಷಿಗಳು ಬಹುವಾದ ತಮ್ಮ ವಾಕ್ಯಗಳಿಂದ ಅನೇಕ ಪ್ರಕಾರವಾಗಿ ವರ್ಣಿಸಿರುತ್ತಾರೆ."

೯ "ಏಕಂ ವಾ ಇದಂ ವಿಬಭೂವ ಸರ್ವಂ ।" ( ವಾಲಖಿಲ್ಯ ಸೂಕ್ತ VIII-58 )

" ಆ ಒಂದೇ, ಇದೆಲ್ಲವೂ ಆಗಿದೆ. "

೧೦ ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ।

ಯೋ ದೇವಾನಾಂ ನಾಮಧಾ ಏಕಏವ ತಂ ಸಂಪ್ರಶ್ನಂ ಭುವನಾ ಯಾನ್ತ್ಯನ್ಯಾ ॥ " (X—82 3).

" ಯಾವನು ನಮಗೆ ತಂದೆಯೋ, ಪಾಲಕನೋ, ಸಕಲ ಜಗತ್ತಿಗೆ ನಿಯಾಮಕನೋ, ಸರ್ವಜ್ಞನೋ. ಮತ್ತು ಅಗ್ನಿಯೇ ಮೊದಲಾದ ಸಕಲ ದೇವತೆಗಳಿಗೂ ನಾಮ ನಿರ್ದೇಶನ ಮಾಡುವನೋ ಅವನು ಅದ್ವಿತೀಯನಾದ ಪರಮಾತ್ಮನು. ಸಮಸ್ತ ಪ್ರಾಣಿಜಾತವೂ ಪೂರ್ಣವಾಗಿ ಇವನನ್ನು ತಿಳಿಯಲಾರದೇ ಇವನ ವಿಷಯಕ್ಕೆ ಇನ್ನೂ ಪ್ರಶ್ನೆಗಳನ್ನು ಕೇಳುತ್ತಲೇ ಇವೆ. "

೧೧ ಯಜುರ್ವೇದದ ತೈತ್ತಿರೀಯ ಆರಣ್ಯಕದಲ್ಲಿ ( ಸುವರ್ಣಂ ಘರ್ಮಂ ಪರಿವೇದವೇನಂ । ಇಂದ್ರಸ್ಯ ಆತ್ಮಾನಂ ದಶಧಾ ಚರನ್ತಂ... ಏಕಃ ಸನ್ ಬಹುಧಾ ವಿಚಾರಃ ...) ಎಂಬ ಸೂಕ್ತದಲ್ಲಿ (III-11) ಇದನ್ನೇ ಹೀಗೆ ವರ್ಣಿಸಿದೆ.

" ಸುವರ್ಣಕಾಂತಿಯುಳ್ಳವನೂ, ಮೋಹಕ ಆಕಾರವುಳ್ಳವನ್ನೂ. ಕಮನೀಯನೂ ಆದ ಪರಮಾತ್ಮನನ್ನು ಬ್ರಹ್ಮದೇವನು ತನ್ನ ಹೃದಯದ ಸಮುದ್ರದಲ್ಲಿ ಹುಡುಕಿದನು. ಇವನೇ ಇಂದ್ರನಿಗೂ ಅಂತರಾತ್ಮ, ಹತ್ತು ಕಡೆಯಲ್ಲೂ ಚಲಿಸುವನು. ಒಳಹೊಕ್ಕು ಸರ್ವ ಜಂತುಗಳ ಜೀವನವನ್ನೂ ಸಾಗಿಸುವವನು. ಒಬ್ಬನೇ ಆದರೂ ಅನೇಕ ಕಡೆಗಳಲ್ಲಿ ಏಕಕಾಲಕ್ಕೆ ಸಂಚರಿಸುವವನು. ಎಲ್ಲ ಬೆಳಕುಗಳೂ ಎಲ್ಲಿ ಒಂದಾಗುವುವೋ, ಎಲ್ಲ ವೇದಗಳೂ ಎಲ್ಲಿ ಏಕೀಭವಿಸುವುವೊ (ಒಬ್ಬ ಪರಮಾತ್ಮನನ್ನೇ ಕೊಂಡಾಡುವವೋ) ಎಲ್ಲ ಹೋತೃಗಳೂ ಯಾವ ಒಬ್ಬನನ್ನೇ ಸ್ತುತಿಸುವರೋ ಅವನು ಸಮಸ್ತ ಪ್ರಾಣಿಗಳ ಹೃದಯದಲ್ಲಿಯೂ ಒಳಹೊಕ್ಕಿರುವ ಸರ್ವಾತ್ಮಾ. ಬ್ರಹ್ಮ, ಇಂದ್ರ, ಅಗ್ನಿ ಮುಂತಾದ ಎಲ್ಲ ದೇವತೆಗಳಿಗೂ ಲೋಕಗಳಿಗೂ ಇವನೇ ಪ್ರತಿಷ್ಠೆ. ಅಮೃತಕ್ಕೆ ಇವನು ಪ್ರಾಣ. ಇವನು ಸರ್ವಾತ್ಮನಷ್ಟೇ ಅಲ್ಲದೆ ಸರ್ವಕರ್ತೃವೂ ಹೌದು. ದೇವತೆಗಳಿಗೂ

ಬಂಧುವಾಗಿ ಅವರ ಹೃದಯ ದೇಗುಲಗಳಲ್ಲಿ ಇರುವ ಸರ್ವಯಜ್ಞ ಸ್ವರೂಪ ನಾದ ಈ ಅಮೃತಮಯನನ್ನು ಸಮಸ್ತ ಋಷಿಗಳೂ ಹುಡುಕುತ್ತಿರುತ್ತಾರೆ. ಯಾವನು ಸಮಸ್ತ ಬ್ರಹ್ಮಾಂಡ ಕೋಶಗಳನ್ನೂ ಭುವನಗಳನ್ನೂ ಧರಿಸಿ ಅನಿರ್ಭಿನ್ನನಾಗಿ (ಭಂಗಗೊಳ್ಳದೆ) ಸರ್ವದಾ ಲೋಕರಕ್ಷಣೆಯಲ್ಲಿದ್ದಾನೋ ಅವನನ್ನು ಋತದ ಕೊನೆಯ ಮೆಟ್ಟಿಲಾದ ಪರಮ ಪದದಲ್ಲಿ ಕವಿಗಳು ಹುಡುಕುತ್ತಿದ್ದಾರೆ. "

ಹೀಗೆ ದೇವರು ಒಬ್ಬನೇ ಮತ್ತು ಅವನ ಮಹಿಮೆಗಳಾದ ದೇವತೆಗಳು ಅನೇಕ ಎಂಬ ಕಲ್ಪನೆ ವೇದದಲ್ಲಿ ಸ್ಪಷ್ಟವಾಗಿದೆ ಎನ್ನಲು ಇನ್ನೂ ಅನೇಕ ಇಂತಹ ಉದಾಹರಣೆಗಳನ್ನು ಕೊಡಬಹುದು. ಪುರುಷಸೂಕ್ತದಲ್ಲಿಯಂತೂ ಸಮಸ್ತ ದೇವತೆಗಳನ್ನೂ, ಲೋಕಾದಿಗಳನ್ನೂ ಭಗವಂತನೊಬ್ಬನ ಅಂಗಾಂಗ ಗಳನ್ನಾಗಿಯೇ ವರ್ಣಿಸಿರುವುದು ಸುಪ್ರಸಿದ್ಧವಾಗಿದೆ. ಉಪನಿಷದ್ಭಾಗದ ವೇದದಲ್ಲಿ ಈ ಅಂಶ ಸ್ಪಷ್ಟವಾಗಿಯೇ ಇದ್ದು ಇಲ್ಲಿ ವಿವರಿಸುವ ಅಗತ್ಯವಿಲ್ಲ. ಪಾಶ್ಚಾತ್ತರು ಉಪನಿಷತ್ತುಗಳು ಈ ಚಿನವೆಂದೂ ಅಲ್ಲಿನ ಏಕದೇವತಾವಾದವು ವೇದ ಸಮತವಲ್ಲವೆಂದೂ. ವೇದದ ಪ್ರತಿಭಟನಾರೂಪ ಜ್ಞಾನರಾಶಿಯಾಗಿ ಉಪನಿಷತ್ತುಗಳು ಹುಟ್ಟಿಕೊಂಡವೆಂದೂ. ಮುಂತಾಗಿ ಮಾಡಿರುವ ಮಿಥ್ಯಾರೋಪಗಳು ನಿರಾಧಾರವೆಂದೂ ದುರುದ್ದೇಶಪೂರಿತವಾದವೆಂದೂ ಈಗ ಸ್ಪಷ್ಟವಾಗಿರುತ್ತದೆ ಹಾಗಾಗಿದ್ದಲ್ಲಿ ವೇದಗಳು " ಅಂತ " ವಿಲ್ಲದೆಯೋ, " ವೇದಾಂತ " ವು ವೇದಬಾಹಿರವೆಂದೋ ಪ್ರಸಿದ್ಧವಾಗಿರಬೇಕಾಗಿದ್ದಿತು. ಸಂಪ್ರದಾಯಜ್ಞಾನವಿಲ್ಲದವರಿಗೆ ಸತ್ಯವು " ಯದ್ವಾ-ತದ್ವಾ " ಕಾಣುವುದಕ್ಕೆ ಇದೇ ಉದಾಹರಣೆ. ಏಕವಿಚಾರಧಾರೆ ವೇದರಾಶಿಯೆಲ್ಲದರಲ್ಲಿ ಹೇಗಿದೆ ಯೆಂಬುದನ್ನು ಇಲ್ಲೂ, ಇತರ ಅಂಶಗಳಲ್ಲೂ ನೋಡಬೇಕಾಗಿದೆ.

ಆದರೆ ಒಮ್ಮೊಮ್ಮೆ ಈ ಒಬ್ಬನೇ ಪರಮಾತ್ಮನ ವಿವಿಧವಾದ ಕಾರ್ಯ ಗಳನ್ನು ಅಂಶಗಳನ್ನು ಮಹಿಮೆಯನ್ನು ಕುರಿತು ಸ್ತೋತ್ರಮಾಡಲು ದೇವತೆ ಗಳ ಹೆಸರಿನಿಂದಲೂ ಅವನನ್ನೇ ಸಂಬೋಧಿಸಿರುವುದೂ ಉಂಟು. ಇಂಥಾ ಕಡೆಗಳಲ್ಲಿ ಶಬ್ದಗಳ ಮುಖ್ಯ ವೃತ್ತಿಯು ಸರ್ವ ಶಬ್ದವಾಚ್ಯನಾದ ಪರಮಾತ್ಮನ ಪರ್ಯಂತ ಇದ್ದು ಅವನಲ್ಲೇ ಪೂರ್ಣಾರ್ಥವನ್ನು ಹೊಂದುತ್ತವೆ. ಎಂಬುದು ಪ್ರಾಜ್ಞರಾದ ಆಚಾರ್ಯರ ಮತ.

ಮನುಸ್ಮೃತಿಯಲ್ಲಿ :

ಆತ್ಮೈವ ದೇವತಾಃ ಸರ್ವಾಃ ಸರ್ವಮಾತ್ಮನ್ಯವಸ್ಥಿತಂ ।
ಆತ್ಮಾಹಿ ಜನಯತ್ಯೇಷಾಂ ಕರ್ಮಯೋಗಂ ಶರೀರಿಣಾಂ ॥

(XII-119)

"ಪರಮಾತ್ಮನೇ ಎಲ್ಲ ದೇವತೆಗಳಿಗೂ ಪ್ರಸವಸ್ಥಾನವೆಂದೂ, ಎಲ್ಲರೂ ಅವನ ವಶವರ್ತಿಗಳೆಂದೂ"

ಏನಮೇಕೇ ವದನ್ತ್ಯಗ್ನಿಂ ಮರುತೋಽನ್ಯೇ ಪ್ರಜಾಪತಿಂ ।
ಇಂದ್ರಮೇಕೇ ಪರೇಪ್ರಾಣಂ ಅಪರೇ ಬ್ರಹ್ಮ ಶಾಶ್ವತಂ ॥

(ಅದೇ XIII-123)

"ಈ ಪರಮಾತ್ಮನನ್ನೇ ( ಕೆಲವೊಮ್ಮೆ ) ಕೆಲವು ಜ್ಞಾನಿಗಳು 'ಅಗ್ನಿ,' ಎಂದೂ, ಮತ್ತೆ ಕೆಲವರು 'ಮರುತ್ತು'ಗಳೆಂದೂ, 'ಪ್ರಜಾಪತಿ'ಯೆಂದೂ, 'ಇಂದ್ರ'ನೆಂದೂ, 'ಶಾಶ್ವತ ಬ್ರಹ್ಮ'ವೆಂದೂ ಹೇಳುತ್ತಾರೆ." ಎಂದರೆ ಸಮಸ್ತ ದೇವತಾನಾಮಗಳೂ ಪರಿಪೂರ್ಣಾರ್ಥದಲ್ಲಿ ಭಗವಂತನನ್ನೇ ಕುರಿತು ಹೇಳುತ್ತವೆಯೆಂದು ಹೇಳಿದೆ. ವಿಷ್ಣು ಸಹಸ್ರನಾಮಭಾಷ್ಯದಲ್ಲಿ ವ್ಯಾಕರಣಾ ಕ್ರಮದಲ್ಲಿಯೂ ಇದು ಸಾಧಿಸಲ್ಪಟ್ಟಿರುವುದನ್ನು ನೋಡಬಹುದು.

ಆದರೆ ದೇವತೆಗಳಿಗೆ ಪ್ರತ್ಯೇಕ ವ್ಯಕ್ತಿತ್ತ್ವವೇ ಇಲ್ಲವೆಂದು ಅರ್ಥವಲ್ಲ. ಆದರೂ ಅವರು ಪರಮಾತ್ಮನಿಂದ ಸಂಪೂರ್ಣವಾಗಿ ಬೇರ್ಪಟ್ಟವರೂ ಅಲ್ಲ. ಹೀಗಾಗಿ ಕೆಲವೊಮ್ಮೆ ಅವರವರಲ್ಲಿಯೇ ದ್ವಂದ್ವಗಳು ಭಗವಂತನ ಸಮ್ಮಿಶ್ರ ಕಾರ್ಯಕ್ರಮಗಳ ಸಾಂಕೇತಿಕ ಅರ್ಥದಲ್ಲಿ ಏರ್ಪಟ್ಟು, ಇಂದ್ರಾಗ್ನೀ, ಮಿತ್ರಾ ವರುಣ, ಅಗ್ನಾವಿಷ್ಣು ಇತ್ಯಾದಿ ರೂಪಗಳಲ್ಲಿ ಕೊಂಡಾಡಲ್ಪಟ್ಟಿರುವುದೂ ಉಂಟು. ಹೇಗೆಂದರೂ ಅವರು ಪರಮಾತ್ಮನ ಅನಂತ ಮಹಿಮೆಯ ನಿಯತ ವಾದ ಅಭಿವ್ಯಕ್ತಿಗಳು ಎಂಬುದನ್ನು ಮರೆಯಬಾರದು.

ಅಲ್ಲದೆ ದೇವತೆಗಳ ಯೋಗ್ಯತೆಯನ್ನು ನಿಷ್ಕರ್ಷಿಸಲು ಅವರಿಗೆಂದು ವಿನಿ ಯೋಗವಾದ ಸೂಕ್ತಗಳ ಸಂಖ್ಯೆಯನ್ನು ಗಣನೆಗೆ ತೆಗೆದುಕೊಂಡು ತೀರ್ಮಾ ನಿಸತಕ್ಕದ್ದಲ್ಲ.ಹಾಗೆ ಮಾಡಿದರೆ ಅವಿವೇಕವೇ ಆದೀತು. ಇಂದ್ರನಿಗೂ ಅಗ್ನಿಗೂ

ಇರುವಷ್ಟು ಸೂಕ್ತಗಳು ಮತ್ತಿತರ ದೇವತೆಗಳಿಗೆ ಇಲ್ಲವಾದರೂ ಅವರನ್ನು ವಿಷ್ಣುವಿಗಿಂತ ದೊಡ್ಡವರೆಂದು ಹೇಳುವಂತಿಲ್ಲ. ಐತರೇಯ ಆರಣ್ಯಕದ ಆರಂಭ ದಲ್ಲಿಯೇ ಈ ವಿಷಯವನ್ನು ಪ್ರಸ್ತಾಪಿಸಿ ಅಗ್ನಿಯನ್ನು ದೇವತೆಗಳಲ್ಲಿ ಅತ್ಯಂತ ಕೆಳಗಿನವನೆಂದೂ ವಿಷ್ಣುವನ್ನೂ ಅತ್ಯಂತ ಮೇಲ್ಪಟ್ಟವನೆಂದೂ ಹೇಳಿದೆ.

"ಅಗ್ನಿರ್ವೈ ದೇವನಾಮವಮೋ ವಿಷ್ಣುಃ ಪರಮಃ ತದಂತರೇಣ ಸರ್ವಾ ಅನ್ಯ ದೇವತಾಃ ॥" "ದೇವತೆಗಳಲ್ಲಿ ಅಗ್ನಿಯು ಕೆಳಗಿನವನೆಂದೂ, ವಿಷ್ಣು ಅತ್ಯಂತ ಮೇಲಿನವನೆಂದೂ, ಇವರಿಬ್ಬರ ನಡುವೆ ಉಳಿದೆಲ್ಲ ದೇವತೆಗಳೂ ಇರುವರೆಂದೂ ಪ್ರಸಿದ್ಧವು." -ಲ್ಲಿ "ಅವಮ", "ಪರಮ" ಶಬ್ದಗಳು "ಮೊದಲು", "ಕೊನೆ" ಎಂಬರ್ಥದಲ್ಲಿ ಬಂದಿವೆ. ಪರಮಾತ್ಮನ ಅಂಶ ಗಳಲ್ಲಿ "ತುಚ್ಛ" "ನೀಚ" ಎಂಬುದು ಯಾವುದೂ ಇಲ್ಲ. ತೈತ್ತಿರೀಯ ಬ್ರಾಹ್ಮಣದಲ್ಲೂ (II-೪-೩, ೩) "ಅಗ್ನಿರಗ್ರೇ ಪ್ರಥಮೋ ದೇವತಾನಾಂ। ಸಂಯಾತಾನಾ ಮುತ್ತಮೋ ವಿಷ್ಣುರಾಸೀತ್ ॥) ಎಂದು ಇದನ್ನೇ ಹೇಳಿದೆ.

ಋಙ್ಮಂಡಲಗಳಲ್ಲಿ ಅನೇಕವಾಗಿ ಅಗ್ನಿಸೂಕ್ತಗಳನ್ನೇ ಮೊದಲು ಪಠಿಸ ಲಾಗಿದೆ. ಇದಕ್ಕೆ ಕಾರಣ ಭೂಲೋಕದ ನಮಗೆ ಪೃಥ್ವೀತತ್ವದ ಅಭಿಮಾನ ದೇವತೆಯಾದ ಇವನು ಅತ್ಯಂತ ಹತ್ತಿರದವನು. ವಿಷ್ಣುಲೋಕವಾದರೋ ಬಹುದೂರದಲ್ಲಿರುವುದರಿಂದ (ಜೀವನದ ಗತಿಯ ಕೊನೆಯಲ್ಲಿ) ಇದರ ವಿಷಯಕ್ಕೆ ಬಹುಸಂಖ್ಯೆಯ ಸೂಕ್ತಗಳು ಇಲ್ಲದಿರಬಹುದು. ಆದರೆ ಇರುವಷ್ಟ ರಲ್ಲಿ ವಿಷಯವು ಸ್ಪಷ್ಟವಾಗಿಯೇ ಇದೆ. ಹೀಗೆ ದೇವತೆಗಳಲ್ಲಿ ತಾರತಮ್ಯವು ಅವರವರ ಗುಣ, ಸ್ವರೂಪ, ನಿರ್ದಿಷ್ಟ ಕಾರ್ಯಗಳಿಂದಲೇ ವ್ಯಕ್ತವಾಗುತ್ತದೆ. ಕೆಲವೊಮ್ಮೆ ಒಂದೇ ದೇವತೆಯ ಅನೇಕ ಹೆಸರುಗಳು ಆ ದೇವತೆಯ ಒಂದೊಂದೇ ಗುಣವನ್ನು ಉದ್ದೇಶಿಸಿ ಹೇಳುತ್ತವೆ ಉದಾಹರಣೆಗೆ ಅಗ್ನಿಯ ಹೆಸರುಗಳಲ್ಲಿ ಅಗ್ನಿ ಎಂಬುದು "ಎಲ್ಲರಿಗಿಂತಲೂ ಮೊದಲು ನಡೆಯುವವನು." ಎಂದೂ "ಜಾತವೇದ" ಎಂಬುದು "ಜ್ಞಾನವುಳ್ಳವನು" ಎಂದೂ ಮುಂತಾಗಿ ಅರ್ಥ ಕೊಡುತ್ತವೆ. ಹಾಗೆಯೇ ಸವಿತೃ, ಆದಿತ್ಯ, ಸೂರ್ಯ ಇವು ಸೂರ್ಯನ ಬೇರೆ ಬೇರೆ ಗುಣಕರ್ಮಗಳನ್ನು ಸೂಚಿಸುತ್ತವೆ. ಇವುಗಳನ್ನೆಲ್ಲ ಯಾಸ್ಕರ ನಿರುಕ್ತದಲ್ಲಿಯೂ ಶೌನಕರ ಬೃಹದ್ದೇವತೆಯಲ್ಲಿಯೂ ವಿಸ್ತಾರ

ವಾಗಿ ನೋಡಬಹುದು. ಛಂದಸ್ಸುಗಳಲ್ಲಿಯೂ ದೇವತೆಗಳಿಗೆ ಕೆಲವು ವಿಶಿಷ್ಟವಾಗಿ ಮೀಸಲಾಗಿವೆ. ಉದಾಹರಣೆಗೆ ಅಗ್ನಿಗೆ ಗಾಯತ್ರಿಯೂ, ಸವಿತೃವಿಗೆ ಉಷ್ಣಿಕ್ ಎಂಬುದೂ, ಸೋಮನಿಗೆ ಅನುಷ್ಟುಪ್, ಬೃಹಸ್ಪತಿಗೆ ಬೃಹತೀ, ಇಂದ್ರನಿಗೆ ಪಜ್ಕ್ತಿ ಮತ್ತು ತ್ರಿಷ್ಟುಪ್, ಮಿತ್ರನಿಗೆ ವಿರಾಟ್, ವರುಣನಿಗೆ ಸ್ವರಾಟ್ ಇತ್ಯಾದಿಗಳು. ಮೊತ್ತದಲ್ಲಿ ಎಲ್ಲ ಋಗ್ವೇದಕ್ಕೂ ಅಗ್ನಿಯು, ಯಜುರ್ವೇದಕ್ಕೆ ವಾಯುವು, ಸಾಮವೇದಕ್ಕೆ ಸೂರ್ಯನು ಅಭಿಮಾನಿಗಳೆಂದು ವರ್ಣಿತರಾಗಿದ್ದಾರೆ.

ದೇವತೆಗಳಿಗೆ ವಾಹನಗಳೂ ಪ್ರತ್ಯೇಕವಾಗಿವೆ. ವೇದದಲ್ಲಿ ಅಲ್ಲಲ್ಲೇ ಬರುವ ಈ ಸಂಗತಿಗಳನ್ನು ಯಾಸ್ಕರು ನಿರುಕ್ತದಲ್ಲಿ ಹೀಗೆ ಕೂಡಿಸಿ ಹೇಳಿದ್ದಾರೆ. " ೧) ಹರೀ ಇಂದ್ರಸ್ಯ ೨) ರೋಹಿತೋ ಅಗ್ನೇಃ ೩) ಹರಿತ ಆದಿತ್ಯಸ್ಯ ೪) ರಾಸಭಾವಶ್ವಿನೋಃ ೫) ಅಜಾಃ ಪೂಷ್ಣಃ ೬) ಪೃಷತ್ಯೋ ಮರುತಾಂ ೭) ಆರಣ್ಯೋ ಗಾವ ಉಷಸಃ ೮) ಶ್ಯಾವಾ ಸವಿತುಃ ೯) ವಿಶ್ವರೂಪಾ ಬೃಹಸ್ಪತೇಃ ೧೦) ನಿಯುತೋ ವಾಯೋಃ। " ಎಂದು. (11- 28) ಅಂದರೆ ಇಂದ್ರನಿಗೆ ಹರೀ ಎಂಬ ನಾಮಧೇಯವುಳ್ಳ ಎರಡು ಕುದುರೆಗಳು, ಅಗ್ನಿಗೆ ಕೆಂಪು ಬಣ್ಣದ ಒಂದು ಕುದುರೆ, ಆದಿತ್ಯನಿಗೆ ಹಸಿರು ಬಣ್ಣದ (ಏಳು) ಕುದುರೆಗಳು. ಅಶ್ವಿನೀ ದೇವತೆಗಳಿಗೆ ಎರಡು ಕತ್ತೆಗಳು, ಪೂಷನ್ ದೇವತೆಗೆ ಆಡುಗಳು, ಮರುತ್ತುಗಳಿಗೆ ಚಿಕ್ಕೆಗಳುಳ್ಳ ಜಿಂಕೆಗಳು, ಉಷೋ ದೇವತೆಗೆ ಹೊಂಬಣ್ಣದ ಆಕಳುಗಳು, ಸವಿತೃವಿಗೆ ಮಾಸಲುಗೆಂಪು ಕುದುರೆಗಳು, ಬೃಹಸ್ಪತಿಗೆ ನಾನಾ ರೂಪಗಳ ಅಶ್ವಗಳು. ವಾಯುವಿಗೆ ನಿಯುತ್ ಎಂಬ ಹೆಸರಿನ ಕುದುರೆಗಳೆಂದು ಅರ್ಥ. ಇಲ್ಲಿ ಸ್ಕಂದಸ್ವಾಮಿ ಎಂಬುವರು ಈ ಶಬ್ದಗಳಿಗೆ ಬೇರೆ ರೀತಿಯ ಅರ್ಥಗಳನ್ನು ಮಾಡಿದ್ದಾರೆ. ಈ ಬಣ್ಣಗಳು ಕುದುರೆಗಳಿಗೆ ಹೇಗೋ ಹಾಗೆಯೇ ಬೆಳಕಿನ ಕಿರಣಗಳಿಗೂ ಉಪಲಕ್ಷಣಗಳು

ದೇವತೆಗಳಿಗೆ ಮನುಷ್ಯರಂತೆ ಕೈಕಾಲುಗಳೂ ಆಕಾರ ಅವಯವಗಳೂ ಉಂಟೇ ? ಎಂಬ ವಿಷಯದಲ್ಲಿಯೂ ಈ ಅಭಿಪ್ರಾಯಗಳಿವೆ. ನಿರುಕ್ತಕಾರರು ಹೀಗೆ ಹೇಳಿದ್ದಾರೆ. ದೇವತೆಗಳು ಅಚೇತನರಲ್ಲ. ಅವರು ಪುರುಷಾಕಾರ

ವನ್ನು ಹೊಂದಿದವರು ಎಂದು ಒಂದು ಅಭಿಪ್ರಾಯ. ಹಾಗೆಯೇ ದೇವತೆಗಳ ತೋಳು, ಮುಷ್ಟಿ, ಪಾಣಿ ಇತ್ಯಾದಿ ಅಂಗಾಂಗಗಳನ್ನು ಋಕ್ಕುಗಳೇ ಕುರಿತು ಹೇಳಿರುತ್ತವೆ. ಹಾಗೆಯೇ ಇವರಿಗೆ ಕುಟುಂಬ, ಮನೆ, ರಥ ಇತ್ಯಾದಿಗಳನ್ನೂ ಹೇಳಿರುತ್ತದೆ. ಬೇರೆ ಕೆಲವರು ದೇವತೆಗಳಿಗೆ ಇವು ಇಲ್ಲವೆಂದೂ ಮನುಷ್ಯರಿಗಿಂತ ಭಿನ್ನವಾದವರೆಂದೂ ಹೇಳಿದ್ದಾರೆ. ಔಷಧಿಗಳನ್ನೂ, ಪಗಡೆದಾಳಗಳನ್ನೂ ಗಿಡಮರಗಳನ್ನೂ ಕೆಲವೊಮ್ಮೆ ದೇವತೆಗಳೆಂದು ಸ್ತುತಿಸಿರುವಾಗ ಅಂಗವುಳ್ಳವುಗಳಂತೆ ಭಾವಿಸಿ ಕರೆದಿರುವುದರಿಂದ ಆಕಾರಾದಿ ವಿಶೇಷಗಳು ಗೌಣವೆಂದು ಈ ಪಕ್ಷ. ಹೇಗಾದರೂ ಇದು ಮುಖ್ಯ ವಿಷಯವಲ್ಲ. ವೇದಮಂತ್ರಗಳನ್ನು ಅಕ್ಷರಕ್ಕೆ ಅಕ್ಷರದಂತೆ ತಿಳಿಯುತ್ತಕ್ಕದ್ದಲ್ಲ — ಎಂದು ಹಿಂದೆಯೇ ಹೇಳಿದೆ. ಎಷ್ಟಾದರೂ, ಅವರು (ದೇವತೆಗಳು) ಪರೋಕ್ಷಪ್ರಿಯರೆಂದೂ ಹೇಳಿದೆ. ದೇವತೆಗಳು ಬೇಕಾದ ರೂಪಗಳನ್ನು ಧರಿಸಬಲ್ಲವರೆಂದೂ ಹೇಳಿದೆ. ಇಷ್ಟರ ಮೇಲೆ ಕೆಲವು ಪಾಶ್ಚಾತ್ಯರು ಭಾವಿಸಿರುವಂತೆ ಅವರು ಕೇವಲ ಪ್ರಕೃತಿ ತತ್ವಗಳ ಪ್ರತಿಕೃತಿಗಳಲ್ಲ. ಉದಾಹರಣೆಗೆ ಪೃಥ್ವೀ ದೇವತೆಯು ಕೇವಲ ಮಣ್ಣಲ್ಲ. ಆದರೆ ಭೂ-ತತ್ವ ಅಭಿಮಾನಿ ದೇವತೆ. ಹಾಗೆಯೇ ಮಳೆಯೇ ಇಂದ್ರನಲ್ಲ. ಬೆಂಕಿಯೇ ಅಗ್ನಿಯಲ್ಲ. ಬೀಸುವ ಗಾಳಿಯನ್ನೇ ವಾಯುವೆಂದೂ ಹೇಳಿಲ್ಲ. ಆಕಾಶದ ಚಂದ್ರನೇ ಸೋಮನಲ್ಲ. ಹಾಗಾಗಿದ್ದರೆ ಮಾನವನ ಅಂತರಂಗ ಜೀವನಯಜ್ಞದಲ್ಲಿ ಕೆಲಸವಿಲ್ಲದೆ ಬಹು ಸಂಖ್ಯೆಯ ವೇದ ಮಂತ್ರಗಳಿಗೆ ಅರ್ಥವೇ ಇಲ್ಲದಂತಾಗುತ್ತದೆ. ಇದನ್ನು ನೆನಪಿನಲ್ಲಿಡುವುದು ಅವಶ್ಯ. ಕೇವಲ ನೈರುಕ್ತರ ಮತವೂ ಈ ದೃಷ್ಟಿಯಿಂದ ಪೂರ್ಣವಾದುದಲ್ಲ. ಈ ಕಾಲದಲ್ಲಿ ದೇವತೆಗಳ ವಿಷಯಕ್ಕೆ ಇಂತಹ ಇನ್ನೂ ವಿಚಿತ್ರವಾದ ವಿವರಣೆಗಳು ಬರುತ್ತಲೇ ಇವೆ. ವಿಷ್ಣುವೆಂದರೆ ಸೂರ್ಯನೆಂದೂ ಅವನ ಮೂರು ಪಾದಗಳೆಂದರೆ ಬೆಳಗಿನ, ಮಧ್ಯಾಹ್ನದ, ಮತ್ತು ಸಂಜೆಯ ಸ್ಥಿತಿಗಳೆಂದೂ ಪಾಶ್ಚಾತ್ಯರು ಬರೆದಿರುವುದು ಹಾಸ್ಯಾಸ್ಪದ. ಹೇಗೆಂದರೆ, ಇದೇ ಸರಿಯಾಗಿದ್ದರೆ, "ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯನ್ತಿ ಸೂರಯಃ" ಎಂಬ ಋಕ್ಕಿಗೆ ಅರ್ಥ ಬರುವುದಿಲ್ಲ. ಮಧ್ಯಾಹ್ನದ ಸೂರ್ಯನನ್ನು ಸರ್ವದಾ ನೋಡುವುದಿರಲಿ, ಕ್ಷಣಮಾತ್ರವೂ ನೋಡಲು ಸಾಧ್ಯವಿಲ್ಲ. ನಿತ್ಯಸೂರಿಗಳಾದರೋ ಸರ್ವದಾ ನೋಡುತ್ತಿರುವರೆಂದ ಮೇಲೆ ಬಾಹ್ಯಲೋಕದ ಪ್ರಾಕೃತ

ವಸ್ತುವನ್ನು ಇಲ್ಲಿ ಹೇಳಿಲ್ಲ ಎಂಬುದು ಸುಸ್ಪಷ್ಟ. ಹೀಗೆಯೇ ಒಂದೊಂದು ದೇವತೆಯ ವಿಷಯದಲ್ಲಿಯೂ ತಿಳಿಯತಕ್ಕದ್ದು.

ದೇವತೆಗಳಿಗೆ ಪತ್ನಿಯರನ್ನು ಹೆಸರಿಸಿ ಕೊಂಡಾಡಲಾಗಿದೆ. ಹೀಗೆ ಇಂದ್ರ ಪತ್ನಿಯನ್ನು ಇಂದ್ರಾಣೀ ಎಂದೂ, ವರುಣ ಪತ್ನಿಯನ್ನು ವರುಣಾನೀ ಎಂದೂ ಅಗ್ನಿಪತ್ನಿಯನ್ನು ಅಗ್ನಾಯೀ ಎಂದೂ ರುದ್ರಪತ್ನಿಯನ್ನು ರೋದಸೀ ಎಂದೂ ಸಂಬೋಧಿಸಲಾಗಿದೆ. ಕೆಲವೊಮ್ಮೆ ಒಟ್ಟುಗೂಡಿಸಿ ದೇವಪತ್ನಿಯರೆಂದೂ ಕರೆಯಲಾಗಿದೆ. ಉಪಾಸನೆಯಿಂದ ಈ ದೇವತೆಗಳ ಸಾಕ್ಷಾತ್ಕಾರವನ್ನು ಮಾಡಿಕೊಳ್ಳತಕ್ಕದ್ದು. ದೇವಪತ್ನಿಯರಲ್ಲದ ಸ್ತ್ರೀ ದೇವತೆಯರೂ ಉಂಟು. ಉದಾಹರಣೆಗೆ ಉಷೋ ದೇವಿ ಮತ್ತು ಆವಳ ಸೋದರಿಯಾದ ರಾತ್ರಿ ದೇವತೆ ಮಾತೃಸ್ಥಾನದಲ್ಲಿ ಸಕಲ ದೇವತೆಗಳ ತಾಯಿಯಾದ ಅದಿತಿಯೂ ಮರುತ್ತುಗಳ ತಾಯಿಯಾದ ಪೃಶ್ನಿಯೂ ಮುಂತಾದವರು ಇದ್ದಾರೆ. ವಿಷ್ಣುಪತ್ನಿಯಾದ ಶ್ರೀಯು ಶ್ರದ್ಧಾ, ಮೇಧಾ, ಸ್ವಧಾ. ಹ್ರೀ, ಇತ್ಯಾದಿ ಬೇರೆ ಬೇರೆ ಹೆಸರುಗಳಿಂದಲೂ ಸ್ತುತಿಸಲ್ಪಟ್ಟಿದ್ದಾಳೆ. (ವಿಶೇಷ ವಿವರಗಳನ್ನು ಮುಂದಿನ ಸಂಪುಟಗಳಲ್ಲಿ ಆಯಾ ದೇವತೆಗಳ ವಿವರಣೆಗೆ ಸರಿಹೊಂದುವ ಸಂದರ್ಭಗಳಲ್ಲಿ ಸ್ಪಷ್ಟಪಡಿಸಲಾಗುವುದು.)

ಸತ್ಯ ಸಂಗತಿಯು ಇಷ್ಟೊಂದು ಗೂಢವೂ, ಗಾಢವೂ ಮಾರ್ಮಿಕವೂ ಅನುತ್ತಮವೂ, ಆಗಿದ್ದರೂ ಇವುಗಳನ್ನು ಸರಿಯಾಗಿ ಅಭ್ಯಾಸಮಾಡದೇ ಪಾಶ್ಚಾತ್ಯ ಕ್ರೈಸ್ತ ಪಾದ್ರಿಗಳು ಕೇವಲ ದುರುದ್ದೇಶದಿಂದ ಬಹುವಾಗಿ ಈ ವಿಷಯದಲ್ಲಿ ಅಪಪ್ರಚಾರ ನಡೆಸಿದ್ದಾರೆ. ಅವರನ್ನನುಸರಿಸಿದ ಭಾರತೀಯ "ಸಂಶೋಧಕರೂ" ಕೆಲವರು ಅವರಿಗಿಂತ ಹೆಚ್ಚಾಗಿ ಅಪಪ್ರಚಾರ ನಡೆಸಿರುವುದು ನಾಚಿಕೆಗೇಡಿನ ವಿಷಯ. ವೇದದಲ್ಲಿ ಏಕದೇವತಾ ಭಾವನೇ ಇಲ್ಲವೆಂದೂ, ಒಬ್ಬೊಬ್ಬ ದೇವತೆಯನ್ನೂ ದೇವರೇ ಎಂದು ಬಗೆದಿರುವ ಬಹುದೈವವಾದ ಇಲ್ಲಿದೆಯೆಂದೂ. "( Polytheism and Kathenotheism )" ಎಂಬ ಶಬ್ದಗಳನ್ನು ಸೃಷ್ಟಿಸಿ ಸುಳ್ಳು ಆರೋಪ ಮಾಡಿದ್ದಾರೆ. "ಎಲ್ಲವೂ ದೇವರೇ" "(ಸರ್ವಂಖಲ್ವಿದಂ ಬ್ರಹ್ಮ)" ಎಂಬದರ ಯಥಾರ್ಥ ಅರ್ಥವಲ್ಲಿ, ಎಂದು ಕಾಣದ ಈ "ಮಹಾನುಭಾವರು" ವೇದದಲ್ಲಿ "( Pantheism ) ಎಂಬ ವಾದ

ವಿದೆಯೆಂದೂ ಬರೆದಿದ್ದಾರೆ. ಸೆಮಿಟಿಕ್ ಬುಡಕಟ್ಟಿನ ಕ್ರೈಸ್ತ, ಯಹೂದ್ಯ, ಇಸ್ಲಾಂ ಮತಗಳಂತೆ ಜಗತ್ತು, ದೇವರೂ ಮತ್ತು ದೇವರಲ್ಲದ್ದು ಎಂಬ ಸ್ಪಷ್ಟವಾದ ಪರಸ್ಪರ ಪೂರಕವಲ್ಲದ ವಿಭಾಗಗಳಿಂದ ( Dichotomised Parts) ಕೂಡಿದೆ. ವೇದದರ್ಶನದಲ್ಲಿ ಭಗವದಂಶವಿಲ್ಲದ್ದು ಅಬ್ರಹ್ಮಾತ್ಮಕ ವಾದದ್ದು ಯಾವುದೂ ಇಲ್ಲ. ಈ ತತ್ವ ಬಹುಶಃ ಸೆಮಿಟಿಕ್ ಮತಗಳ ವರಿಗೆ ಎಂದೆಂದೂ ಅರ್ಥವಾಗತಕ್ಕದ್ದಲ್ಲ ಸಮಂಜಸವೆಂದು ಕಾಣ ತಕ್ಕದ್ದೂ ಅಲ್ಲ. ವೇದದ ದೇವತೆಗಳಲ್ಲಿ ಸಾಮಾಜಿಕ, ನೈತಿಕ ಮೌಲ್ಯಗಳ ಕಲ್ಪನೆಯೇ ಇಲ್ಲವಂತೆ. ಇದೆಲ್ಲವನ್ನು "ಕಂಡು" ಅವರು, ವೇದವು ಅನಾಗರೀಕ ಜನಾಂಗದ ಆದಿ ಮಾನವನ ತೊದಲು ನುಡಿಯಂತೆ ಇದೆ ಯೆಂದೂ, ಮನಸ್ಸಿನ ಹುಚ್ಚು ಕಲ್ಪನೆಗಳ ಪ್ರತಿಬಿಂಬವಾಗಿದೆಯೆಂದೂ ಬರೆದಿದ್ದಾರೆ. ಕಳೆದ ಶತಮಾನದಲ್ಲಿ ಈ ದುರ್ವಾದಗಳನ್ನು ಖಂಡಿಸಿ, ವೇದದಲ್ಲಿ ಸ್ಪಷ್ಟವಾಗಿ ಇರುವ ಏಕದೇವ ಭಾವವನ್ನು ಎತ್ತಿ ಹಿಡಿದ ಸ್ವಾಮಿ ದಯಾನಂದ ಸರಸ್ವತಿ ಮತ್ತು ರಾಜಾರಾಮ ಮೋಹನರಾಯ್ ಇವರುಗಳ ಬಗೆಗೂ ವಿಚಿತ್ರ ದೃಷ್ಟಿಯಿಂದಲೇ ಪಾಶ್ಚಾತ್ಯರೂ ಕೊಂಕು ಮಾತುಗಳನ್ನು ಬರೆದಿದ್ದಾರೆ. ದಯಾನಂದರು ತೋರಿಸಿಕೊಟ್ಟ ವೇದದ ಏಕ ದೇವ ಭಾವವು ವೇದದ್ದಲ್ಲ ವಂತೆ. ಕ್ರಿಸ್ತ ಮತ್ತು ಇಸ್ಲಾಂ ಧರ್ಮಗಳ ಪ್ರಭಾವದಿಂದ ಸನಾತನ ಧರ್ಮ ವನ್ನು ರಕ್ಷಿಸಲು, ಅವರು ತಾವಾಗಿಯೇ ಸೃಷ್ಟಿ ಮಾಡಿದ್ದುದಂತೆ! ಇದರಲ್ಲಿಯೂ ಕ್ರಿಸ್ತ ಮೊದಲಾದ ಧರ್ಮಗಳ ಪ್ರಭಾವವಿದೆಯಂತೆ. ಅಲ್ಲಿಂದೀಚೆಗೆ ಶ್ರೀ ಅರವಿಂದೋ ಅವರು ಪಾಶ್ಚಾತ್ಯರ ಕುತಂತ್ರಗಳನ್ನು ಬಯಲಿಗೆಳೆದು ವೇದಗಳ ಸ್ವರೂಪವನ್ನೂ ಅಲ್ಲಿ ಪ್ರತಿಪಾದಿತವಾಗಿರುವ ಮಹಾತತ್ವಗಳ ಪರಿಚಯವನ್ನೂ ಬಹುಸುಂದರವಾಗಿ ಮಾಡಿಕೊಟ್ಟಿದ್ದಾರೆ. ಬ್ರಹ್ಮನಿರಾಕರಣ ಮಾಡಿ ಕೇವಲ ಕರ್ಮವನ್ನೇ ಪ್ರಧಾನವೆಂದು ಬಗೆದ, ಅರ್ಧಲೋಕಾಯತರೆಂದು ಪ್ರಸಿದ್ಧರಾದ ಪೂರ್ವ ಮೀಮಾಂಸಕರ ಮತ್ತು ಅವರ ಅನುಯಾಯಿಗಳ ದಾರಿಯಲ್ಲೇ ಅಥವಾ ವೇದೇತರ ದೃಷ್ಟಿಯಿಂದ ಹೊರಟವರಿಗೆ ಶ್ರೀ ಅರವಿಂದೋ ಅವರ ದೃಷ್ಟಿಯಾಗಲೀ ಅಥವಾ ಕ್ರೈಸ್ತ ಮತದ ಸಂಪರ್ಕವೇ ಇಲ್ಲದ ಪ್ರಾಚೀನರಾದ ರಾಮಾನುಜ, ಮಧ್ವ ಮೊದಲಾದ ಸಗುಣ ಬ್ರಹ್ಮವಾದಿಗಳಾದ ಆಚಾರ್ಯರುಗಳ ಅಥವಾ ಇನ್ನೂ ಹಿಂದಿನ

ವ್ಯಾಸ, ಬೋಧಾಯನ, ಟಂಕ, ದ್ರಮಿಡಾದಿಗಳ ದೃಷ್ಟಿಯಾಗಲೀ ಸರಿಯೆಂದು ಕಾಣದಿರುವುದರಲ್ಲಿ ಆಶ್ಚರ್ಯವಿಲ್ಲ. ಇನ್ನೂ ಆಶ್ಚರ್ಯವೆಂದರೆ, ವೇದದಲ್ಲಿನ ಏಕದೇವ ಭಾವವನ್ನು ಒಪ್ಪಿದರೂ ಸಹ, ಇಂದಿನ ಭಾರತೀಯರು ನಿಜವಾಗಿಯೂ ಈ ವೇದ ಧರ್ಮದ ಅನುಯಾಯಿಗಳಲ್ಲವಂತೆ ! ಮತಾಂತರ ಗೊಂಡ ಒಬ್ಬ ಬಂಗಾಲಿ ಪಾದ್ರಿಯು ( ಕೆ ಎಮ್. ಬ್ಯಾನರ್ಜಿ ಎಂಬವನು ) ಬರೆದಿರುವಂತೆ "ಋಗ್ವೇದದ ಋಷಿಗಳು ಒಂದು ವೇಳೆ ನಮ್ಮ ಲೋಕಕ್ಕೆ ಈಗ ಹಿಂತಿರುಗುವಂತಾದರೆ ಅವರು ಖಂಡಿತವಾಗಿಯೂ ಇಲ್ಲಿನ ಮತಾಂತರ ಗೊಂಡ ಕ್ರೈಸ್ತರನ್ನು, ಆ ಋಷಿಗಳ ಗೋತ್ರದವರೆಂದೂ ಅನುಯಾಯಿ ಗಳೆಂದೂ ಕರೆದುಕೊಳ್ಳುತ್ತಿರುವವರಿಗಿಂತಲೂ ಹೆಚ್ಚು ಒಪ್ಪುವ ರೀತಿಯಲ್ಲಿ ನಿಜವಾದ ಉತ್ತರಾಧಿಕಾರಿಗಳು ಎಂದು ಗುರುತು ಹಚ್ಚುತ್ತಿದ್ದರಂತೆ." ಈಗ ಕ್ರೈಸ್ತಪಾದ್ರಿಗಳ. ವೇದಗಳ ಬಗೆಗಿನ ತಮ್ಮ ಗ್ರಂಥಗಳ ನಿಜವಾದ ಉದ್ದೇಶವು ಸ್ಪಷ್ಟವಾಗುವುದು ! ಇದ್ದದ್ದರಲ್ಲಿ ಬಹಳ ಮಟ್ಟಿಗೆ ಪಾಶ್ಚಾತ್ಯರ ದೇವರ ಕಲ್ಪನೆಯನ್ನು ಹೋಲುವವನು ವರುಣನಂತೆ ! ಆದರೆ ಮುಂದೆ ವರುಣನಿಗೆ ಸರಿಯಾದ ಸ್ಥಾನಮಾನಗಳು ಸಿಕ್ಕದೆ ಅವನು "ಪತನ"ಗೊಂಡುದು ವೇದ ಸಾಹಿತ್ಯದ ದೊಡ್ಡ ದುರಂತವಂತೆ ! ಆದರೂ ಶತಮಾನಗಳ ನಂತರ ಇಲ್ಲಿ "ಪತನ"ಗೊಂಡ ವರುಣನೇ ಪಶ್ಚಿಮದಲ್ಲಿ ಇವನ ಉತ್ತರಾಧಿಕಾರಿಯಾಗಿ ಕ್ರಿಸ್ತನಾಗಿ ಹುಟ್ಟಿದನುತೆ ! "ಅಂದಮೇಲೆ ಭಾರತೀಯರು ಶಿಲುಬೆಗೇರಿದ ಕ್ರಿಸ್ತನನ್ನು ಬಿಟ್ಟು ಧಾರ್ಮಿಕರಾಗಿರಲು ಸಾಧ್ಯವೆ ?" ಎಂಬ ಕೆಟ್ಟ ಧ್ವನಿಯು ಳ್ಳ ಪ್ರಶ್ನೆಯೊಂದಿಗೆ ಒಬ್ಬ ಪಾದರಿಯು ಋಗ್ವೇದದ ಬಗೆಗೆ ತನ್ನ "ಪ್ರಸಿದ್ಧ" ಗ್ರಂಥವೊಂದನ್ನು ಮುಗಿಸಿದ್ದಾನೆ. [ ದಿ ರಿಲಿಜನ್ ಆಫ್ ದಿ ಋಗ್ವೇದ ಬೈ ಎಚ್. ಡಿ. ಗ್ರೈಸ್ವಾಲ್ಡ್ ಪುಟಗಳು ೩೭೩–೩೭೫] ಇದೇ ಉಳಿದೆಲ್ಲ ಪಾಶ್ಚಾತ್ಯರ, ( ಬ್ಲೂಮ್ ಫೀಲ್ಡ್ ಮೊದಲಾದವರ ) ಸಾಮಾನ್ಯ ಧೋರಣೆ. ಭಾರತೀಯರಾದ ನಾವು ಇನ್ನಾದರೂ ಎಚ್ಚೆತ್ತು ಈ ಗೊಂದಲ ಗಳ ನಡುವೆ ವೇದಗಳ ಬಗೆಗೆ, ದೇವರು–ದೇವತೆಗಳ, ಬಗೆಗೆ ಸರಿಯಾದ ಜ್ಞಾನ ಪಡೆಯುವುದು ಆದ್ಯ ಕರ್ತವ್ಯ. ಧರ್ಮವೇ ಭಾರತೀಯನ ಜೀವ ನದ ಉಸಿರೆಂಬುದು ಇನ್ನೂ ನಿಜವಾಗಿದ್ದರೆ ಇದಕ್ಕೆ ಎರಡನೆಯ ಮಾತು ಇನ್ನೊಂದಿರಲಾರದು.

॥ ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ॥

# ೯. ವರುಣ ಮತ್ತು ಋತ

"ವೃ" ಎಂದರೆ ಸುತ್ತುವರಿಯುವುದು, ಅಥವಾ ಆಚ್ಛಾದನೆ ಮಾಡು ವುದು ಎಂಬ ಧಾತುವಿನಿಂದ ಈ ಶಬ್ದ ಉಂಟಾಗಿದೆ. ಅಂದರೆ ವರುಣನು ಭಗವಂತನ ಸರ್ವಗತತ್ತ್ವ, ಸರ್ವ ವ್ಯಾಪಿತ್ವ ಗುಣದ ಅಂಶ ಸಂಭೂತನಾಗಿದ್ದಾನೆ "ಪಾಪ ಮಾಡುವವನನ್ನು ತನ್ನ "ಪಾಶ" ದಿಂದ ಬಿಗಿದು ಶಿಕ್ಷಿಸುವನಾದುದರಿಂದ, ಮತ್ತು ಕತ್ತಲೆ ಎಂಬ ಸಂಕೇತದಿಂದ ಸೂಚಿತವಾದ ಮನುಷ್ಯನ ಅಂತರ್ಮುಖ ಜೀವನದ ಅವ್ಯಕ್ತಾಂಶಕ್ಕೆ ಅಭಿಮಾನಿಯಾದುದರಿಂದ ವರುಣನೆಂಬ ಹೆಸರು ಉಂಟಾಯಿತೆಂದು ತೈತ್ತಿರೀಯ ಬ್ರಾಹ್ಮಣದ (1-7-10) ವ್ಯಾಖ್ಯಾನದಲ್ಲಿ ಸಾಯಣಾಚಾರ್ಯರು, ಹೀಗೆ ಸೂಚಿಸಿರುತ್ತಾರೆ: "ವೃಣೋತಿ ಪಾಪಕೃತಃ ಸ್ವಕೀಯೈಃ ಪಾಶೈಃ ಆವೃಣೋತಿ ಇತಿ ರಾತ್ರಿ ಅಭಿಮಾನೀ ದೇವಃ ವರುಣಃ । ಶ್ರೂಯತೇ ಚ— ವಾರುಣೀ ರಾತ್ರಿಃ ಇತಿ ॥" ಸಾಮಾನ್ಯವಾಗಿ ವರುಣನು ಮಿತ್ರನ ಕೂಡಿಯೇ ಅನೇಕ ಸೂಕ್ತಗಳಲ್ಲಿ ಸ್ತುತಿಸಲ್ಪಡುತ್ತಾನೆ. ಮಿತ್ರನಿಲ್ಲದೆ, ವರುಣನಿಗೇ ಕೆಲವು ಸೂಕ್ತಗಳು ಇದ್ದರೂ ವರುಣನಿಲ್ಲದೆ, ಮಿತ್ರನಿಗೆ ಸೂಕ್ತಗಳು ಕೇವಲ ಅಪರೂಪ. ಇದರಲ್ಲೊಂದು ಒಳ ಅರ್ಥವಿದೆ. ಮಿತ್ರಾ ವರುಣರ ಸಾಹಚರ್ಯವು "ಹಗಲು ರಾತ್ರಿ" ಗಳ ಸಾಹಚರ್ಯಕ್ಕೆ ಸಮಾನಾರ್ಥದ ಸಂಕೇತ. ಮಿತ್ರನು ಹಗಲಿಗೆ ಅಭಿಮಾನಿ ದೇವತೆ ಎಂಬುದು ವೇದ ಭಾಷ್ಯಕಾರರಮತ. ವರುಣನು ರಾತ್ರಿ ಅಭಿಮಾನಿ ಎಂಬುದು ಆಗಲೇ ಉಕ್ತವಾಗಿದೆ. ಬಾಹ್ಯ ಲೋಕದ ಪ್ರಸಿದ್ಧ ಹಗಲು ರಾತ್ರಿಗಳಲ್ಲದೆ, ಮನುಷ್ಯನ ಎಚ್ಚರ ಮತ್ತು ನಿದ್ರೆ ಈ ಅವಸ್ಥೆಗಳಿಗೂ ಮಿತ್ರಾವರುಣರು ಒಡೆಯರು. ಅಂದರೆ, ಹಗಲಿನಲ್ಲಿ ಭಗವಂತನ ಯಾವ ಅಂಶವೂ ಮಿತ್ರ ಸ್ವರೂಪವಾಗಿ ಮಾನವ ಜೀವನವನ್ನು ಮತ್ತು ಸಮಸ್ತ ಜೀವಲೋಕವನ್ನು ನಿಯಂತ್ರಿಸುವುದೋ, ಅದೇ ಅಂಶವು ರಾತ್ರಿಯಲ್ಲಿ ವರುಣ ಸ್ವರೂಪದಿಂದ ಅದೇ ಕರ್ತವ್ಯವನ್ನು ನಿರ್ವಹಿ

ಸುವುದು. ಸಂಧ್ಯಾವಂದನದಲ್ಲಿ ಪ್ರಾತಃಕಾಲದಲ್ಲಿ "ಮಿತ್ರಸ್ಯ" ಇತ್ಯಾದಿ. ಮಂತ್ರದಿಂದಲೂ, ರಾತ್ರಿಯಲ್ಲಿ "ಇಮಂಮೇವರುಣ" ಇತ್ಯಾದಿ ಮಂತ್ರ ದಿಂದಲೂ ಗಾಯತ್ರೀ ಉಪಸ್ಥಾನವನ್ನು ಮಾಡುವುದು ಇದೇ ಅರ್ಥದಲ್ಲಿ.

ಅಂಧಕಾರದಂತೆ, ಅದರೊಡನೆಯೇ ನಮ್ಮ ರಕ್ಷಕನಾಗಿ ಸರ್ವತ್ರ ವ್ಯಾಪಿ ಸಿರುವುದರಿಂದಲೂ, "ವರುಣ"ನೆಂದು ನಿರ್ವಚನವಿದೆ. ತೈತ್ತಿರೀಯ ಸಂಹಿತೆಯ ೬ನೇ ಕಾಂಡದ ೪ನೇ ಪ್ರಶ್ನದಲ್ಲಿ ಹಗಲನ್ನು ಮಿತ್ರನೂ, ರಾತ್ರಿ ಯನ್ನು ವರುಣನೂ, ನಿರ್ಮಿಸಿದರೆಂದು ಹೇಳಿರುತ್ತದೆ. ಅಸ್ತಮಯನಾದ ಸೂರ್ಯನೇ ಕಣ್ಣಿಗೆ ಕಾಣದ ವರುಣನೆಂದೂ ಸಹ ಹೇಳಲ್ಪಡುತ್ತಾನೆ ಎಂಬು ದಾಗಿ ಭಾಷ್ಯಕಾರರು ವಿವರಿಸಿದ್ದಾರೆ. (ಅಸ್ತಂಗಚ್ಛನ್ ಸೂರ್ಯ ಏವ ವರುಣ ಇತ್ಯುಚ್ಯತೇ). "ಈ ಪೃಥ್ವಿಯನ್ನೇ ಮಿತ್ರನೆಂದೂ, ದ್ಯುಲೋಕ ವನ್ನೇ ವರುಣ"ನೆಂದೂ ಶತಪಥ ಬ್ರಾಹ್ಮಣವು ವರ್ಣಿಸುತ್ತದೆ (XII-9) "ಸೂರ್ಯನು ಮಿತ್ರಾ ವರುಣರಿಗೆ ಕಣ್ಣಾಗಿದ್ದಾನೆ" ಎಂಬ ವಿಷಯ ಅನೇಕ ಕಡೆಗಳಲ್ಲಿ ಹೇಳಲ್ಪಟ್ಟಿದೆ: "ಚಕ್ಷುಃ ಮಿತ್ರಸ್ಯ ವರುಣಸ್ಯ ಅಗ್ನೇಃ" (ಋಕ್ ಸಂಹಿತಾ, ಮಂಡಲ ೧ ಸೂಕ್ತ ೧೫). "ನಮೋ ಮಿತ್ರಸ್ಯ ವರು ಣಸ್ಯ ಚಕ್ಷಸೇ" (ಋಕ್ ಸಂಹಿತಾ ಮಂಡಲ ೧೦ ಸೂ. ೩೭)

ಅದಿತಿಯ ಹನ್ನೆರಡು ಮಕ್ಕಳಾದ ದ್ವಾದಶಾದಿತ್ಯರಲ್ಲಿ ಮಿತ್ರನನ್ನೂ, ವರುಣನನ್ನೂ ಸೇರಿಸಲಾಗಿದೆ ಪ್ರಜ್ವಲಿತವಾದ ಅಗ್ನಿಯೇ ಮಿತ್ರನೆಂದೂ, ಈ ಮಿತ್ರನೇ ಯಜ್ಞದಲ್ಲಿ ಹೋತೃ, ಅಧ್ವರ್ಯು, ವರುಣ ಮತ್ತು ಜಾತ ವೇದಸನೂ ಆಗಿರುವನೆಂದು ಕೆಲವು ಕಡೆ ಹೇಳಿದೆ. (ಋಕ್ ಸಂಹಿತಾ ೩ನೇ ಮಂಡಲ ಸೂ ೫). ಅದಿತಿಯು ಪುತ್ರ ಕಾಮಳಾಗಿ ಪಡೆದ ಎಂಟು ಮಕ್ಕಳಲ್ಲಿ ಮಿತ್ರಾ ವರುಣರೂ ಪ್ರಸಿದ್ಧರೆಂದೂ ತೈತ್ತಿರೀಯ ಬ್ರಾಹ್ಮಣ ತಿಳಿಸುತ್ತದೆ. ವರುಣನ ಸಾಮರ್ಥ್ಯದಲ್ಲಿ ಇಂದ್ರ ಸಮಾನನೆಂದೂ, ಅವನ ವ್ಯಾಪಾರ ಗಳಲ್ಲಿ ನೈತಿಕ ವ್ಯಾಪಾರಗಳಿಗೆ ಹೆಚ್ಚು ಪ್ರಾಧಾನ್ಯ ಉಂಟೆಂದೂ ವರ್ಣಿಸ ಲಾಗಿದೆ ವರುಣನಿಗೆ ದೂರದೃಷ್ಟಿ ಉಂಟು ಎಂಬುದಾಗಿ (ಉರುಚಕ್ಷಸಂ) ವೇದವು ಘೋಷಿಸುತ್ತದೆ, ಮಿತ್ರಾ ವರುಣರಿಗೆ ಮೇಲಿನ ಲೋಕದಲ್ಲಿ ಸುವರ್ಣಮಯವಾದುದೂ ಸಹಸ್ರಸ್ತಂಭಗಳನ್ನುಳ್ಳದೂ, ಸಹಸ್ರದ್ವಾರ ಗಳನ್ನುಳ್ಳದೂ ಆದ ಪ್ರಾಸಾದವು ಇರುವುದಾಗಿ ತಿಳಿದು ಬರುತ್ತದೆ.

ವರುಣನು, ಮನುಷ್ಯರಿಗಷ್ಟೇ ಅಲ್ಲದೆ ಸಕಲದೇವತೆಗಳಿಗೂ ರಾಜನೆಂಬುದಾಗಿ ವರ್ಣಿಸಲ್ಪಟ್ಟಿದ್ದಾನೆ. ವರುಣನ ಮುಖ್ಯ ಕರ್ತವ್ಯ — ಸಮಸ್ತ ವಿಶ್ವವನ್ನೂ ನೀತಿ ನಿಯಮಗಳಿಗೆ ಒಳಪಡಿಸುವುದು. ( ಅದಬ್ಧಾನಿ ವರುಣಸ್ಯ ವ್ರತಾನಿ ). ಋತವೆಂದರೆ ವಿಶ್ವದಲ್ಲಿರುವ ಸಮಸ್ತ ವಸ್ತುಜಾತಗಳ ಸ್ವಾಭಾವಿಕ ದೈವ ನಿಯಮ. ಅಗ್ನಿ ಉಷ್ಣವಾಗಿರಬೇಕೆಂದೂ, ಜಲವು ಶೀತವಾಗಿರಬೇಕೆಂದೂ, ಸೂರ್ಯೋದಯ ಅಸ್ತಮಯ, ಕಾಲಕಾಲಕ್ಕೆ ಆಗಬೇಕೆಂದೂ, ಋತುಗಳು ಒಂದಾದ ಮೇಲೊಂದು ಕ್ರಮವಾಗಿ ಬರಬೇಕೆಂದೂ. ನದಿಗಳು ಸಮುದ್ರವನ್ನೇ ಸೇರಬೇಕೆಂದೂ, ಹೀಗೆ ಭೌತಿಕ ಪ್ರಪಂಚದಲ್ಲಿ ಅಷ್ಟೇ ಅಲ್ಲದೆ ಮಾನವರಲ್ಲಿಯೂ ಪರಸ್ಪರ ನೀತಿ–ನಿಬಂಧನೆಗಳ ಮೂಲಕ ಸುಖ ಶಾಂತಿಗಳನ್ನು ಕಲ್ಪಿಸುವುದೂ, ದೇವತೆಗಳಿಗೂ ಮನುಷ್ಯರಿಗೂ ಸರಿಯಾದ ಸಂಬಂಧವನ್ನು ಕಲ್ಪಿಸಿ ಅವು ಒಂದೇ ರೀತಿಯಲ್ಲಿ ಇರುವಂತೆ ನಡೆಸಿಕೊಂಡು ಹೋಗುವುದೂ ವರುಣನ ಮುಖ್ಯ ಕರ್ತವ್ಯ. ಇದಕ್ಕಾಗಿಯೇ ಅವನನ್ನು ಋತಪಾಲನೆಂದೂ, "ಋತಸ್ಯಗೋಪಾಃ" ಎಂದೂ ಧೃತವ್ರತನೆಂದೂ ಕರೆದಿರುವುದಾಗಿ ವೇದವೇ ಹೇಳುತ್ತದೆ. ಸಮಸ್ತ ಜಗತ್ತೂ ಈ ಸಾಂಕೇತಿಕವಾದ ವರುಣ "ಪಾಶ" ದಿಂದ ಬಿಗಿಯಲ್ಪಟ್ಟಿದೆ, (ಆಸಿದದ್ ವಿಶ್ವಾ ಭುವನಾನಿ ಸಮ್ರಾಟ್ ವಿಶ್ವೇತ್ತಾನಿ ವರುಣಸ್ಯ ವ್ರತಾನಿ ॥ ಋಕ್ ಸಂಹಿತಾ ೮ನೇ ಮಂಡಲ ಸೂ ೪೨). ದೇವತೆಗಳಲ್ಲಿ "ಸಮ್ರಾಟ್" ಶಬ್ದವು ಇವನೊಬ್ಬನಿಗೇ ಈ ಕಾರಣಕ್ಕಾಗಿ ಉದ್ದೇಶಿಸಲ್ಪಟ್ಟಿದೆ. ನೀರಿನಲ್ಲಿ ಅಗ್ನಿಯನ್ನೂ ಆಕಾಶದಲ್ಲಿ ಸೂರ್ಯನನ್ನೂ ಪರ್ವತದ ಮೇಲೆ ಸೋಮನನ್ನೂ ಇಟ್ಟವನು ಇವನೇ ; ಸೂರ್ಯನಿಗೆ ಸಂಚಾರಾರ್ಥವಾಗಿ, ದೊಡ್ಡದಾರಿಯನ್ನು ಮಾಡಿದವನೂ ಇವನೇ. ಋತುಗಳನ್ನು ವಿಭಜಿಸಿ. ವರ್ಷಕ್ಕೆ ಹನ್ನೆರಡು ತಿಂಗಳುಗಳನ್ನು ಮಾಡಿದವನೂ ಇವನೇ ಎಂದೂ, ತೈತ್ತಿರೀಯ ಸಂಹಿತೆಯು (II-1-7-4 )ಮತ್ತು (ಋಕ್ ಸಂಹಿತೆ I 25 8 ) ಹೇಳುತ್ತವೆ ಮೇಲೆ ಹೇಳಿದ ಋತವನ್ನು ನದಿಗಳಿಗೆ ಹೋಲಿಸಿ ಈ ಉದಕ ಪ್ರವಾಹವನ್ನು ಕ್ರಮಪಡಿಸುವವನು ವರುಣನೆಂಬುದಾಗಿ ವರ್ಣಿಸಲಾಗಿದೆ. " ನದಿಗಳು " ಪ್ರವಹಿಸುವುದೇ ಇವನ ಆಜ್ಞೆಯಂತೆ. (ಋಕ್ ಸಂಹಿತೆ II- 8-4) ಇವನಿಗೆ ವಿಚಿತ್ರವಾದ ಈ ವಿಶ್ವವನ್ನು ನಡೆಸಿಕೊಂಡು ಹೋಗುವ ಶಕ್ತಿ ಉಂಟೆಂದೂ, ಈ ಶಕ್ತಿ

ಯನ್ನು "ಮಾಯೆ" ಎಂದೂ ಅನೇಕ ಕಡೆಗಳಲ್ಲಿ ಹೇಳಿದೆ. ಇದು ಜಗದನು ಗ್ರಹಕಾರಕ ಶಕ್ತಿಎಂತಲೂ, ಒಳ್ಳೆಯ ಅರ್ಥದಲ್ಲಿಯೇ ("ಭ್ರಮೆ" ಎಂಬರ್ಥದಲ್ಲಿ ಅಲ್ಲ) ಬಳಸಲ್ಪಟ್ಟಿದೆ. ನದಿಗಳು ಸರ್ವದಾ ವೇಗವಾಗಿ ಬಂದು ಸೇರು ತ್ತಿದ್ದರೂ ಸಮುದ್ರವು ತುಂಬದಿರುವುದು ವರುಣನ ಈ "ಮಾಯೆ" ಯಿಂದಲೇ ಎಂದೂ ಋಕ್ ಸಂಹಿತೆ (V-8 5) ತಿಳಿಸುತ್ತದೆ. ಅಷ್ಟೇಕೆ, ನದಿಗಳೆಲ್ಲವೂ ವರುಣನ ಪತ್ನಿಯರೆಂದೂ ತೈತ್ತಿರೀಯ ಸಂಹಿತೆ (V-5) ತಿಳಿಸುತ್ತದೆ. (ಆಪೋ: ವರುಣಸ್ಯ ಪತ್ನಯಃ ಆಸನ್) "ನೀರನ್ನು" ನಡೆಸುವವರೇ ಮಿತ್ರಾ ವರುಣರೆಂದು ತೈತ್ತಿರೀಯ ಸಂಹಿತೆ (VII-4 ತಿಳಿಸುತ್ತದೆ. (ಮಿತ್ರಾವರುಣೌ ವಾ ಅಪಾಂ ನೇತಾರೌ).

ಹೀಗೆ ಸಾಂಕೇತಿಕ ಭಾಷೆಯಲ್ಲಲ್ಲದೆ, ಸ್ಪಷ್ಟವಾಗಿಯೇ ವರುಣನ ಶಾಸನಗಳನ್ನು ಭದ್ರವಾಗಿ ಸ್ಥಾಪಿಸಲಾಗಿದೆಯೆಂದೂ ವರ್ಣಿಸುವ ಸೂಕ್ತಗಳೂ ಇವೆ. "ಹಾರುವ ಪಕ್ಷಿಗಳು, ಪ್ರವಹಿಸುವ ನದಿಗಳು, ಗತಿಯುಳ್ಳ ಯಾವುದೇ ಪ್ರಾಣಿಯೂ ಇವನ ಗಡಿಯನ್ನು, ಶಕ್ತಿಯನ್ನು, ಮೀರಲಾರವು. ಇವನ ಕೋಪವನ್ನು ಯಾರೂ ತಾಳಲಾರರು. ವರುಣನು ಸರ್ವಜ್ಞನು. ತ್ರಿಕಾಲಜ್ಞಾನಿ. ಸತ್ಯಾಸತ್ಯಗಳನ್ನು ಸರ್ವದಾ ನೋಡುತ್ತಿರುತ್ತಾನೆ. ಅಂತ ರಂಗ ಬಹಿರಂಗ ಜೀವನಗಳಲ್ಲಿ ಮನುಷ್ಯನು ಏನನ್ನೂ ಇವನಿಂದ ಮುಚ್ಚಿಡ ಲಾರನು. ಇವನು ನಿಯಮಗಳನ್ನು ಉಲ್ಲಂಘಿಸುವ ಪಾಪಿಗಳಿಗೆ, ನಿರ್ದಾ ಕ್ಷಿಣ್ಯವಾಗಿ, ಕ್ರೂರ ಶಿಕ್ಷೆಯನ್ನು ವಿಧಿಸುವನು." ಭಯಂಕರವಾದ ಈ ವರುಣ ಪಾಶವು ಋಕ್ ಸಂಹಿತೆಯ ಅನೇಕ ಕಡೆಗಳಲ್ಲಿ ವರ್ಣಿಸಲ್ಪಟ್ಟಿದೆ. (I-24-25, VI-74, X 85 ಇತ್ಯಾದಿ). ಆದರೆ ಈ "ಪಾಶ" ವು ಅನೃತ ವಾದಿಯನ್ನು ಮಾತ್ರ ಬಂಧಿಸುತ್ತದೆ. "ಅನೃತ" ವೆಂದರೆ "ಋತ" ಕ್ಕೆ ವಿರುದ್ಧವಾದ ಪ್ರವೃತ್ತಿ. ಸತ್ಯವಾದಿಯ ಹತ್ತಿರವೂ ಈ ಪಾಶ ಹೋಗುವುದಿಲ್ಲ. ಹಗ್ಗವಿಲ್ಲದೆಯೇ ಕಟ್ಟುವ ವರುಣನ ಈ ಪಾಶವು ವಿಚಿತ್ರವಾದುದು. ವರುಣನು, ಪಾಶ ಬಂಧನದಲ್ಲಿ ಹೇಗೋ ಹಾಗೆ ಪಾಶ ವಿಮೋಚನದಲ್ಲಿಯೂ ಸಮರ್ಥನು. ತಿಳಿಯದೆ ಅನೃತವನ್ನು ಎಸಗಿದ ಪಾಪಿಯು ಪಶ್ಚಾತಾಪ ಪಟ್ಟರೆ ಪಾಶದಿಂದ ಬಿಡಿಸಿ, ಪಾಪವನ್ನು ಪರಿಹರಿಸಿ

ಕೃಪೆ ತೋರಿಸುತ್ತಾನೆ. ಅಲ್ಲದೆ ಒಬ್ಬ ಮಾನವನ ಪೂರ್ವಿಕರು ಮಾಡಿದ ಪಾಪಗಳಿಂದಲೂ ಅವನನ್ನು ಬಿಡುಗಡೆ ಮಾಡಬಲ್ಲನು. ಜಾರಿತ್ತು ಋತವನ್ನು ಉಲ್ಲಂಘಿಸಿದರೂ ಕ್ಷಮೆ ತೋರಿಸುವನು.

ಇವನು ವೈದ್ಯನೂ ಹೌದು. ಮಾನಸಿಕವಾಗಿಯೂ ಭೌತಿಕವಾಗಿಯೂ ರೋಗಗಳನ್ನು ಗುಣಪಡಿಸಬಲ್ಲನು. ಅಷ್ಟೇಕೆ, ಒಟ್ಟಿನಲ್ಲಿ, ರಕ್ಷಕನೂ ಭಕ್ಷಕನೂ ಆಗಬಲ್ಲ ಈ ವರುಣನ ಮಹಿಮೆಯನ್ನು ಎಷ್ಟು ಹೇಳಿದರೂ ಕಡಿಮೆಯೇ.

ಇಂತಹ ವರುಣನನ್ನು ಸ್ತೋತ್ರ ಮಾಡಿರುವ ವೈದಿಕ ಋಷಿಗಳಲ್ಲಿ ವಸಿಷ್ಠರೇ ಮುಖ್ಯರು. ಇವರಿಗೆ ಮೈತ್ರಾವರುಣೀ ಎಂಬ ಹೆಸರು ಈ ಕಾರಣಕ್ಕಾಗಿಯೇ ಬಂದಿರುವಂತಾಗಿದೆ. ಇವರು ಸೂಕ್ತಗಳಲ್ಲಿ ಮಿತ್ರನನ್ನೂ ವರುಣನನ್ನೂ ಕೂಡಿಸಿಯೇ ಸ್ತುತಿಸಿರುವದು ಸರ್ವಸಾಮಾನ್ಯ. ವರುಣನನ್ನು ಪ್ರತ್ಯಕ್ಷ ಮಾಡಿಕೊಂಡ ಧೀರರಿವರು. ಅವನನ್ನು ಸರ್ವದಾ ಕಾಣುವ ಬಯಕೆಯನ್ನು ಇವರು ವ್ಯಕ್ತಪಡಿಸಿರುವ ಸೂಕ್ತಗಳು, ಹೃದಯವನ್ನು ಕಲಗಿಸುವಂತಿವೆ :—

"ಸಶರೀರನಾದ ವರುಣನ ಎದುರಿಗೆ ನಿಂತು ಎಂದಿಗೆ ಸಂಭಾಷಣೆಯನ್ನು ಮಾಡಬಲ್ಲೆನು ? ಎಂದಿಗೆ ಅವನ ಹೃದಯವನ್ನು ಹೊಗಬಲ್ಲೆನು ? ಎಂದಿಗೆ ಕೃಪಾಸಮುದ್ರನಾದ ವರುಣನು, ನನ್ನ ಸ್ತೋತ್ರವನ್ನು ಕೇಳಿ ಆನಂದಿಸುವನು ? ಎಲೈ ವರುಣ ದೇವನೇ, ನಿನ್ನ ಸಾಕ್ಷಾತ್ ದರ್ಶನವನ್ನು ನಾನು ಪಡೆಯದಂತೆ ಮಾಡಿರುವ ಪಾಪವಾದರೂ ಯಾವುದು ? ನೀನೇ ಹೇಳಬೇಕು. ಈ ವಿಷಯವನ್ನು ತಿಳಿಯುವ ಆಸೆಯಿಂದ ಪ್ರಾಜ್ಞರಾದ ಋಷಿಗಳನ್ನು ಕೇಳಿದಾಗ ಅವರು. ನನ್ನ ವಿಷಯದಲ್ಲಿ ವರುಣ ದೇವನು ಕ್ರುದ್ಧನಾಗಿರುವುದಾಗಿ ತಿಳಿಸಿದರು; ಹೇ ವರುಣ ದೇವ! ನನ್ನ ಯಾವ ಮಹಾ ಪಾಪದ ನಿಮಿತ್ತ ನನ್ನನ್ನು ಕೊಲ್ಲಲು ಇಚ್ಛಿಸುವೆ? ನನ್ನ ಪಾಪದ ಸ್ವರೂಪವನ್ನಾದರೂ ನನಗೆ ತಿಳಿಸು; ಮತ್ತು ನನ್ನ ವಂಶದಲ್ಲಿ ಹಿಂದಿನಿಂದ ಬಂದ ಪಾಪಗಳಿಂದಲೂ, ನನ್ನ ಶರೀರದಲ್ಲಿ, ನಾನಾಗಿ ಮಾಡಿದ ಪಾಪ

ಗಳಿಂದಲೂ, ನನ್ನನ್ನು ಬಿಡಿಸು. ಕಳ್ಳನು ತನ್ನ ಚೌರ್ಯಕ್ಕೆ ಪ್ರಾಯಶ್ಚಿತ್ತ ಮಾಡಿ ಕೊಂಡು ಪಶುಗಳಿಗೆ ಹುಲ್ಲನ್ನು ಕೊಟ್ಟು ತೃಪ್ತಿಪಡಿಸುವಂತೆಯೂ ಆಕಳ ಹತ್ತಿರ ಹೋಗಿ ಸೇರಲು ಆತುರವುಳ್ಳ ಕರುವಿನಂತೆಯೂ ಇರುವ ನನ್ನನ್ನು ನಿನ್ನ ಪಾಶದಿಂದ ಬಿಡಿಸು. ನಾನು ಬುದ್ಧಿಪೂರ್ವಕವಾಗಿ ಪಾಪ ಮಾಡಿದವನಲ್ಲ. ನಮ್ಮ ಬುದ್ಧಿಯನ್ನು ಮಂದಮಾಡುವ ಮದ್ಯ, ಕ್ರೋಧ, ಅನರ್ಥ ಸಾಧನವಾದ ದ್ಯೂತ, ಅಜ್ಞಾನ, ಮತ್ತು ಅವಿವೇಕ ಇವು ಮಾನವ ರಾದ ನಮ್ಮ ಪಾಪಗಳಿಗೆ ಪ್ರೇರಕಗಳು. ನಾವಾದರೋ ಅಶಕ್ತರು, ನೀನೋ ಬಲವಂತನು. ಸ್ವಪ್ನವೂ ಸಹ ಪಾಪಕ್ಕೇ ಪ್ರೇರಿಸುತ್ತದೆ. ಅಲ್ಲಿ ಸ್ವತಂತ್ರನಲ್ಲದ ನನ್ನನ್ನು ನೀನೇ ಬಿಡಿಸಬೇಕು. ನಮಗೆ ಜ್ಞಾನವನ್ನು ಅನುಗ್ರಹಿಸಿ. ಪ್ರಜ್ಞೆ ಯನ್ನು ಮೂಡಿಸಿ ಮುಕ್ತನಾಗಿಸುವ ಹೊಣೆ, ಜಗತ್ತಿಗೆ ಧಾರಕನೂ ಪತಿಯೂ ಸಕಲ ದೇವಾತ್ಮಕನೂ ಆದ ನಿನ್ನದೇ ಆಗಿದೆ. ನನ್ನ ಈ ಸೂಕ್ತವು ನಿನ್ನ ಹೃದಯವನ್ನು ಕರಗಿಸಲಿ. ನಮಗೆ ಉಪದ್ರವಕಾರಿಗಳಾದ ಶಕ್ತಿಗಳ ನಾಶ- ವಾಗಲಿ. ನಮ್ಮ-ನಿನ್ನ ಸಂಬಂಧವು ಸುಖಕರವೂ ಮಂಗಳಕರವೂ ಆಗಲಿ." (ಋಕ್ ಸಂಹಿತೆ ಮಂಡಲ VII-೮೬).

ವರುಣನಿಗೆ ಶೀಘ್ರ ಗಾಮಿಗಳಾದ, ಶ್ರೇಷ್ಠರೂಪವುಳ್ಳ ಸಕಲ ಲೋಕ ಸಂಚಾರ ಶಕ್ತಿಯುಳ್ಳ, ಅನೇಕ ಚಾರರು ಉಂಟೆಂದೂ, ಅವರು ಸರ್ವದಾ ಲೋಕಗಳನ್ನು ನಿರೀಕ್ಷಿಸುತ್ತಿರುವರೆಂದೂ ವರ್ಣಿಸಲಾಗಿದೆ. ವರುಣನೇ ಸರ್ವಜ್ಞಾನ ಪ್ರವರ್ತಕನೆಂದೂ ವಾಕ್ ತತ್ವವನ್ನೂ ಅದರ ಇಪ್ಪತ್ತೊಂದು ಪ್ರಭೇದಗಳನ್ನೂ, ಎದೆ, ಕಂಠ, ಶಿರಸ್ಸು ಹೀಗೆ ಮೂರು ಸ್ಥಾನಗಳಲ್ಲೂ ವ್ಯಾಪಿಸಿರುವ ಶಬ್ದ ತತ್ವವನ್ನೇ ಮೇಧಾವಿಯಾದ ವರುಣನು, ಯೋಗ ಯುಕ್ತರೂ, ಶಿಷ್ಯ ವೃತ್ತಿಯನ್ನು ಮಾಡಿದವರೂ ಆದ, ವಸಿಷ್ಠರಿಗೆ ಸ್ವಯಂ ಉಪದೇಶಿಸಿದುದಾಗಿಯೂ, ಪರಮಪದದ, ರಹಸ್ಯಗಳನ್ನೂ ಕೂಡ ತಿಳಿಸಿದಾ ದಾಗಿಯೂ ವಸಿಷ್ಠರು ಹೇಳಿಕೊಂಡಿದ್ದಾರೆ. (ಮಂಡಲ VII- ಸೂ, ೮೭ ಮಂತ್ರ ४).

ಶರೀರವೇ ಮರದಿಂದ ಮಾಡಿದ ನೌಕೆಯಂತೆ. ಅದರಲ್ಲಿ ವರುಣನೂ ವಸಿಷ್ಠರೂ ಒಟ್ಟಿಗೆ ಹತ್ತಿ ಗಹನವಾದ ಸಮುದ್ರದಂತಿರುವ ಋತದ ಮಧ್ಯ

ದಲ್ಲಿ ಸಂಚರಿಸಿ ಕ್ರೀಡಿಸುವಂತೆ ಅನೇಕ ಕಡೆಗಳಲ್ಲಿ ವರ್ಣಿಸಲಾಗಿದೆ. "ಮಣ್ಣಿನ ಮನೆಯಿಂದ ತಮ್ಮನ್ನು ವರುಣನು ಚಿನ್ನದ ಮನೆಗೆ ಕರೆದುಕೊಂಡು ಹೋಗುವಂತೆ, ಮಾಡಿದ ವಸಿಷ್ಠರ ಪ್ರಾರ್ಥನೆಯಲ್ಲಿ ಸಾಂಕೇತಿಕ ಅರ್ಥ ಸ್ಪಷ್ಟವಾಗಿದೆ. (VII-89-1)

ನೀರಿನ ಮಧ್ಯೆಯೇ ನಿಂತಿರುವ ಮನುಷ್ಯನಿಗೆ ಬಾಯಾರಿದಾಗ ಕುಡಿಯಲು ಒಂದು ಹನಿ ನೀರೂ ಸಿಕ್ಕದಿರುವಂತೆ ಉಪ್ಪುನೀರಿನ ಸಮುದ್ರಮಧ್ಯದಲ್ಲಿ ನಿಂತಿರುವ ತಮ್ಮ ದಾಹವನ್ನು ತೀರಿಸುವಂತೆ ಕೇಳಿಕೊಳ್ಳುವ ವಸಿಷ್ಠರ ಮಾತಿನಲ್ಲಿಯೂ ಸಾಂಕೇತಿಕ ಅರ್ಥವಿದೆ (ಮಂಡಲ VII-೮೯-೪).

ವರುಣನಿಗೆ ಏಳು ಸಹೋದರಿಯರೂ ಇರುವುದಾಗಿಯೂ ತಿಳಿದುಬರುತ್ತದೆ. (ಈ ತತ್ವದ ವಿಷಯಕ್ಕೆ ಮುಂದೆ ಬೇರೆ ಲೇಖನದಲ್ಲಿ ವಿಸ್ತಾರವಾಗಿ ತಿಳಿಸಲಾಗುವುದು). ಅಥವಾ ವರುಣನೇ. ಮಾನವ ಶರೀರದಲ್ಲಿ ಅಂತರ್ಹಿತವಾದ ಸಮುದ್ರರೂಪವಾಗಿಯೂ ಇದ್ದಾನೆ. ( ಸ ಸಮುದ್ರಃ ಅಪೀಚ್ಯಃ .) ಇವನು ಸಪ್ತ ಸಿಂಧುಗಳಿಗೂ ಅಧಿಪತಿ.

ಋಗ್ವೇದದ ೧ನೇ ಮಂಡಲದಲ್ಲಿ ೨೪ ಸೂಕ್ತದಲ್ಲಿ, ಶುನಃಶ್ಯೇಫ ಋಷಿಯಿಂದ ಉಕ್ತವಾದ ವರುಣಸ್ತುತಿಯು ಪ್ರಸಿದ್ಧವಾಗಿದೆ. ಶುನಶ್ಯೇಫನ ವೃತ್ತಾಂತವು ಜಗತ್ಪ್ರಸಿದ್ಧವಾಗಿದ್ದು, ಯೂಪ ಸ್ತಂಭಕ್ಕೆ ಪಶುವಿನಂತೆ ಕಟ್ಟಲ್ಪಟ್ಟಿದ್ದ ಅವನನ್ನು ಬಿಡಿಸಿದ ಈ ಸೂಕ್ತದ ಮಹಿಮೆಯು ಅಗಾಧವಾದುದು. ಸಮಸ್ತ ಪ್ರಾಣಿಗಳಿಗೂ, ಪ್ರಾಣೇಚ್ಛೆಯೆಂಬುದು ದೊಡ್ಡದು. ಪಕ್ಷಿಗಳು, ತಮ್ಮ ಗೂಡುಗಳ ಸುತ್ತಲೂ, ಅಭಿಮಾನದಿಂದ ಹಾರಾಡುವಂತೆ ಪ್ರಶಾಂತವಾದ ತನ್ನ ಮನಸ್ಸು ಉಚಿತವಾದ ಚಿಂತನೆಗಳಿಂದ, ಉತ್ತಮ ಜೀವನವನ್ನೇ ಬಯಸುವಂತಾಗಲಿ ಎಂದು ಶುನಶ್ಶೇಫ ಋಷಿಯು ಮನಮೋಹಕವಾಗಿ ಪ್ರಾರ್ಥಿಸುತ್ತಾನೆ.

ವರುಣನು ಅನ್ನಪ್ರದಾತೃವೂ ಹೌದು. ಅಥವಾ ಮನುಷ್ಯರು ವರುಣನನ್ನು ಧ್ಯಾನಿಸಿ. ಅವನಿಗೆ ಸರ್ವದಾ ಅಭಿಮುಖರಾಗಿ ಇರುವುದು "ಹಸಿರು

ಹುಲ್ಲಿನಿಂದಲ್ಲಿ ಸಮೃದ್ಧವಾದ ಹುಲ್ಲುಗಾವಲುಗಳನ್ನೇ ನೆನೆದು, ಅವುಗಳ ಕಡೆಗೆ ಆಸೆಯಿಂದ ಹಸುಗಳು ಓಡುವಂತೆ" ಇದೆ.

ವರುಣನ ಋತಕ್ಕೆ ಮಿತ್ರನ ಸತ್ಯವು ಸರಿಹೋಲುವ ತತ್ವ. ಪ್ರಕಟವಾದ ಋತವೇ ಸತ್ಯ. ಮತ್ತು ಅಪ್ರಕಟವಾದ ಸತ್ಯವೇ ಋತ. ಅಥವಾ ಸತ್ಯವು ಋತದ ಒಂದು ಅಂಶ. "ಯಾವುದು ಸಜ್ಜನರಲ್ಲಿ ಹುಟ್ಟಿ ಹರಡಿರುವುದೋ ಅದಕ್ಕೆ ಸತ್ಯವೆಂಬುದಾಗಿ ನಿರುಕ್ತದಲ್ಲಿ ಕರೆಯಲಾಗಿದೆ (ಸತ್ಸುತಾಯತೆ ಸತ್‌ಪ್ರಭಂ ಭವತಿ ಇತಿ). ದೇವತೆಗಳು ಅಸತ್ಯವನ್ನು ತ್ಯಜಿಸಿ, ಸತ್ಯ ಮಾರ್ಗಾವಲಂಬಿಗಳಾದುದರಿಂದಲೇ ದೇವತೆಗಳಾದರೆಂದು ವೇದವೇ ಹೇಳುತ್ತದೆ. ಸತ್ಯ ಸ್ವರೂಪಗಳಾದ ವೇದ ಕರ್ಮಗಳು, ನಿತ್ಯ ನೈಮಿತ್ತಿಕ ಕರ್ಮಗಳ ರೂಪದಲ್ಲಿ ಜಗತ್ತನು ರಕ್ಷಿಸುವುದರಿಂದ ಮಿತ್ರಾವರುಣರು ಈ ಕರ್ಮಗಳಿಗೂ ಅಭಿಮಾನಿಗಳು. ಇವುಗಳನ್ನು ಪಾಲಿಸದವರನ್ನು ದಂಡಿಸುವುದು, ಪಾಲಿಸಿದವರನ್ನು ಅನುಗ್ರಹಿಸುವುದು, ಇವರ ಮುಖ್ಯ ಕರ್ತವ್ಯಗಳು.

ಋತವು ಸತ್ಯದ "ನಾಭಿ" ಎಂದೂ ವರ್ಣಿಸಲ್ಪಟ್ಟಿದೆ. ಜ್ಞಾನವೂ ಸತ್ಯದಿಂದಲೇ ಸಾಧ್ಯ. ಅಂಧಕಾರರೂಪದ ಅಸತ್ಯವನ್ನು ನಾಶಪಡಿಸಿ, ಸತ್ಯರೂಪದ ಬೆಳಕನ್ನು ಲೋಕಕ್ಕೆ ತುಂಬುವ ಆದಿತ್ಯನು ಮಿತ್ರಾ ವರುಣರ ಗರ್ಭರೂಪದ ಶಿಶುವೆಂಬುದಾಗಿ ವರ್ಣಿಸಲ್ಪಟ್ಟಿದ್ದಾನೆ. "ಗೋವುಗಳ ಹಿಂಡನ್ನು ಮುಂಭಾಗದಲ್ಲಿ ನೆಮ್ಮದಿಯಾಗಿ ಅಟ್ಟಿಕೊಂಡು ಹೋಗುವ ಗೋಪಾಲನಂತೆ" ವರುಣನು ವರ್ಣಿಸಲ್ಪಟ್ಟಿದ್ದಾನೆ. ಹಸಿವೆಯನ್ನು ಉಂಟುಮಾಡಿ ಸ್ಪರ್ಧೆಗೆ ಮತ್ತು ವಿನಾಶಕ್ಕೆ ಕಾರಣವಾಗುವ ಧನಕ್ಕಿಂತಲೂ ವಿಶಿಷ್ಟವಾದ ಧನವನ್ನು ಅನುಗ್ರಹಿಸುವವನು ವರುಣನು. ಹೀಗೆ ಇಪ್ಪತ್ತನಾಲ್ಕಕಿಂತಲೂ ಹೆಚ್ಚು ಸೂಕ್ತಗಳಲ್ಲಿ ಮಿತ್ರಾ-ವರುಣರು ಸ್ತುತಿಸಲ್ಪಟ್ಟಿದ್ದಾರೆ. ವರುಣ ಪತ್ನಿಗೆ ವರುಣಾನೀ ಎಂದು ಹೆಸರು. ವಸಿಷ್ಠರಲ್ಲದೆ ಅತ್ರಿ, ದೀರ್ಘತಮಸ್ಸು, ಶುನಶ್ಶೇಫ ಮೊದಲಾದ ಅನೇಕ ಋಷಿಗಳು ಭಗವಂತನ ಈ ದಿವ್ಯಾಂಶವನ್ನು ಕೊಂಡಾಡಿ ಉಪಕಾರ ಮಾಡಿರುತ್ತಾರೆ.

ಪಾಶ್ಚಾತ್ಯ "ವೇದವಿಮರ್ಶಕರೂ" ಬಹುವಾಗಿ ಮೆಚ್ಚಿಕೊಂಡಿರುವ ದೇವತೆ ವರುಣ. ಭಗವಂತನ ಅನಂತ ವ್ಯಕ್ತಿತ್ವದ ಬಹುಮುಖಗಳಲ್ಲಿ ಈ ಮುಖವು ಕ್ರೈಸ್ತ ಮತದ ದೇವರ ಕಲ್ಪನೆಯನ್ನು ಬಹುಮಟ್ಟಿಗೆ ಹೋಲುತ್ತದೆಯಂತೆ. ರಾತ್ ಎಂಬ ಪಂಡಿತನು, ಹಿಂದೂ ಧರ್ಮದಲ್ಲಿ ಎಲ್ಲಿಯೂ ಸ್ಪಷ್ಟವಾಗಿ ಮತ್ತು ಪ್ರತ್ಯೇಕವಾಗಿ ಪಾಪದ ಫಲ ನಿರಂತರ ನರಕವಾಸವೆಂದು ಹೇಳಿಲ್ಲವೆಂದೂ ಆದರೆ ವರುಣ ಸೂಕ್ತಗಳಲ್ಲಿ ಈ ವಿಷಯವನ್ನು ಸಮೀಪಿಸಿದಂಥ ಅನೇಕ ವಿಚಾರಗಳು ಇರುವುವೆಂದೂ ಬರೆದು ಕೊಂಡಿದ್ದಾನೆ. ನರಕವು ನಿರಂತರವಾದರೆ ದೇವರ ಕರುಣೆಗೆ ಮತ್ತು ಮಾನವನ ಉದ್ಧಾರಕ್ಕೆ ಎಂದೆಂದೂ ಪೂರ್ಣ ವಿರಾಮವನ್ನು ಹಾಕಿದಂತೆಯೇ ಎಂಬ ದೋಷ ಕ್ರೈಸ್ತ ಮತದಲ್ಲಿರುವುದನ್ನು ಅವನು ಕಂಡಂತಿಲ್ಲ. ವರುಣನು ಪಾಪಿಗಳನ್ನು ದಂಡಿಸುವುದಲ್ಲದೆ ನಿಜವಾಗಿಯೂ ಪಶ್ಚಾತ್ತಾಪ ಪಡುವವರನ್ನು ಪಾಪದಿಂದ ಮುಕ್ತರನ್ನಾಗಿ ಮಾಡುತ್ತಾನೆ ಎಂಬ ವೇದಸೂಕ್ತಗಳ ದರ್ಶನವು ಹೆಚ್ಚು ಸಮಂಜಸವಾಗಿಯೇ ಇದೆ. ವರುಣನನ್ನು ಮಹಾಬಲ ಶಾಲಿ ಎಂಬ ಅರ್ಥದಲ್ಲಿ "ಅಸುರ" ಎಂದು ವೇದ ಮಂತ್ರಗಳಲ್ಲಿ ಸಂಭೋಧಿಸಿರುವುದನ್ನು ಪ್ರಸ್ತಾಪಿಸಿ ಈ ದೇವತೆಯು ಅಗ್ನಿಪೂಜಕರಾದ ಪಾರಸೀಕರ ಧರ್ಮದಲ್ಲಿಯೂ, ಅವರ ಗ್ರಂಥವಾದ "ಅವೆಸ್ತಾ" ದಲ್ಲಿಯೂ "ಅಹುರ" ಎಂಬ ರೂಪಾಂತರದಿಂದ ಪರಮಾತ್ಮನೆಂಬುದಾಗಿ ವರ್ಣಿಸಲ್ಪಟ್ಟಿದ್ದಾನೆಂದು ಪಾಶ್ಚಾತ್ಯರ ಮತ. ಅಥರ್ವವೇದ (VI-16) ದಲ್ಲಿ ಬರುವ ವರುಣ-ವಿಷಯಕ ಸೂಕ್ತವೊಂದು ಪಾಶ್ಚಾತ್ಯರಿಗೆ ಬಹಳ ಹಿಡಿಸಿದೆ. ವರುಣನ ಜೊತೆಯಲ್ಲಿ ಬರುವ ಋತತತ್ವದ ವಿಚಾರವನ್ನೂ ಅವರು ಬಹಳ ಮೆಚ್ಚಿಕೊಂಡಿದ್ದಾರೆ. ಗ್ರೀಕರ ಯುರೇನೋಸ್ (Ouranos) ಎಂಬ ದೇವತೆಯೂ ಇವನ ರೂಪಾಂತರವಂತೆ. ಆದರೆ ವರುಣನಿಗೂ "ನೀರಿ"ಗೂ ಇರುವ ಸಂಬಂಧವನ್ನು ಅವರು ಸರಿಯಾಗಿ ಅರ್ಥಮಾಡಿಕೊಂಡಂತೆ ಕಾಣುವುದಿಲ್ಲ. "ಸಮುದ್ರ" ಕ್ಕೂ ಇವನು ಅಧಿಪತಿ ಎಂಬ ವೇದದ (ಋಕ್ಸಂಹಿತೆ I-25-8, IIV-41-5) ಭಾವವನ್ನು ತಪ್ಪಾಗಿಯೇ ಗ್ರಹಿಸಿರುವಂತಿದೆ. ವೇದದ ಭಾಷೆಯಲ್ಲಿ "ಸಮುದ್ರ"ವೆಂದರೆ ಪಾಂಚಭೌತಿಕ ಸಮುದ್ರವಲ್ಲ. ಮನುಷ್ಯನ ಹೃದಯದ ಭಾವನೆಗಳೆಂಬ ಆಳವಾದ ಅಂತಸ್ಸಮುದ್ರ. (ಅಂತಸ್ಸಮುದ್ರೇ

ಕವಯೋ ವಯನ್ತಿ।). ವರುಣನು ಇದಕ್ಕೆ ಅಧಿಪತಿಯೆಂದರೆ, ನಾವು ಮತ್ತೊಬ್ಬರಿಗೆ ಗೊತ್ತಿಲ್ಲದಂತೆ ಗೂಢವಾಗಿ ಮನಸ್ಸಿನಲ್ಲಿಯೇ ಎಸಗುವ ಪಾಪಗಳನ್ನು ಗಮನಿಸಿ ದಂಡಿಸುವ ಭಗವಂತನ ಅಂಶ. ಅಲ್ಲದೆ ಇವನು "ರಾತ್ರಿ"ಗೆ ಅಧಿಪತಿ ಎಂದದ್ದರಲ್ಲೂ ಇದೇ ಅರ್ಥವಿದೆ. "ಹಗಲು" ಎಂದರೆ ಮಾನವನ ಎಚ್ಚರಾವಸ್ಥೆ. ಜಾಗ್ರತ ಸ್ಥಿತಿ. ಈ ಸ್ಥಿತಿಯಲ್ಲಿ ನಮ್ಮ ರಕ್ಷಕನೇ ಭಗವಂತನ "ಮಿತ್ರ" ಎಂಬ ಅಂಶದ ದೇವತೆ. "ರಾತ್ರಿ" ಎಂದರೆ ಸ್ವಪ್ನಾವಸ್ಥೆ, ನಿದ್ರೆಯ ಸ್ಥಿತಿ. ಮನುಷ್ಯನು ಒಂದು ವೇಳೆ ಎಚ್ಚರವಾಗಿದ್ದಾಗ ಇಂದ್ರಿಯನಿಗ್ರಹದಿಂದ ಪಾಪಗಳನ್ನು ಮಾಡದಿದ್ದರೂ, ಇಂದ್ರಿಯ ನಿಗ್ರಹವಾಗಲೀ, ತಾನು-ಎಂಬ ಪ್ರಜ್ಞೆಯಾಗಲೀ ಪ್ರಭಾವ ಶಾಲಿಯಾಗಿಲ್ಲದ ಸಪ್ನಾವಸ್ಥೆಯಲ್ಲಿ ಕಾಮಕ್ರೋಧ ವಶನಾಗುವುದು ಸರ್ವಸಾಧಾರಣ. ಮನುಷ್ಯನ ಅಹಂಕಾರವೂ, ಪಾಪ ಬುದ್ಧಿಯೂ, ಸರ್ವನಾಶದತ್ತ ಮಾನವನನ್ನು ಒಯ್ಯುವ "ಸುವರ್ಣಾವಕಾಶ" ಇಲ್ಲಿರುತ್ತದೆ. ಆದುರಿಂದಲೇ ವರುಣನಿಗೆ ಮಿತ್ರನಿಗಿಂತ ಹೆಚ್ಚು ಹೊಣೆಗಾರಿಕೆ ಇದೆ. ಈ ವಿಷಯವನ್ನು ಸಾಂಕೇತಿಕಾರ್ಥದೊಡನೆ ಸೂಚಿಸುವ ಒಂದು ಕಥೆಯು ವೇದದಲ್ಲೇ ಬರುತ್ತದೆ :

ಒಮ್ಮೆ ವಸಿಷ್ಠರು ಮೂರು ದಿನಗಳವರೆಗೆ ಅನ್ನಾದಿಗಳು ದೊರೆಯದ ಉಪವಾಸ ಬಾಯಾರಿಕೆಗಳಿಂದ ಬಳಲಿ ನಾಲ್ಕನೆಯ ದಿನ ಏಳಲೂ ಶಕ್ತಿಯಿಲ್ಲದೆ ಬಿದ್ದಿದ್ದಾಗ, ನಾಲ್ಕನೆಯ ರಾತ್ರಿ, ಕೊನೆಗೆ ತಮ್ಮ ತಂದೆಯಾದ ವರುಣ ಗೃಹದಲ್ಲಿಯಾದರೂ, ಕದ್ದಾದರೂ, ಅನ್ನವನ್ನು ತಿನ್ನಬೇಕೆಂದು ಸಪ್ನದಲ್ಲಿಯೇ ಅಲ್ಲಿಗೆ ಹೋದರಂತೆ. (ವರುಣಸ್ಯ ಗೃಹಾನ್ ರಾತ್ರೌವಸಿಷ್ಠ: ಸ್ವಪ್ನ ಮಾಚರನ್.....ಬೃಹದ್ದೇವತಾ VI-II). ಆಗ ವರುಣನ ನಾಯಿಯು, ಕೊಟ್ಟಿಗೆಯ ಸಮೀಪದಲ್ಲಿ ಮಲಗಿದ್ದದ್ದು, (ಅರ್ಜುನ ಎಂದು ಅದರ ಹೆಸರು. ಸಾತ್ತ್ವಿಕ ಶಕ್ತಿಯಾಗಿ ಎಚ್ಚೆತ್ತಿರುವುದರಿಂದ 'ಬಿಳೀ' ಎಂಬರ್ಥದ ಈ ಹೆಸರು ಅದಕ್ಕೆ ಉಚಿತವಲ್ಲವೆ ?) ಅವರನ್ನು ಕಂಡು ಬೊಗಳುತ್ತದೆ, ಆಗ ವಸಿಷ್ಠರು ಆ ದಿವ್ಯ 'ಶ್ವಾನ' ಕ್ಕೆ ಉದ್ದೇಶಿಸಿ ಪಠಿಸಿದ ಕೆಲವು ಸುಂದರ ಮಂತ್ರಗಳು ಋಗ್ವೇದದಲ್ಲಿ (VII—55-1, 2) ಇವೆ. (ನಾವೂ ರಾತ್ರಿ ಮಲಗುವಾಗ ಈ ಮಂತ್ರಾರ್ಥವನ್ನು ಅನುಸಂಧಾನ ಮಾಡಿದರೆ, ನಿದ್ರೆಯಲ್ಲೂ

ಪಾಪ ಬುದ್ಧಿಯೂ ನಮ್ಮನ್ನು ಪೀಡಿಸಲಾರದು. ಈಗಿನ ಪಾಶ್ಚಾತ್ಯ ಮನೋವಿಜ್ಞಾನಿಗಳಿಗಿಂತ ವಸಿಷ್ಠರು ಎಷ್ಟು ಮುಂದೆ ಹೋಗಿದ್ದರೆಂಬುದನ್ನು ಇದು ಮನದಟ್ಟು ಮಾಡಿಕೊಡುತ್ತದೆ.) :

"ಎಲೈ, ಬಾಗಿಲು ಕಾಯುತ್ತಿರುವ, ಗೃಹರಕ್ಷಕನಾದ ವಾಸ್ತೋಷ್ಪತಿಯೇ ! ನೀನು ಸಮಸ್ತ ರೋಗ ನಾಶಕ. ಅನೇಕಾನೇಕ ಸ್ವರೂಪಗಳನ್ನು ಹೊಂದಬಲ್ಲೆ. ನಮಗೆ ಸ್ನೇಹಿತನಾಗಿ ಸುಖವನ್ನು ಕೋರುವವನೂ ಆಗಿರು.

"ಬಿಳಿಯ ಬಣ್ಣವುಳ್ಳ ಅರ್ಜುನನೇ ! ಕೆಲವು ಅಂಗಗಳಲ್ಲಿ ಕೆಂಪು ವರ್ಣವುಳ್ಳ ಪಿಶಂಗನೇ ! ಸರಮೆಯ ಮಗನಾದ ಸಾರಮೇಯನೇ ! ನನ್ನನ್ನು ಕಚ್ಚಲೆಂದು ವಿಸ್ತಾರವಾಗಿ ಅಗಲಿಸಿದ ನಿನ್ನ ಬಾಯಿಯಲ್ಲಿ ಕಾಣುವ ಹಲ್ಲುಗಳು ವಿಶೇಷ ಕಾಂತಿಯಿಂದ ಹೊಳೆಯುವ ಈಟಿಗಳೆಂಬ (ಭಲ್ಲೆ) ಉದ್ದನೆಯ ಚೂಪು ಆಯುಧಗಳಂತೆ, ಒಸಡುಗಳೊಡನೆ ಪ್ರಕಾಶಿಸುತ್ತವೆ. ಆದರೆ ನೀನು ಸದ್ದಿಲ್ಲದೆ ನಿದ್ದೆ ಮಾಡು (ಎಂದು ನನ್ನ ಪ್ರಾರ್ಥನೆ.)

"ಮತ್ತೆ ಮತ್ತೆ ಅಟ್ಟಿಸಿಕೊಂಡು ಬರುವ ಸರಮಾಪುತ್ರನೇ ! ಹಣವನ್ನು ಅಪಹಾರ ಮಾಡುವ ಕಳ್ಳನನ್ನು ನೀನು ಅಟ್ಟಿಸಿಕೊಂಡು ಹೋಗುವುದು ಮಾತ್ರ ಸರಿ. ಇಂದ್ರನನ್ನು ಕೊಂಡಾಡುವ ನನ್ನನ್ನು ಏತಕ್ಕೆ ಅಟ್ಟಿಸಿಕೊಂಡು ಬರುವೆ ? ನನ್ನನ್ನು ಏತಕ್ಕೆ ಹಿಂಸಿಸುವೆ ? ಶಾಂತನಾಗಿ ನಿದ್ರಿಸು.

"ನೀನೂ, ನಿನ್ನ ತಂದೆ ತಾಯಿಯರೂ ನಿದ್ರಿಸಿ. ನಿನ್ನೊಡೆಯನೂ, ಪರಿವಾರವೂ ಎಲ್ಲರೂ ನಿದ್ರಿಸಿ."

"ಇಲ್ಲಿ ನಿಂತಿರುವವರು, ಕಣ್ಣಿದ್ದು ನಮ್ಮನ್ನು ನೋಡಬಲ್ಲವರು ಇವರೆಲ್ಲರೂ ಈ ಉಪ್ಪರಿಗೆಯ ಮನೆಯ ಹಾಗೆ ನಿಶ್ಚಲರಾಗಿರುವಂತೆ ನಾವು ಕಣ್ಣು ಮುಚ್ಚಿಸುತ್ತೇವೆ." ಇತ್ಯಾದಿ.

ಇಲ್ಲಿ ವರ್ಣಿತವಾಗಿರುವುದು ಕೇವಲ ಬೀದಿಯ ನಾಯಿಯಾಗಿದ್ದರೆ, ವೇದದಲ್ಲಿ ಈ ವಿಷಯ ಏಕೆ ಬಂದಿತು ಎನ್ನುವುದಕ್ಕೆ ಉತ್ತರ ಸಿಗಲಾರದು ! ಅಲ್ಲದೆ ನಾಯಿಯನ್ನು "ರೋಗನಾಶಕ" ನೆಂದೂ, "ಕಾಮರೂಪಿ" ಎಂದೂ ವರ್ಣಿಸಿರುವುದರ ಅರ್ಥವೇನು ? ಅನ್ನಾಹಾರಾದಿ ಶುದ್ಧಿಯಿಲ್ಲದೆ

ನಿತ್ಯಕರ್ಮಾನುಷ್ಠಾನ ಪೂತರಲ್ಲದ, ಗೋಮಾಂಸಭಕ್ಷಕರಾದ "ವೇದವಿಮರ್ಶಕ"ರಿಗೆ "ಇದು ಹೇಗೆ ತಿಳಿಯಬೇಕು ? ವಸಿಷ್ಠರ ಎದುರು ಭಯಾನಕವಾಗಿ ಮೊನಚಾದಹಲ್ಲುಳ್ಳ ಬಾಯನ್ನು ತೆರೆದು ಕಚ್ಚಲು ನಿಂತಿರುವ ನಾಯಿಯ ಚಿತ್ರವಿದೆ. ಇದು ಪಾಪವನ್ನೆಸಗಲು ಹೊರಟ ಮಾನವನನ್ನು ತಡೆದು, ನಿಲ್ಲಿಸಿ, "ಬೊಗಳುವ", ಅಂತರಂಗದ "ಜಾಗೃತಿ"ಯ ಸಂಕೇತವಲ್ಲವೆ ? (ರಾತ್ರಿಯಲ್ಲಿ ಎಚ್ಚರವಾಗಿರುವ ನಾಯಿಯು, ನಿದ್ರೆಯಲ್ಲೂ ನಮ್ಮಲ್ಲಿ ಎಚ್ಚೆತ್ತೇ ಇರುವ ಪಾಪಪುಣ್ಯ ಭೀತಿಯೆಂಬ ಶಕ್ತಿಗೆ ಸಮ ಸಂಕೇತವಾಗಲಾರದೇ ? ಇದು ರಕ್ಷಕನಾದ ವರುಣನ ಸೇವಕ ವರ್ಗಕ್ಕೆ ಸೇರಿದ್ದು, ಉಪಕರಣವೆನ್ನುವುದರಲ್ಲಿ ಬಹಳ ಅರ್ಥವಿದೆ.)

ಮುಂದಿನ ಇನ್ನೆರಡು ಮಂತ್ರಗಳಲ್ಲಿ ವಸಿಷ್ಠರು, ತಮ್ಮ ಸೂರ್ಯಸಮಾನ ಶಕ್ತಿಯ ಸತ್ಯಬಲದಿಂದ ಕತ್ತಲೆಯಲ್ಲೂ ತಮ್ಮಲ್ಲಿ "ಸಂಚರಿಸುವ" ಪಾಪಶಕ್ತಿಗಳ "ಕಣ್ಣು ಮುಚ್ಚಿ"ಸುವುದಾಗಿ ಆಶ್ವಾಸನೆ ಕೊಟ್ಟು ಹಿಂದಿರುಗಿದ ಮೇಲೆಯೇ "ನಾಯಿಯು" ಬೊಗಳುವುದನ್ನು ನಿಲ್ಲಿಸಿತು ಎಂದು ತಿಳಿಯುತ್ತದೆ.

ಹೀಗೆ ಆಧ್ಯಾತ್ಮ ಅರ್ಥ ತುಂಬಿದ ಅನುಭವವನ್ನು ಸಾಂಕೇತಿಕ ಭಾಷೆಯಲ್ಲಿ ವಸಿಷ್ಠರ ಅನೇಕ ಸೂಕ್ತಗಳು ಹೇಳುತ್ತವೆ. ವರುಣನ ಸ್ವರೂಪ ಸ್ಥಾನ, ಕರ್ಮಗಳನ್ನು ಹೀಗೆ ಮಾರ್ಮಿಕವಾಗಿ ತಿಳಿಯಬೇಕು.

ಇದನ್ನೊಂದನ್ನೂ ಅರಿಯದ ಪಾಶ್ಚಾತ್ಯರು, ದುರುದ್ದೇಶ ಪ್ರೇರಿತರೂ ಆಗಿ, ಮನಸ್ಸಿಗೆ ಬಂದಂತೆ ಬರೆದಿರುವುದು ಅವರ ಯೋಗ್ಯತೆಗೆ ಸಾಕ್ಷಿ ಮಾತ್ರ. ವರುಣದೇವತೆಯ ಪ್ರಭಾವ ವೇದಕಾಲದಲ್ಲಿಯೇ ಕಮ್ಮಿಯಾಗುತ್ತಾ ಹೋಯಿತಂತೆ, ಅವರ ಪ್ರಕಾರ ! (ಈ ಮಾತಿಗೆ ನಮ್ಮಲ್ಲಿ ಅರ್ಥವೇ ಇಲ್ಲ ! ಪ್ರತಿಯೊಂದು ದೇವತೆಗೂ ಗುಡಿಗೋಪುರ ಕಟ್ಟದಿದ್ದ ಮಾತ್ರಕ್ಕೆ, ಆ ದೇವತೆಗಳೇ ಇಲ್ಲವೆಂದಾಗಲೀ, ಅವರ ಅಧಃಪತನವಾಯಿತೆಂದಾಗಲೀ ಭಾವಿಸುವುದು ಅವಿವೇಕವಲ್ಲವೆ ?) ಕೊನೆಗೆ ಕೆರೆಕುಂಟೆ ಕೊಳಗಳ ಅಧಿಪತಿಯಾದ ಅಲ್ಪ ದೇವತೆಯಾದನಂತೆ ! ಬ್ರಹ್ಮವಾದವು ಮೇಲಾಗುತ್ತ ಉಳಿದ ದೇವತೆಗಳು ಬಿದ್ದರಂತೆ. (ಪರಮಾತ್ಮ, ಬ್ರಹ್ಮ, ತತ್ತ್ವವು ಇವೆಲ್ಲ ದೇವತೆಗಳನ್ನೂ ಒಳ

ಗೊಂಡೇ ಇದೆಯೆಂಬುದನ್ನು ಅವರು ಮರೆತರು.) ಆದರೆ ಹೀಗೆ ಬರೆದದ್ದರಲ್ಲಿ ಅವರ ಉದ್ದೇಶವೇ ಬೇರೆ! ಇಲ್ಲಿ "ಬಿದ್ದ" ವರುಣನು ಅವರಲ್ಲಿ "ಕ್ರಿಸ್ತ"ನಾಗಿ "ಮೇಲೆದ್ದ"ನೆಂದೂ, ಅವನನ್ನು ಭಾರತೀಯರು ಆಶ್ರಯಿಸಬೇಕೆಂದೂ, ಇದೇ ವೇದಕ್ಕೆ ಸಮ್ಮತವೆಂದೂ ಮುಂದೆ ಈ "ಮಹಾನುಭಾವ"ರು ಬರೆದಿರುವುದನ್ನು ಹಿಂದಿನ ಅಧ್ಯಾಯದಲ್ಲಿಯೇ ಎತ್ತಿ ತೋರಿಸಲಾಗಿದೆ.

ಪರಮಾತ್ಮನಿಗೆ ಅನಂತ ಮುಖಗಳು: ವಿಶ್ವತೋ ಮುಖಃ. ವರುಣನು ಒಂದು ಮುಖ ಮಾತ್ರ. ನಮ್ಮ ಒಳಜೀವನದಲ್ಲೂ ಅಂತರ್ಯಾಮಿಯಾಗಿರುವ ಭಗವಂತನ ಮುಖಗಳನ್ನು ಪತ್ತೆ ಹಚ್ಚಿ ಸಾಕ್ಷಾತ್ಕರಿಸಿಕೊಳ್ಳಲು, ಹಿಂದಿನ ಅಧ್ಯಾಯದ ಪ್ರಾರಂಭದಲ್ಲಿ ಶೌನಕರ ಬೃಹದ್ದೇವತೆಯಿಂದಾಯ್ದ ಶ್ಲೋಕಗಳನ್ನು ಕೊಟ್ಟಿರುವುದನ್ನು ಮತ್ತೆ ಓದಿ, ಆ ಗುಣಗಳನ್ನು ಸಂಪಾದಿಸಿ, ಪ್ರಯತ್ನಿಸಬೇಕು.

ಪರಮಾತ್ಮನನ್ನು ತಿಳಿಯದವನಿಗೆ ವೇದದಿಂದೇನು ಪ್ರಯೋಜನ ?— ಯಸ್ತನ್ನ ವೇದ ಕಿಂ ಋಚಾ ಕರಿಷ್ಯತಿ ? ಮತ್ತು ವೇದವನ್ನು ತಿಳಿಯದವನು ಭಗವಂತನನ್ನೂ ತಿಳಿಯಲಾರ— ನಾವೇದವಿನ್ಮನುತೇ ತಂ ಬೃಹಂತಂ, ಎಂಬ ಅನ್ಯೋನ್ಯಾಶ್ರಯದ ವೇದಬ್ರಹ್ಮೋಪಾಸನೆಯಿಂದ ಮಾತ್ರ, ವರುಣಾದಿ ಭಗವನ್ಮುಖಗಳ ಸಾಕ್ಷಾತ್ಕಾರ ಸಾಧ್ಯವಾದೀತು.

——

ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

# ೧೦. ಕಸ್ಮೈ ದೇವಾಯ

## (ಆತ್ಮಾರ್ಪಣೆ ಯಾರಿಗೆ)

ಪರಮಾತ್ಮನು ಒಬ್ಬನೇ ಆದರೂ ಅವನ ಮಹಿಮೆ ಅನಂತವಾದುದು. ಅವನ ಮಹಿಮೆಯ ಒಂದೊಂದು ಅಂಶಗಳೇ ದೇವತೆಗಳಾದರೆಂದು ಈ ಹಿಂದೆ ವಿವರಿಸಿದೆ. ಮರವೊಂದರಲ್ಲಿ ಅಸಂಖ್ಯಾತ ಎಲೆಗಳೂ, ಹೂವುಗಳೂ, ಹಣ್ಣುಗಳೂ. ಬೇರು, ಕಾಂಡ, ಉಪಶಾಖೆಗಳು ಇರುವಂತೆಯೇ ಈ ಬ್ರಹ್ಮ ವೃಕ್ಷದಲ್ಲಿ ದೇವತೆಗಳೂ ಚರಾಚರ ವಸ್ತುಗಳೂ, ಅವಿಭಾಜ್ಯ ಭಾಗಗಳಾಗಿ ಇರುವರು; ಒಂದು ಎಲೆಯನ್ನೋ, ಹೂವನ್ನೋ, ಕಿತ್ತು, "ಇದೇ ಮರವೇ?" ಎಂದು ಕೇಳಿದರೆ "ಹೌದು; ಇದೂ ಮರವೇ. ಆದರೆ ಮರದಲ್ಲಿ ಇನ್ನೂ ಇಂಥ ಅನೇಕ ಅಂಶಗಳಿವೆ. ಇಷ್ಟೇ ಅಲ್ಲ– ನೇತಿ, ನೇತಿ ಎಂಬ ಉಪ ನಿಪದ್ವಾಕ್ಯದಂತೆ"–ಎಂದು ಉತ್ತರ ಕೊಡಬೇಕಾಗುತ್ತದೆ. ಎಲ್ಲ ಎಲೆ, ಹೂ, ಹಣ್ಣು ಮುಂತಾದ ಒಂದೊಂದೇ ಅಂಗಗಳನ್ನೂ ಇವು ಮರವಲ್ಲವೆಂದು ಬ್ರಮಿಸಿ, ಕಿತ್ತು ಬಿಸಾಡಿ "ಮರ ಇನ್ನೆಲ್ಲಿದೆ?" ಎಂದು ಕೇಳಿದರೆ "ಮರ ವೆಂಬುದು ಬರಿಯ ಭ್ರಾಂತಿ; ಕೇವಲ ನಾಮ–ರೂಪ ಮಾತ್ರ, ವ್ಯವಹಾರದಲ್ಲಿ ಮರ ಇದ್ದರೂ ಪರಮಾರ್ಥದಲ್ಲಿ ಅದು ಇಲ್ಲ – ಶೂನ್ಯ"– ಎಂಬ ಬೌದ್ಧರ ಮಿಳಿಂದಪ್ರಶ್ನಾದಿ ಗ್ರಂಥಗಳಲ್ಲಿ ಮಾಡಿರುವ ಕುತರ್ಕದಂತೆ, ಕೇವಲ ಶೂನ್ಯವಾದವೇ ಉದಯಿಸಿ ಸ್ಥಾಪಿತವಾಗುವುದು. ಇದು ವೇದವಿರುದ್ಧ ಕುತರ್ಕ. ವೇದದ ದೃಷ್ಟಿ,ವಾದಸರಣಿ ಇದಲ್ಲ. ಮರವೆಂಬ ತತ್ತ್ವವು ಒಂದೊಂದು ಎಲೆ, ಹೂ, ಹಣ್ಣುಗಳಲ್ಲೂ ಇದ್ದು (ಅಂತರ್ಯಾಮಿಯಾಗಿದ್ದು) ಒಂದೊಂದನ್ನು ಮೀರಿಯೂ ಇದೆ. ಮರದಲ್ಲಿರುವ, ವ್ಯಕ್ತವಾದ ಎಲ್ಲ ಅಂಶಗಳನ್ನೂ ಅಂಗಗಳನ್ನೂ ಒಟ್ಟಿಗೆ ಹಾಕಿದರೂ, "ಮರ"ವೆಂಬುದು ಅವೆಲ್ಲಕ್ಕಿಂತಲೂ ದೊಡ್ಡದು, ವಿಲಕ್ಷಣವಾದದ್ದು. ಮುಂದೆ ಮರದಲ್ಲಿ ಹುಟ್ಟಿ ಬರಬಹುದಾದ ಅಂಶಗಳು, ಈ ಹಿಂದೆ ಆಗಿ ಹೋಗಿರುವುವು, ಎಲ್ಲವು

ಗಳನ್ನು ಕೂಡಿ ಹಾಕಿದರೂ, ಈ ಬ್ರಹ್ಮ ವೃಕ್ಷದ ಪೂರ್ಣ ಸ್ವರೂಪ ತಿಳಿಯು ವುದು ಕಷ್ಟ. ಅದು ಮನೋವಾಕ್ಕುಗಳಿಗಿಂತ ಅತೀತವಾಗಿದೆ, "ವೃಕ್ಷ ಇವ ಸ್ತಬ್ಧಃ ದಿವಿ ತಿಷ್ಠತ್ಯೇಕಃ ತೇನೇದಂ ಪೂರ್ಣಂ ಪುರುಷೇಣ ಸರ್ವಂ।" ಎಂದು ತೈತ್ತಿರೀಯ ಉಪನಿಷತ್ತಿನಲ್ಲಿ ಪರಮಪುರುಷನಾದ ಪರಬ್ರಹ್ಮವಸ್ತು ವನ್ನು, ಮರದಂತೆ ಪರಮಪದದಲ್ಲಿ ಸುಭದ್ರವಾಗಿ ನಿಂತಿರುವವನೆಂದೂ, ಈ ಮಹಾಪುರುಷನಿಂದಲೇ ಇವೆಲ್ಲವೂ ಪೂರ್ಣವಾಗಿವೆಯೆಂದು ವರ್ಣಿಸ ಲಾಗಿದೆ.

ಈಗ ಇಂಥ ಪರಮ ಪುರುಷನಿಗೆ ಏನು ಹೆಸರು ? ಎಂಬ ಪ್ರಶ್ನೆ ಉದಯಿಸುವುದು ಸಹಜ. ಹೆಸರಿನಿಂದ ಏನು ಪ್ರಯೋಜನ ? ಎಂದು ಕೇಳಿ ದರೆ, ಹೆಸರೆಂಬುದು ವಸ್ತುವನ್ನು ಮನಸ್ಸಿನಿಂದಲೂ, ಬುದ್ಧಿಯಿಂದಲೂ, ಗ್ರಹಿಸಿ, ತಿಳಿದು, ಗುರುತಿಸುವುದಕ್ಕೆ ಉಪಯುಕ್ತವಾದದ್ದು. ಪರಮಾತ್ಮ ನನ್ನು ಸರ್ವೇಂದ್ರಿಯಾತೀತನೆಂದ ಮಾತ್ರಕ್ಕೆ ಸಂಪೂರ್ಣವಾಗಿ ಅಗ್ರಾಹ್ಯ ನೆಂದು ನಿರಾಶೆಯಿಂದ ಬಿಟ್ಟು ಬಿಡುವಂತಿಲ್ಲ. ಇದು ಬ್ರಹ್ಮನಿರಾಕರಣವೆಂಬ ನಾಸ್ತಿಕ್ಯ ಮತವಾಗುವುದು. ಪರಮಾತ್ಮನು ಸಾಕ್ಷಾತ್ಕೃತನಾಗಬೇಕಾದರೆ, ಅವನನ್ನು ಗುರುತಿಸುವುದು ಸಾಧ್ಯವಾಗಬೇಕು. ಮಗುವು ಮಾತನ್ನಾಡದ ಅವಸ್ಥೆಯಲ್ಲೂ "ಇವಳೇ ನನ್ನ ತಾಯಿ" "ಅವಳಲ್ಲ" ಎಂದು ಗುರುತು ಹಚ್ಚುವಂತೆ ಮಾತಿಗೆ ಮೀರಿದ ಅನುಭೂತಿಯಲ್ಲೂ ಗುರುತು ಹಚ್ಚುವ ವ್ಯಾಪಾರ ಸಾಧ್ಯವಾಗಿರುವುದು ಮಾತ್ರವಲ್ಲದೆ, ಅತ್ಯಂತ ಅವಶ್ಯವೂ ಅನಿವಾರ್ಯವೂ ಆಗಿದೆ; ಇದು ನಡೆದೇ ಇರುತ್ತದೆ, ನಮಗೆ ಬೇಕಾಗಲಿ ಬೇಡವಾಗಲೀ. ಆನೆ ಮೊದಲಾದ ಪ್ರಾಣಿಗಳನ್ನೇ ನೋಡಿರದ ಒಂದು ಎಳೆಯ ಮಗುವನ್ನು ಪ್ರಾಣಿಶಾಲೆಗೆ ಮೊದಲು ಕರೆದುಕೊಂಡು ಹೋದಾಗ ಆನೆ ಯನ್ನು ಮೊದಲು ಬಾರಿಗೆ ನೋಡಿದಾಗ ಅದರಲ್ಲಿ ಏನನ್ನು ಪ್ರಧಾನವಾಗಿ ಕಾಣಬೇಕೆಂಬ ಪೂರ್ವ ಕಲ್ಪನೆಯಿಲ್ಲದೇ. ಇರುವ ಈ ಪ್ರಥಮ ಅನುಭೂತಿ ಯನ್ನು ನಿರ್ವಿಕಲ್ಪ ಎಂದು ಕರೆಯುತ್ತಾರೆ. ಅಂದರೆ ಮಗುವು ಆನೆಯ ಸೊಂಡಿಲನ್ನೋ ದಪ್ಪ ಕಾಲುಗಳನ್ನೋ, ಅಥವಾ ತನ್ನ ಗಮನ ಸೆಳೆದ ಯಾವುದೋ ಇಂಥ ಕೆಲ ಅಂಶಗಳನ್ನಷ್ಟೇ "ನೋಡುತ್ತದೆ". ಆದರೆ ಎರಡನೇ, ಮೂರನೇ.....ಹೀಗೆ ಮುಂದಿನಸಲ ಅದನ್ನೇ ನೋಡಿದಾಗ "ಇದು

ಈ ಹಿಂದೆ ನೋಡಿದಂತೆಯೇ ಇದೆ; ಅದರ ಹಾಗೇಯೋ ಇದು; ಈಗ ಇನ್ನೂ ಹೆಚ್ಚಾಗಿ ಸ್ಪಷ್ಟವಾಗಿದೆ” ಎಂಬ ರೀತಿಯ ಪೂರ್ವಾನುಭವ ಪ್ರೋಷಿತವಾದ, ಪೂರ್ವ ಕಲ್ಪನೆಗೆ ಪೂರಕವಾದ ಅನುಭೂತಿಯು ಸವಿಕಲ್ಪಕವೆನಿಸುವುದು. ಉದಾಹರಣೆಗೆ “ಗುಡಿಗೆ ಹೋಗೋಣ” ಎಂದಾಗ ಗುಡಿ ಅಂದರೆ ಹೇಗಿರಬಹುದೆಂಬ ಪೂರ್ವ ಕಲ್ಪನೆ, ಒಂದಿಲ್ಲೊಂದು ರೀತಿಯಲ್ಲಿ, ಪ್ರಬುದ್ಧರಾದವರಿಗೆ ಇರುತ್ತದೆ. ಗುಡಿಗೆ ಹೋಗೋಣವೆಂದು ಹೇಳಿ ಹೋಟೆಲಿಗೋ ಸಿನಿಮಾ ಮಂದಿರಕ್ಕೋ ಕರೆದು ಕೊಂಡು ಹೋದರೆ “ ಇದು ಅದಲ್ಲ. ಸುಳ್ಳು ಹೇಳಿ ಕರೆತಂದಿರುವೆ ! ಎಂದು ವ್ಯತ್ಯಾಸ ತಿಳಿಯಲು ಅನುಕೂಲವಾಗುವುದು, ಅನುಭೂತಿಯು ಸವಿಕಲ್ಪಕವಾದುದರಿಂದಲೇ.

“ಇದು ವ್ಯವಹಾರದಲ್ಲಿ ಸರಿ. ಬ್ರಹ್ಮವಸ್ತುವಿಗೆ ಇದು ಹೇಗೆ ಅನ್ವಯ?” ಎಂದು ಕೇಳಿದರೆ, ಹೀದಿದೆ ಉತ್ತರ. ಲೋಕದಲ್ಲಿ ಬ್ರಹ್ಮವಸ್ತುವಿಗೆ ಇರುವಷ್ಟು ಲಕ್ಷಣಗಳು ಇನ್ನಾವ ವಸ್ತುವಿಗೂ ಇಲ್ಲವೆಂಬ ಅರ್ಥದಲ್ಲಿ ಅದು ಇಂದ್ರಿಯಾದಿ ಸರ್ವ ಕರಣಗಳಿಗೂ ಮೀರಿದೆ, ಲಕ್ಷಣವೇ ಇಲ್ಲವೆಂಬ ಅರ್ಥದಲ್ಲಿ ಅಲ್ಲ. ವೇದವ್ಯಾಸರು ಬ್ರಹ್ಮಸೂತ್ರದ ಪ್ರಾಸ್ತಾವಿಕ ಮೊದಲಸೂತ್ರದ ನಂತರ ಎರಡನೆಯದರಲ್ಲಿಯೇ ಉಪನಿಷದುಕ್ತವಾದ ಬ್ರಹ್ಮಲಕ್ಷಣವನ್ನು ತೋರಿಸಿದ್ದಾರೆ : “ ಜನ್ಮಾದ್ಯಸ್ಯ ಯತಃ ”— ‘ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳು ಯಾವ ಪರವಸ್ತುವಿನಿಂದ ಆಗುತ್ತವೆಯೋ ಅದು (ಪರಬ್ರಹ್ಮ)” ಎಂಬುದಾಗಿ. ಇದು ಬೇರೆ ಯಾವ ವಸ್ತುವಿಗೂ ಅನ್ವಯವಾಗದ ಕಾರಣ, ಅವ್ಯಾಪ್ತಿ–ಅತಿವ್ಯಾಪ್ತಿ ಮೊದಲಾದ ದೋಷಗಳಿಲ್ಲದೆ ಬ್ರಹ್ಮವಸ್ತುವಿಗೆ ಮಾತ್ರ ವಿಶಿಷ್ಟ ಲಕ್ಷಣವಾಗಿರುವುದು. ಇಂಥ ವಸ್ತು ಸಾಕ್ಷಾತ್ಕಾರ ಮಾಡಿದವನೇ ಬ್ರಹ್ಮಜ್ಞಾನಿ, ಎಂಬುದು ವೇದ ಸಮ್ಮತವಾದ ಮಾರ್ಗ.

“ ಬ್ರಹ್ಮವು ಲಕ್ಷಣ ಹೊಂದಿದ್ದರೆ ಹೊಂದಿರಲಿ, ಬಿಟ್ಟರೆ ಬಿಡಲಿ, ನಮಗೇನು ?” ಎಂದರೆ, ಒಂದೂರಿಗೆ ಹೊರಡುವವನು, ಆ ಊರಿಗೆ ಹೋಗಿ ಬಂದವರಿಂದಲೋ, ನೋಡಿದವರಿಂದಲೋ, ಕೊನೆಗೆ ರೈಲ್ವೇಗೈಡು, ಪ್ರಯಾಣಿಕರ ಗೈಡು, ಮುಂತಾದ ಪುಸ್ತಕಗಳಿಂದಲೋ, ಅಕ್ಕರೆಯಿಂದ, ಆ ಊರಿನ ಸಮಸ್ತ ಉಪಯುಕ್ತ ವಿಷಯಗಳನ್ನೂ ಪೂರ್ವಭಾವಿಯಾಗಿಯೇ ತಿಳಿಯು

ವಂತೆ, ನಾವೂ ಶಾಸ್ತ್ರಾಧ್ಯಯನ, ಬ್ರಹ್ಮಜಿಜ್ಞಾಸೆ, ವೇದಾರ್ಥ ಪ್ರಯತ್ನ, ಶ್ರವಣ, ಪಾರಾಯಣಾದಿಗಳಿಂದ ಹೀಗೆ ಪರಮಪದಾವಾಪ್ತಿಗೆ ಪ್ರಯತ್ನಿಸ ಬೇಕು. ಇಲ್ಲದಿದ್ದರೆ, ಎಲ್ಲಿಗೋ ಉದ್ದೇಶಮಾಡಿ ಹೊರಟವನು ಮತ್ತೆಲ್ಲಿಗೋ ಸೇರಿದಂತಾಗಿ, ಉದ್ದೇಶ ನಾಶ, ಕ್ಲೇಶ ಸಂಪಾದನೆ ಮಾತ್ರ ಆಗುವುದು. ಅನೇಕರು ವಾಮಾಚಾರ ಮಾರ್ಗದಲ್ಲಿ, ಮದ್ಯಪಾನ ಮಾಡಿಯೋ, ಸುಮ್ಮನೆ ವೇಷಗಳನ್ನು ಧರಿಸಿ ಮೌನವಾಗಿ ಕುಳಿತೋ, ಅಥವಾ ಈಗೀಗ ಭ್ರಾಂತರು, ಮೂರ್ಛಿತರು ಮೊದಲಾದವರೂ ಸಹ "ನನಗೆ ಬ್ರಹ್ಮ ಸಾಕ್ಷಾತ್ಕಾರ ವಾಗಿದೆ" ಎಂದು ಸುಲಭವಾಗಿ ಇತರರನ್ನು ವಂಚಿಸುವುದು ಸಾಧ್ಯವಾಗು ವುದು. ಮದ್ಯಪಾನಮಾಡಿ ಬಿದ್ದವನಿಗೆ, ಮೂರ್ಛೆಯಲ್ಲಿ ಬಿದ್ದವನಿಗೆ, ಆಗಿ ರುವ " ಅನುಭವ " ಕ್ಕೂ, ಬ್ರಹ್ಮಜ್ಞಾನಿಗಳಾದ ವಾಮದೇವ, ವಸಿಷ್ಠಾದಿಗಳ "ಅನುಭವ"ಕ್ಕೂ ಏನು ವ್ಯತ್ಯಾಸವೆಂಬ ಪ್ರಶ್ನೆ ಎದ್ದೇ ಏಳುವುದು ಖಂಡಿತ. ಇದಕ್ಕೆ ವೇದಾಂತಶಾಸ್ತ್ರದಲ್ಲಿ ಉತ್ತರ ಹೇಳದಿದ್ದರೆ, ಈಗ ನಡೆಯುತ್ತಿರು ವಂತೆ, ಎಲ್ಲರೂ ಬ್ರಹ್ಮಜ್ಞಾನಿಗಳೆಂಬ ಸೋಗುಹಾಕಲು ಸಹಾಯಮಾಡಿ ಕೊಟ್ಟಂತಾಗುವುದು. ಹೀಗೆ ಸೋಗುಹಾಕುವರಿಗೆ, ಬ್ರಹ್ಮಲಕ್ಷಣ ಹೇಳು, ನಿನಗೆ ಬ್ರಹ್ಮಾನುಭೂತಿಯಾಗಿದ್ದರೆ ?" ಎಂಬ ಪ್ರಶ್ನೆಯು ಅತ್ಯಂತ "ಉಪದ್ರವ" ಕಾರಕವಾದುದರಿಂದ, ಇವರು ಈ ಪ್ರಶ್ನೆಯನ್ನೇ ಅಲ್ಲದೆ, ವೇದಾಂತ ಶಾಸ್ತ್ರಕ್ಕೇ ತಳಪಾಯವಾದ ಇಡೀ ತರ್ಕಶಾಸ್ತ್ರವನ್ನೇ ನಿಷ್ಫಲ ವೆಂದೂ, ಶುಷ್ಕವೆಂದೂ, ನಿರಾಕರಿಸಿ ಇದನ್ನೇ ಸರ್ವಸಾಮಾನ್ಯವಾದ ಲೋಕ ರೀತಿ (Fashion) ಆಗಿ ಮಾಡಿದ್ದಾರೆ. ನಿಜವಾದ ವೇದಾಂತಿಗೆ, ತರ್ಕ ನಿರಾಕರಣೆಯು, ಬ್ರಹ್ಮದ್ರೋಹವೆಂದು ಅನಿಸಿದರೆ ಆಶ್ಚರ್ಯವಿಲ್ಲ. ("An attack on a Systematic thought is a treason unto Civilization"—Dr. A. N. WHITEHEAD)

ಆದುದರಿಂದ ವೇದೋಕ್ತ ಸಲಕ್ಷಣಬ್ರಹ್ಮೋಪಾಸನೆಯೇ ವಸ್ತುತಃ ಅನುಭೂತಿಗೆ ಹೆಚ್ಚು ಸಮಂಜಸವಾದುದು. ಆದರೆ "ಜನ್ಮಾದ್ಯಸ್ಯಯತಃ" ಎಂದು ತಿಳಿದ ಮಾತ್ರದಿಂದ ಬ್ರಹ್ಮಸಾಕ್ಷಾತ್ಕಾರವಾಯಿತೇ ? ಎಂದು ಕೇಳಿದರೆ "ರೇಲ್ವೆ ಗೈಡು ನೋಡಿದ ಮಾತ್ರದಿಂದ, ಊರನ್ನೇ ಕಂಡತಾಯಿತೇ ? ಎಂದು ಕೇಳಿದಂತಾಗುವುದು. ಅಂದರೆ ಇದು ಮೊದಲ ಹೆಜ್ಜೆ ಮಾತ್ರ,

ಅಲ್ಲದೆ ಉಳಿದೆಲ್ಲ ಲಕ್ಷಣಗಳೂ ಇದರಲ್ಲಿಯೇ ಅಡಕವಾದುವೆಂಬ ಅರ್ಥದಲ್ಲಿ ಮಾತ್ರ ಈ ಲಕ್ಷಣಕ್ಕೆ ಪ್ರಾಶಸ್ತ್ಯ. ಇದರಲ್ಲಿ ಅಡಕವಾದದ್ದೇನೇನು? ಎಂದು ಬ್ರಹ್ಮ ಜಿಜ್ಞಾಸುವು ಪರಮಾತ್ಮನ ಒಂದೊಂದೇ ಗುಣ, ವಿಭೂತಿ, ಲೀಲಾ ಚೇಷ್ಟಿತಗಳನ್ನು ಅಪರಿಚ್ಛಿನ್ನ ಕಾಲದ ಉದ್ದಕ್ಕೂ ಅನುಭವಿಸುತ್ತಿದ್ದರೆ, ಬ್ರಹ್ಮ ವಸ್ತುವಿನ ಬೃಹತ್ತ್ವದ ಅರಿವು ಆಗುತ್ತಾ ಹೋಗುವುದು. ಬ್ರಹ್ಮ ವಸ್ತುವು ಸ್ವಭಾವತಃ "ದೊಡ್ಡ"ದಾದುದರಿಂದ ("ತಸ್ಯನಾಮ ಮಹದ್ಯಶಃ") ಅದರ ಅನುಭವವು ಒಂದು ಕ್ಷಣದಲ್ಲಿ ಆಗಿ ಹೋಗಿ ಮುಗಿಯುತಕ್ಕದ್ದಲ್ಲ. ಮುಗಿದು ಹೋದ ಪಕ್ಷದಲ್ಲಿ, ಅದು ಬ್ರಹ್ಮಾನುಭೂತಿಯಲ್ಲ— ಬರೀ ಮೋಸ ವೆಂದು ಹೇಳಬೇಕಾಗುತ್ತದೆ ! ಅಲ್ಲದೆ, ಅನುಭವಿಯೂ ಈ ಅನಂತಾನು ಭೂತಿಗೆ ಸರಿಯಾದ ಪಾತ್ರವಾಗಿರುವಂತೆ ದೊಡ್ಡವನಾಗಬೇಕಾಗು ತ್ತಾನೆ: "ಏತತ್ಸಾಮಗಾಯನ್ನಾಸ್ತೇ" ಎಂದು ಉಪನಿಷತ್ತು ವರ್ಣಿಸು ವಂತೆ ಇದು ನಿರಂತರ ವ್ಯಾಪಾರ.

ಇದಕ್ಕೆ ಸಹಾಯಕವಾಗುವುದೇ ಜಪ, ಧ್ಯಾನ ಮುಂತಾದುವು, ಅದ ರಲ್ಲೂ ಶ್ರೀ ಶಂಕರಾದಿ ಸಕಲ ಆಚಾರ್ಯ ಮಾನ್ಯವಾದ ವಿಷ್ಣು ಸಹಸ್ರನಾ ಮಾದಿ ಸ್ತೋತ್ರಗಳು. ಸಾವಿರ 'ನಾಮ'ಗಳೂ ಭಗವಂತನ ಸಾವಿರ ಮುಖದ ಚಿತ್ರಗಳು. (Each Name presents a concept of God, leading to a continuous perception of God). "ವಿಶ್ವಂ" ಎಂದರೆ ''ಜಗತ್ತಿನಲ್ಲಿ ಪ್ರವೇಶಮಾಡಿದವ"ನೆಂದೂ, "ವಿಷ್ಣುಃ" ಎಂದರೆ, "ಎಲ್ಲವನ್ನೂ ವ್ಯಾಪಿಸಿದವ"ನೆಂದೂ, ಮುಂದೆ ಒಂದೊಂದೇ ಶ್ರೀನಾಮಗಳಲ್ಲಿ ಭಗವಂತನ "ಗುರುತು" ಹತ್ತುತ್ತಾ ಹೋಗುವುದು. ಮಹಾಭಾರತದಲ್ಲಿ ಶ್ರೀ ಭೀಷ್ಮರು ಈ ದಿವ್ಯಸ್ತೋತ್ರದ ಆರಂಭದಲ್ಲಿ ಈ ಶ್ರೀನಾಮಗಳು ತಮ್ಮ ಸ್ವ-ಕಪೋಲ ಕಲ್ಪಿತವಲ್ಲವೆಂದೂ, "ಋಷಿಭಿಃ ಪರಿಗೀತಾನಿ, "ಮಹಾದರ್ಶಿ ಗಳಾದ ಋಷಿಗಳಿಂದ ಗಾನರೂಪದಲ್ಲಿ ಕೊಂಡಾಡಲ್ಪಟ್ಟ"ವೆಂದೂ, ಧರ್ಮ ರಾಜನ ಮೇಲ್ಮೆಗಾಗಿ, "ಭೂತಯೇ", ಅವನ "ಅಸ್ತಿತ್ತ್ವ"ಕ್ಕಾಗಿಯೇ ಉಪದೇಶ ಮಾಡುತ್ತಿರುವುದಾಗಿಯೂ ಘೋಷಿಸಿದ್ದಾರೆ.

ವೇದದಲ್ಲಿ ಬರುವ ಒಂದೊಂದು ದೇವತೆಯೂ ಭಗವದಂಶರೆಂದ ಮೇಲೆ, ಅವರ ಒಬ್ಬೊಬ್ಬರ "ಹೆಸರಿ"ನಲ್ಲೂ ತದಂತರ್ಯಾಮಿಯಾದ ಭಗವದಂಶಗಳ

ಪರಿಚಯವಿರುತ್ತದೆ ಎಂಬುದು, ಶ್ರೀ ಮಧ್ವಾಚಾರ್ಯರನ್ನೊಳಗೊಂಡಂತೆ ಎಲ್ಲ ಆಚಾರ್ಯರ ಮತ. ಉದಾಹರಣೆಗೆ "ಅಜ" ಎಂಬ ಹೆಸರು ಬ್ರಹ್ಮದೇವನಿಗೆ ರೂಢಿಯಲ್ಲಿದ್ದರೂ, ಮುಖ್ಯವೃತ್ತಿಯಲ್ಲಿ ಹುಟ್ಟು ಸಾವಿಲ್ಲದ ಪರಮಾತ್ಮನನ್ನು ಸೂಚಿಸುತ್ತದೆ. "ಇಂದ್ರಕರ್ಮಾ" ಎಂಬುದೂ "ಈಶ್ವರ" ಎಂಬುದೂ, "ಶಿವ" ಎಂಬುದೂ, "ಕಪಿಲಃ" ಎಂಬುದೂ, "ಕಾಮದೇವಃ" ಎಂಬುದೂ, "ತೀರ್ಥಕರಃ" ಎಂಬುದೂ, "ಧನಂಜಯ", "ಪರ್ಜನ್ಯ", "ಪುರಂದರ", "ಪ್ರಜಾಪತಿ", "ಭೀಮ", "ಮನ", "ಯಜ್ಞ", "ರುದ್ರ", "ವರುಣ", "ವಸು", "ವಾಚಸ್ಪತಿ", "ವಾಯು", "ವಿಶ್ವಕರ್ಮಾ", "ವೃಷಭ", "ಶಂಭು" ಇತ್ಯಾದಿ ವೇದೋಕ್ತ, ವೇದ ಸಂಮ್ಮತವಾದ, ಸಕಲ ನಾಮಗಳೂ ಭಗವಂತನ ಅನಂತ ವ್ಯಕ್ತಿತ್ವಕ್ಕೆ ಬಹುಮುಖಗಳು. ಅರ್ಜುನನ ಮೇಲಿನ ಕೃಪೆಯಿಂದ ಭಗವಂತನು ತನ್ನ ಅನಂತಮುಖಗಳೊಡನೆ, ಅನಂತಬಾಹುಗಳೊಡನೆ, ಅವನೆದುರಿಗೆ ನಿಂತಂತೆ, ನಮಗೂ ಪ್ರತ್ಯಕ್ಷನಾದರೆ, ಅವನನ್ನು ಯಾವ ಮುಖದಿಂದ ಗುರುತಿಸಬೇಕು ? ಮತ್ತು ಏನೆಂದು (ಕಃ) ಕರೆಯಬೇಕು ? ಎಂಬುದು ಈ ಲೇಖನಕ್ಕೆ ವಿಷಯವಾಗಿರುವ ಒಂದು ದಿವ್ಯ ವೇದ ಸೂಕ್ತದ ಪ್ರಶ್ನೆ :

ಎಲ್ಲ ದೇವತೆಗಳೂ ಭಗವಂತನ ಮುಖಗಳೆಂಬುದು ನಿಜವಾದರೂ, ಈ ಮುಖಗಳಲ್ಲಿ ಯಾವುದು ಮುಖ್ಯ ಮುಖ ? ಎಂಬ ಗೊಂದಲದ, (ಅವಿವೇಕದ?) ಪ್ರಶ್ನೆ ಒಮ್ಮೊಮ್ಮೆ ಏಳುತ್ತದೆ. ಇದು ಸರಿಯಾಗಿರಲಿ, ಇಲ್ಲದಿರಲಿ. ಏಕೆಂದರೆ, 'ಗುರುತು' ಹಚ್ಚಿದ ಹೊರತು ಸಮಾಧಾನವಾಗಲಾರದಷ್ಟು ಇದು ಸಹಜ. ಪಂಥ ಪಂಥಗಳ ಜಗಳಕ್ಕೆ ಒಂದು ರೀತಿಯಿಂದ ಇಲ್ಲಿ ಅವಿವೇಕಿಗಳಿಗೆ ಅವಕಾಶವಿದೆ, ನಿಜ. ಆದರೆ ಮತ್ತೊಂದು ದೃಷ್ಟಿಯಿಂದ ವಿವೇಕಿಗಳ ಪಾಲಿಗೆ, ಈ ಪ್ರಶ್ನೆಗೆ ಬೇರೆ ಅರ್ಥವಿದೆ: "ಭಗವಂತನ ಶ್ರೀನಾಮಗಳಲ್ಲಿ ಯಾವುದೊಂದಕ್ಕೆ ಉಳಿದೆಲ್ಲವನ್ನೂ ಒಳಗೊಳ್ಳುವಷ್ಟು ವಿಸ್ತಾರಾರ್ಥವಿದೆ?" ಎಂಬುದು ಜಿಜ್ಞಾಸುವಿಗೆ ಉಪಕಾರಕವಾದ ಪ್ರಶ್ನೆ.

ಶ್ರೀ ಮದ್ಭಾಗವತಮಹಾಪುರಾಣದಲ್ಲಿ ಈ ವಿಷಯಕ್ಕೆ ಒಂದು ಮಾರ್ಮಿಕ ಕಥೆಯಿದ್ದು ಅದನ್ನು ಇಲ್ಲಿ ಪ್ರಸ್ತಾಪಿಸುವುದು ಉಚಿತವಾಗಿದೆ : (X-89)

ಸರಸ್ವತೀ ನದೀ ತೀರದಲ್ಲಿ ಒಂದು ಕಾಲದಲ್ಲಿ ಋಷಿಗಳು ಸತ್ರಯಾಗವನ್ನು ನಡೆಸುತ್ತಿದ್ದರು. ಆಗ ಸಕಲ ದೇವತೆಗಳಲ್ಲೂ ಪ್ರಧಾನರಾದ ತ್ರಿಮೂರ್ತಿಗಳಲ್ಲೂ ಪ್ರಧಾನನು ಯಾರೆಂಬ ವಿಷಯದ ಚರ್ಚೆ ಆಯಿತು. ನಿರ್ಣಯ ಕಷ್ಟವಾಯಿತು. ಆಗ ಋಷಿಗಳೆಲ್ಲರೂ ಸೇರಿ, ಸಪ್ತರ್ಷಿಗಳಲ್ಲಿ ಒಬ್ಬರೂ, ಬ್ರಹ್ಮದೇವನ ಮಾನಸಪುತ್ರರಲ್ಲಿ ಶ್ರೇಷ್ಠರಾದ ಭೃಗುಮಹರ್ಷಿಯನ್ನು ಈ ಪ್ರಶ್ನೆಯ ನಿರ್ಣಯಕ್ಕಾಗಿ ತ್ರಿಮೂರ್ತಿ ಪರೀಕ್ಷೆ ನಡೆಸಿ ಉತ್ತರ ಕೊಡುವಂತೆ ನಮ್ರತೆಯಿಂದ ಪ್ರಾರ್ಥಿಸಿದರು. ಭೃಗುವು ಮೊದಲು ಬ್ರಹ್ಮ ಸಭೆಗೆ ಹೋದನು. ಅವನನ್ನು ಪರೀಕ್ಷಿಸಲು ಅವನನ್ನು ಸ್ತುತಿಸದೇ ಸುಮ್ಮನಿದ್ದನು. ಆಗ ಬ್ರಹ್ಮನಿಗೆ ತಡೆಯಲಾರದಷ್ಟು ಕೋಪ ಬಂದಿತು. ಆದರೆ ಸ್ವಂತ ಮಗನಾದ ಭೃಗುವನ್ನು ಶಪಿಸಲಾರದೇ, ಕಷ್ಟಪಟ್ಟು ಅಡಗಿಸಿಕೊಂಡನು. ಭೃಗುವು ಇದನ್ನರಿತು, ಬ್ರಹ್ಮದೇವನು ರಜೋಗುಣಪ್ರಧಾನನೆಂದು (ಸೃಷ್ಟಿ ಕ್ರಿಯೆಗೆ ಅನುಕೂಲವಾದ ಗುಣ) ತಿಳಿದು, ರುದ್ರ ಸಭೆಗೆ ಬಂದನು. ಸೋದರನನ್ನು ಕಂಡು ರುದ್ರನು ಪ್ರೀತಿಯಿಂದ ಆಲಿಂಗಿಸಲು ಬಂದಾಗ ಪರೀಕ್ಷೆಗಾಗಿ ಭೃಗುವು ಈ ಚುಚ್ಚು ಮಾತನ್ನು ಆಡುತ್ತಾನೆ : "ನನ್ನನ್ನು ಮುಟ್ಟಬೇಡ ! ನೀನು ಲೋಕಾನುವರ್ತಿಯಲ್ಲದೆ ಇಷ್ಟ ಬಂದಂತೆ ನಡೆಯುವವನು" ಎಂದು ಆಕ್ಷೇಪಿಸಲು ರುದ್ರನು ಶೂಲದಿಂದ ಭೃಗುವನ್ನು ಕೊಲ್ಲಲು ಮುಂದೆ ಬಂದನು. ಆಗ ಪಾರ್ವತಿಯು ಶಿವನನ್ನು ಸಾಂತ್ವನ ಗೊಳಿಸಿದಳು. ಭೃಗುವು ರುದ್ರನು ತಮೋಗುಣಪ್ರಧಾನನೆಂದು (ಇದು ಲೋಕಗಳ ಲಯಕ್ಕೆ ಉಪಕಾರವಾದ ಗುಣ) ತಿಳಿದು ವಿಷ್ಣುಲೋಕಕ್ಕೆ ಬಂದಾಗ ವಿಷ್ಣುವು ಲಕ್ಷ್ಮೀ ಸಮೇತನಾಗಿ ಶೇಷಶಾಯಿಯಾಗಿದ್ದನ್ನು ಕಂಡು, ಪರೀಕ್ಷಾರ್ಥವಾಗಿ ವಿಷ್ಣುವಿನ ವಕ್ಷಃಸ್ಥಲಕ್ಕೆ ಪಾದದಿಂದ ಒದೆಯುತ್ತಾನೆ. ಆಗ ವಿಷ್ಣುವು ತಟ್ಟನೆ ಮೇಲೆದ್ದು ಭೃಗುವನ್ನು ಸ್ವಾಗತಿಸಿ, ಅವನ ಪಾದಗಳಿಗೆ ನಮಸ್ಕರಿಸಿ ಹೀಗೆ ಹೇಳುತ್ತಾನೆ : "ಸ್ವಾಮೀ ! ತಾವು ಬಂದುದನ್ನು ತಿಳಿ

ಯದೇ ನನ್ನಿಂದ ತಮಗೆ ಅಪರಾಧವಾಯಿತು. ನಿಮ್ಮ ಪಾದವು ಸಕಲ ತೀರ್ಥಗಳಿಗೂ ಪಾವನವು. ಈ ಪಾದಸ್ಪರ್ಶದಿಂದ ನನ್ನ ವಕ್ಷಃಸ್ಥಳವು ಲಕ್ಷ್ಮೀ ನಿವಾಸಕ್ಕೆ ಯೋಗ್ಯವಾಯ್ತು. (ಕಲ್ಲಾದ ನನ್ನ ಎದೆಯನ್ನು ಒದ್ದು) ನಿಮ್ಮ ಕೋಮಲಪಾದವು ನೊಂದಿರಬೇಕೆಂ"ದು ಮುನಿ ಪಾದಗಳನ್ನು ಒತ್ತಿದಾಗ, ಆನಂದ ಪುಳಕಿತನಾದ ಭೃಗುವು ಇವನೇ ಸರ್ವಸತ್ತ್ವಮಯನಾದ ದೇವತಾ ಸಾರ್ವಭೌಮನೆಂದು ನಿಷ್ಕರ್ಷಿಸಿ, ಉಳಿದ ಋಷಿಗಳಿಗೆ ತಿಳಿಸಲು, ಇದು ಅಂಗೀಕೃತವಾಗಿ "ವಿಷ್ಣುಸ್ಸರ್ವಾ ದೇವತಾಃ" ಎಂಬಂತೆ ನಿರ್ಣಯವಾಯಿತು. (ಪುರಾಣಾಂತರಗಳಲ್ಲಿ, ಋಷಿಗಳು ಯಜ್ಞದ ಕೊನೆಯಲ್ಲಿ ಇನ್ನೂ ಉಳಿದಿದ್ದ ಹವಿಸ್ಸಿನ ಶೇಷವನ್ನು ಯಾರಿಗೆ ಅರ್ಪಿಸಬೇಕೆಂದು (ಕಸ್ಮೈದೇವಾಯ ಹವಿಷಾ ವಿಧೇಮ)ತಿಳಿಯದೇ ಭೃಗುವಿನಿಂದ ಹೀಗೆ ನಿರ್ಣಯಿಸಿ, ಕೊನೆಗೆ ಆ ಹವಿಸ್ಸನ್ನು "ಸರ್ವಂ ಶ್ರೀ ವಿಷ್ಣವೇ ಸ್ವಾಹಾ" ಎಂದು ಅರ್ಪಿಸಿದರೆಂದೂ, ಹೇಳಿದೆ. ಈ ಪದ್ಧತಿಯು ಸ್ಮಾರ್ತ, ವೈಷ್ಣವ ಶ್ರೀವೈಷ್ಣವಾದಿ ಸಕಲ ವೇದಾವಲಂಬಿಗಳಲ್ಲಿಯೂ ಈಗಲೂ ನಡೆದು ಬರುತ್ತಿರುವುದೇ, ಈ ವಿಷಯಕ್ಕೆ ಪ್ರಮಾಣ). ಸೃಷ್ಟಿ, ಸ್ಥಿತಿ, ಲಯಗಳೂ ಒಂದಕ್ಕೊಂದು ಹೇಗೆ ಸಂಬಂಧಿಸಿವೆ ? ಯಾವು ದಕ್ಕಾಗಿ ಯಾವುದು ಇದೆ ಎಂದರೆ,

೧) ಸೃಷ್ಟಿಗಾಗಿ ಸೃಷ್ಟಿಯಲ್ಲ, ಲಯವಲ್ಲ, — ಸ್ಥಿತಿಗಾಗಿ ಸೃಷ್ಟಿ.

೨) ಲಯಕ್ಕಾಗಿ ಸೃಷ್ಟಿಯಲ್ಲ, ಸ್ಥಿತಿಯಲ್ಲ,— ಸ್ಥಿತಿಗಾಗಿ ಲಯ.

೩) ಸ್ಥಿತಿಗಾಗಿ ಸ್ಥಿತಿ; ಸ್ಥಿತಿಗಾಗಿ ಸೃಷ್ಟಿ; ಸ್ಥಿತಿಗಾಗಿ ಲಯ.

ಅಂದರೆ ದೇವರು ಎಲ್ಲರನ್ನೂ ರಕ್ಷಿಸಲು, ರಕ್ಷಕತ್ತ್ವವನ್ನೇ ಪ್ರಧಾನವನ್ನಾಗಿ ಹೊಂದಿ, ಲಯದಿಂದಲೂ, ಪುನಃಸೃಷ್ಟಿಯಿಂದಲೂ, ಜಗದ್ಧಿತವನ್ನೇ ಆಚರಿಸುತ್ತಿದ್ದಾನೆಂಬುದು ಈ ಕಥೆಯ ಒಳಮರ್ಮ, ತಾತ್ಪರ್ಯವೇ ವಿನಾ ದೇವತಾಂತರ ದೂಷಣವಲ್ಲ, ಎಂದು ತಿಳಿಯಬೇಕು. ಸೃಷ್ಟಿಗಾಗಿ ಸೃಷ್ಟಿಯೆಂದರೆ ಚಾರ್ವಾಕವಾದವೂ, ಲಯಕ್ಕಾಗಿ ಲಯವೆಂದರೆ ಶೂನ್ಯವಾದವೂ ಉದಿಸುವವಾದುದರಿಂದ ವೇದ ದರ್ಶನದಲ್ಲಿ ಇವು ಸ್ಥಿತಿತತ್ತ್ವಕ್ಕೆ ಅಧೀನವಾಗಿ ಒಳಪಟ್ಟಿವೆ ಎಂಬ ಪೋಷಕ ದೃಷ್ಟಿ ಇದೆ.

ಒಂದು ಮಣಿ ಹಾರದಲ್ಲಿ ಎಲ್ಲ ಬಣ್ಣದ ಸಮಾಕಾರದ ಮಣಿಗಳಿದ್ದರೂ, ದೊಡ್ಡದಾದ "ನಾಯಕಮಣಿ" ಎಂಬುದೊಂದಿರುತ್ತದೆಯಷ್ಟೆ. ಇದು ಮಧ್ಯದಲ್ಲಿ ಬರುವಂತೆ ಹಾರವನ್ನು ಧರಿಸುವುದು ಚೆನ್ನಾಗಿ ಕಾಣುವುದು. ಪರಮಾತ್ಮನ ಮುಖಗಳಲ್ಲಿ ಎಲ್ಲವೂ ಮುಖ್ಯವಾದರೂ, ಸಂಕ್ಷೇಪದಲ್ಲಿ ಸಮಗ್ರವಾಗಿ ಧ್ಯಾನಿಸಲು, ಎಲ್ಲವನ್ನೂ ಪ್ರತಿನಿಧಿಸುವ ಒಂದಾನೊಂದನ್ನು ಆರಿಸಿಕೊಳ್ಳಬೇಕಾಗುವುದು. ಈ ಆರಿಸುವುದು ಹೇಗೆ ? ಎಂಬ ವಿಷಯಕ್ಕೆ ಈ ಕೆಳಕಂಡ ಋಕ್ಸೂಕ್ತವಿರುವುದು (X—121) :

ಈ ಸೂಕ್ತದ ಹತ್ತು ಮಂತ್ರಗಳಲ್ಲಿ ಪ್ರತಿಯೊಂದರ ಕೊನೆಯಲ್ಲೂ "ಕಸ್ಮೈದೇವಾಯ ಹವಿಷಾ ವಿಧೇಮ" ಎಂಬ ವಾಕ್ಯವಿರುವುದು. ಇದು ಪ್ರಶ್ನೆಯೂ, ಉತ್ತರವೂ ಏಕಕಾಲಕ್ಕೆ ಆಗಿರುವುದು. "ಕಃ" ಎಂದರೆ "ಯಾರವನು ?" ಎಂದೂ "ಯಾವನೋ ಒಬ್ಬನು" ಎಂದೂ. "ಕಮ್" ಧಾತುವಿನಿಂದ, ಪ್ರೇಮಮಯನೆಂದೂ, ಸುಖಸ್ವರೂಪನೆಂದೂ, "ಕ್ರಮ್" ಧಾತುವಿನಿಂದ ತ್ರಿವಿಕ್ರಮನೆಂದೂ ಅರ್ಥವೆಂದು ನಿರುಕ್ತಕಾರರು ತೋರಿಸುತ್ತಾರೆ. ಹವಿಸ್ಸೆಂದರೆ ನಮ್ಮ ಆತ್ಮಾತ್ಮೀಯ ಅರ್ಪಣೆಯ ಸಾಂಕೇತಿಕವಾದ ಆಜ್ಯಸಮರ್ಪಣೆ ಎಂದು ಅರ್ಥ. ಹೀಗೆ ಸೂಕ್ತದ ಒಂದೊಂದು ಮಂತ್ರದಲ್ಲೂ ಭಗವತ್ಸ್ವರೂಪದ ವಿಶೇಷ ವರ್ಣನೆ ಇದ್ದು, ಕೊನೆಯ ಪ್ರಶ್ನೆಗೆ "ಇವನಿಗೆ, ಇಂತಹ ಪರವಸ್ತುವಿಗಲ್ಲದ ಬೇರೆ ಯಾರಿಗೆ ಆತ್ಮಾರ್ಪಣೆ ?" ಎಂಬ ದಿಟ್ಟ ಉತ್ತರದ ಧ್ವನಿಯೂ ಇದೆ. ವೇದಗಳಲ್ಲಿ ಏಕ ದೇವ ಭಾವಕ್ಕೆ ಶ್ರೇಷ್ಠ ನಿದರ್ಶನವಾಗಿರುವ ಈ ಸೂಕ್ತದಲ್ಲಿ ಅಸಂಖ್ಯೇಯ ಧ್ವನಿಗಳಿರುವುದನ್ನು ಗಮನಿಸಬಹುದು. ನಿತ್ಯಪಾರಾಯಣದಿಂದ ನಿತ್ಯ ನೂತನ ಅರ್ಥಗಳು ಸ್ಫುರಿಸುವುದೆಂಬುದು ಅನುಭವ ಸಿದ್ಧ. ಇದರ ಸ್ಥೂಲ ಸಂಗ್ರಹವನ್ನು ಹೀಗೆ ಮಾಡಬಹುದು :

"ಸಕಲಚರಾಚರ ಸೃಷ್ಟಿಗೂ ಪೂರ್ವದಲ್ಲಿ ಪರಮಾತ್ಮನು, ತಾನೊಬ್ಬನೇ ಅದ್ವಿತೀಯನಾಗಿ ಇದ್ದನು. ಪ್ರಳಯ ಕಾಲದಲ್ಲಿ ಹಾಳಾಗಿಯೇ ಹೋಗಬಹುದಾಗಿದ್ದ ಈ ಜಗತ್ತನ್ನು ಚಿನ್ನದ ಅದುರಿನಂತೆ ತನ್ನ ಗರ್ಭದಲ್ಲಿಯೇ

ಇಟ್ಟುಕೊಂಡು ರಕ್ಷಿಸಿ, ಮುಂದೆ ಸೂಕ್ತ ಕಾಲದಲ್ಲಿ ಹೊರತಂದು ಪೃಥಿವೀ ದ್ಯುಲೋಕಾದಿಗಳನ್ನು ತಾನೇ ಧರಿಸಿ, ಭರಿಸಿ, ಎಲ್ಲ ವಿಧದಿಂದಲೂ ರಕ್ಷಕನಾಗಿ, ಸರ್ವಜಗತ್ಪತಿಯಾಗಿ, ( ಪ್ರಜಾಪತಿಯಾಗಿ ) "ಹಿರಣ್ಯಗರ್ಭ"ನಾದ ಈ "ಯಾವನೋ ಒಬ್ಬನಿಗೆ" (ಇವನಿಗಲ್ಲದೆ ಮತ್ತೆ ಯಾರಿಗೆ ?) ನಮ್ಮನ್ನು ನಾವು ಹವಿಸ್ಸಿನ ರೂಪದಲ್ಲಿ ಅರ್ಪಿಸಿ ಕೊಳ್ಳೋಣ. (ಇದಲ್ಲದೆ ಮತ್ತೇನು ಪ್ರತಿಫಲ ಕೊಡಬಲ್ಲೆವು ಅವನ ಈ ಅನುಗ್ರಹ ವಿಶೇಷಕ್ಕೆ ?) ಯಾವನು ನಮಗೆ ಚೈತನ್ಯ ಕೊಟ್ಟಿರುವನೋ, ನಮ್ಮೊಳಗೆ ತನ್ನನ್ನೇ ದಾನ ಮಾಡಿಕೊಂಡು ಅಂತರ್ಯಾಮಿಯಾಗಿರುವನೋ. ಯಾವನ ಮಾರ್ಗದರ್ಶನ ರೂಪವಾದ ಆಜ್ಞೆಯನ್ನು ಎಲ್ಲ ಜೀವಿಗಳೂ ದೇವತೆಗಳೂ ಪಾಲಿಸುವರೋ, ಅಮೃತವೂ ಮೃತ್ಯುವೂ ಯಾವನ ನೆರಳುಗಳೋ, ಅಂತಹ ಈ "ಯಾವನೋ ಒಬ್ಬನಿಗೆ" (ಇವನಿಗಲ್ಲದೆ ಮತ್ತೆ ಯಾರಿಗೆ) ಆತ್ಮಾರ್ಪಣದ ಹೊರತು ಕೊಡಲು ನಮ್ಮಲ್ಲೇನುಂಟು ? (ಇದನ್ನಾದರೂ ನಾವು ಮಾಡದಿದ್ದರೆ ಕೃತಘ್ನರಲ್ಲವೇ ? ಏನು ಮಹಾ ಉಪಕಾರ ಮಾಡಿದ್ದಾನೆ ಈ ಯಾವನೋ ಒಬ್ಬನು ? ಎಂದು ಕೇಳಿದರೆ) ಎಷ್ಟಾದರೂ, ನಮಗೆ ನೋಡಲು ಕಣ್ಣನ್ನೂ ಉಸಿರಾಡಿಸಲು ಉಸಿರನ್ನೂ ಕೊಟ್ಟನಲ್ಲವ ? ಮನುಷ್ಯರಿರಲಿ, ಚತುಷ್ಪಾದಿಗಳಾದ ಪಶುಗಳೂ ಸಹ ಈ ವರಗಳನ್ನು ಪಡೆದವೆಂದ ಮೇಲೆ (ನಿರ್ವ್ಯಾಜವಾದ, ವಿಶ್ವವ್ಯಾಪಿಯಾದ, ಅವನಿಗೆ ಸಹಜವಾದ ಈ ಕರುಣೆಯನ್ನು ಏನೆಂದು ಕೊಂಡಾಡೋಣ ?) ಈ ಒಬ್ಬನಿಗೆ ಆತ್ಮಾರ್ಪಣೆರಿಂತ ಮತ್ತೇನು ಮಾಡ ಬಲ್ಲೆವು ? (ಉಸಿರನ್ನೂ ಅವನೇ ಕೊಟ್ಟದ್ದರಿಂದ, ನಮ್ಮದೆಂಬುದು ಏನೂ ಇಲ್ಲವಷ್ಟೇ ?) ಹಿಮದಿಂದ ಮುಚ್ಚಿದ ಬೆಟ್ಟಗಳೂ. ರಸದಿಂದ ತುಂಬಿದ ನದಿಗಳೂ, ಈ ನದಿಗಳಿಂದ ತುಂಬಿದ ಸಮುದ್ರಗಳೂ, ಈ ದೇವದೇವೋತ್ತಮನಾದ ಯಾವನೋ ಒಬ್ಬನ ಶರೀರದಲ್ಲಿ ಸಣ್ಣ ಅಂಶಗಳಾಗಿ, ಅವನ ನಿರತಿಶಯ ಮಹಿಮೆಗೆ ಸಾಕ್ಷಿಗಳು. (ಇಷ್ಟು ದೊಡ್ಡ ಒಬ್ಬನಿಗೆ. ಏನನ್ನು ತಾನೇ ಕೊಡಬಲ್ಲೆವು, ಎಂದು ಸಂಕೋಚಭಾವ.) ಕೊನೆಯಿಲ್ಲದ ದಿಕ್ಕುಗಳೇ ಇವನ ವಿಶಾಲ ಬಾಹುಗಳು. (ಇಂಥವನಿಗೆ ಏನನ್ನಾದರೂ ಕೊಡಬಲ್ಲೆವು ಎಂದು ಅನಿಸುವುದೇ ?) ಪ್ರವೇಶಿಸಲು ಅಸಾಧ್ಯವಾದ ಅಂತರಿಕ್ಷವನ್ನೂ, ಕ್ಷಮಾರೂಪವಾಗಿರುವ ಭೂಮಿಯನ್ನೂ, ಶಾಶ್ವತವಾದ ಉತ್ತಮ ಲೋಕ

ಗಳನ್ನೂ, ಈ ಲೋಕಗಳನ್ನು ಬೆಳಗಲೆಂದು ಆದಿತ್ಯನನ್ನೂ, ನಿರ್ಮಿಸಿ ಕೊಟ್ಟ ಈ ಯಾವನೋ ಒಬ್ಬನಿಗಲ್ಲದೆ, ಮತ್ತಾರಿಗೆ ಆತ್ಮಸಮರ್ಪಣೆ ? ಹೀಗೆ ಸೃಷ್ಟವಾದ ದ್ಯಾವಾಪೃಥ್ವಿಗಳೇ ಕೃತಜ್ಞತೆಯ ನೋಟದಿಂದ ಈ ಯಾವನೋ ಒಬ್ಬನನ್ನು ತಣಿಸಿ, ಉಲ್ಲಾಸಗೊಳಿಸುವಾಗ, ನಾವು (ಅಕಿಂಚನರಾದುದರಿಂದ ಕೊನೆಯ ಪಕ್ಷ) ಆತ್ಮಾರ್ಪಣೆಯನ್ನಾದರೂ ಮಾಡ ದಿದ್ದರೆ (ಸರಿ ಹೋಗುವುದೇ ?) ಪಂಚ ಭೂತಗಳನ್ನೂ, ಸಮಸ್ತ ದೇವತೆ ಗಳನ್ನೂ, ಚರಾಚರ ಜಗತ್ತನ್ನೂ, ರೇತೋರೂಪವಾದ (ತನ್ನ ಸಂಕಲ್ಪದ) "ಆಪಃ" ಎಂಬ ಪ್ರಸಿದ್ಧವಾದ ಜಲವಿಶೇಷದಿಂದ ಹೊರತೆಗೆದ ಈ ಯಾವನೋ ಒಬ್ಬನಿಗೆ ಅಲ್ಲವೇ ನಮ್ಮ ಆತ್ಮಾತ್ಮೀಯ ಸಮರ್ಪಣೆ (ಉಚಿತ ವಾದದ್ದು) ? ಅವನ ಪ್ರೇಮ ಕಟಾಕ್ಷ ಮಾತ್ರದಿಂದಲೇ ಇಲ್ಲಿರುವುದೆಲ್ಲ "ಇದೆ" "ವ್ಯವಸ್ಥಿತವಾಗಿದೆ" — ಸತ್ — ಎನಿಸಿ ಕೊಂಡಿತಾದುದರಿಂದ, ಈ ಯಾವನೋ ಒಬ್ಬನಲ್ಲವೇ ದೇವಾಧಿ ದೇವನು? (ಹೌದು) ಇವನೇ ಜಗಜ್ಜನಕನು, ಸತ್ಯ ಧರ್ಮನು, ಸತ್ಯಕಾಮನು, ಸತ್ಯಸಂಕಲ್ಪನು. ನಾವು ಇವನಿಗೆ ಎದುರು ಹೋಗದಂತಾಗಲೀ. "ಅವನು" ನಮ್ಮನ್ನು ನಿಗ್ರಹಿಸದೇ ಅನುಗ್ರಹಿಸುವಂತಾಗಲೀ. (ಈಗ ಇವನಿಗೇ ಹೀಗೆ ಪ್ರಾರ್ಥಿಸೋಣ ನೇರವಾಗಿ). "ಹೇ ಸೃಷ್ಟಿಗೊಡೆಯ ! ಮಹಾಮಹಿಮನಾದ ನಿನ್ನನ್ನು ಬಿಟ್ಟು ನಮಗೆ ಬೇರೆ ರಕ್ಷಕರಿಲ್ಲ. ನಮ್ಮ ಸಕಲ ಆತ್ಮಾತ್ಮೀಯ ಸಮರ್ಪಣದ ಏಕ ಮೇವ ಮನೋಭಾವ ನಿನ್ನನ್ನೇ ಹೊಂದಬೇಕೆಂಬುದು. ಅದು ಇಹದಲ್ಲಿಯೂ ಪರದಲ್ಲಿಯೂ ಆಗುವಂತೆ ಅನುಗ್ರಹಿಸು." (ಎಂದು ಮಹರ್ಷಿಗಳು, ನಿರ್ಮಲರಾಗಿ, ಅಮಲಚಿತ್ತರಾಗಿ, ಪ್ರಾರ್ಥಿಸುತ್ತಾರೆ, ಈ ಸೂಕ್ತದಲ್ಲಿ.)

ಗಮನಿಸಬೇಕಾದ ಅನೇಕ ಅಂಶಗಳು ಇನ್ನೂ ಇಲ್ಲಿ ಇವೆ :—

ಭಗವಂತನ ಸಕಲ ಮುಖ್ಯ ಲಕ್ಷಣಗಳೂ ಇಲ್ಲಿ ಹೇಳಲ್ಪಟ್ಟಿವೆ. "ಇವ ನಿಗೆ ಏನು ಹೆಸರನ್ನಾದರೂ ಕೊಡಿ, ಆದರೆ ಇವನ ಹೆಸರಿನಲ್ಲಿ ಜಗಳ ಮಾತ್ರ ಮಾಡಬೇಡಿ" ಎಂದು ಸೂಕ್ತ ಹೇಳುವಂತಿದೆ, ದೇವರನ್ನು "ಕಃ" ಎಂದು ಕರೆದಿರುವುದರಿಂದ.

ಇಲ್ಲಿ ಬಂದಿರುವ ಭಗವಂತನ ಲಕ್ಷಣಗಳಾವುವು? ಎಂದರೆ :—

(೧) "ಹಿರಣ್ಯಗರ್ಭ" ಶಬ್ದಸೂಚಿತವಾದ ಜಗತ್ಕಾರಣತ್ವ (೨) "ಭೂತಸ್ಯ ಪತಿಃ" ಎಂದು ಸೂಚಿತವಾದ ನಿರುಪಾಧಿಕ ಈಶ್ವರತ್ವ; (೩) "ದಾಧಾರ" ಎಂದಿರುವುದರಿಂದ, ಧಾರಕತ್ವ, (೪) "ಆತ್ಮದಾ" ಸೂಚಿತವಾದ ಜಗದನುಪ್ರವೇಶಪೂರ್ವಕವಾದ ಸರ್ವಾಂತರ್ಯಾಮಿತ್ವ, (೫) "ಉಪಾಸತೇ" ಸೂಚಿತವಾದ ಉಪಾಸ್ಯತ್ವ, (೬) "ಯಸ್ಯದೇವಾಃ" ಎಂದಿರುವುದರಿಂದ ಸರ್ವೋತ್ತಮತ್ವ, (೭) "ಅಮೃತ. ಮೃತ್ಯು" ಶಬ್ದಗಳಿಂದ ಸೂಚಿತವಾದ, ಮೋಕ್ಷಪ್ರದಾತೃತ್ವ, ಜಗತ್ಸಂಹಾರಕತ್ವ (೮) ನಾಲ್ಕನೇ ಮಂತ್ರದಲ್ಲಿ ವ್ಯಕ್ತವಾದ ವಿಶ್ವವ್ಯಾಪಿತ್ವ, (೯) ಐದನೇದರಲ್ಲಿ ಸೂಚಿತವಾದ ತ್ರಿವಿಕ್ರಮತ್ವ, (೧೦) ಆರನೇದರಲ್ಲಿ ಸೂಚಿತವಾದ ಸಹಜ ಪ್ರಕಾಶವತ್ವ, (೧೧) ಏಳನೇದರಲ್ಲಿ ಪ್ರಕಟಿತವಾದ ನಾರಾಯಣ ಶಬ್ದಾರ್ಥವತ್ವ, (ಆಪೋಹ.....ಇತ್ಯಾದಿ) (೧೨) ಎಂಟನೇದರಲ್ಲಿ, ಯಜ್ಞಪುರುಷತ್ವ, ಮತ್ತು ದೇವಾಧಿಪತ್ಯ, (೧೩) ಒಂಭತ್ತರಲ್ಲಿ ಸತ್ಯಧರ್ಮಾದಿಗುಣ ಪೂರ್ಣತ್ವ, (೧೪) ಹತ್ತರಲ್ಲಿ, ವಿಶ್ವಪತಿತ್ವ, ಪ್ರಜಾರಕ್ಷಕತ್ವ ಸಕಲಫಲಪ್ರದಾತೃತ್ವ.

ಮೊದಲಿನ ಎಂಟು ಮಂತ್ರಗಳಲ್ಲಿ ಭಗವಂತನನ್ನು ಪರೋಕ್ಷವಾಗಿ ಕೊಂಡಾಡಿ, ಭಕ್ತವತ್ಸಲನಾದ ಅವನು ಗೋಚರನಾದ ಮೇಲೆಯೇ ಕೊನೆಯ ಎರಡು ಮಂತ್ರಗಳಲ್ಲಿ ಅವನನ್ನೇ ಕಂಡು ಮಾತಾಡಿದಂತಿದೆ. ಋಷಿಯ ಎದುರಿಗೆ ಭಗವಂತನು ನಿಂತಿರುವುದು ಇಲ್ಲಿ ಸಿದ್ಧವಾದಿದೆ.

"ಕಃ" ಎಂಬ ಭಗವಂತನ ನಾಮಧೇಯವು ಸ್ತೋತ್ರ ಮಾಡುವವನ ಮನಸ್ಸಿನ ನಮ್ರತೆ, ಮತ್ತು ಭಗವಂತನ ದೊಡ್ಡತನಕ್ಕೆ ತನ್ನ ಮಾತು ಸಣ್ಣದು ಎಂದೇ ತೋರಿಸುವಂತಿದೆ.

"ಕಃ" ಎಂದು ಶಬ್ದ ಇರುವುದರಿಂದ ಋಷಿಗೆ ಭಗವತ್ಸ್ವರೂಪವೇ ಗೊತ್ತಿಲ್ಲದೆ, ಇನ್ನೂ ಹುಡುಕುತ್ತಿರುವನೆಂದು ಅರ್ಥವಲ್ಲ. ಹಾಗಿದ್ದಿದ್ದರೆ, ಭಗವಂತನ ಸಕಲ ಲಕ್ಷಣಗಳೂ ಇಲ್ಲಿ ಹೇಳಲ್ಪಡುತ್ತಿರಲಿಲ್ಲ ಅಲ್ಲವೆ? ಅಂದಮೇಲೆ ಈ ಪ್ರಶ್ನೆಯ ಅರ್ಥ ಬೇರೆಯೇ ಆಗಿದೆ. "ಇವನಿಗಲ್ಲವೇ ?"

(ಅರ್ಪಣೆ)—ಎಂದು ಒಂದು ಧ್ವನಿ. "ಅರ್ಪಣೆಯಲ್ಲದೆ ಮತ್ತೇನು ?" ಎಂಬುದು ಒಂದು ಧ್ವನಿ. "ಇಷ್ಟೆಲ್ಲ ವಿಚಿತ್ರ ಗುಣ ಪರಿಪೂರ್ಣನು ಒಬ್ಬನೇ ಅಲ್ಲವೆ ?" ಎಂಬ ಆಶ್ಚರ್ಯದ, ತೃಪ್ತಿಯ' ಭಕ್ತಿಭಾವದ, ಅಭಿಮಾನದ, ಆನಂದ ಪರಾಕಾಷ್ಠೆಯ ಇನ್ನೊಂದುಧ್ವನಿ. "ಇವನನ್ನು ಕೊಂಡಾಡಲು ತನಗೆ ಶಬ್ದ ಶಕ್ತಿಸಾಲದು"— ಎಂಬ ನಿರಾಶೆಯ ಮತ್ತೊಂದು ಧ್ವನಿ. "ಇವನೇ ಭಗವಂತನೆಂದು ಅರಿತ ಮೇಲೆ, ಎಲ್ಲ ಹೆಸರುಗಳೂ ಅನ್ವರ್ಥವಾಗಿ ಇವನವೇ ಎಂದುಖಚಿತವಾದ ಮೇಲೆ, ಹೇಗೆಂದು ಕರೆದರೇನು ? ಏನಾದರೂ ಕರೆಯಿರಿ." ಎಂಬ ಆದೇಶದ ಧ್ವನಿ.

ಅಲ್ಲದೆ ಹಿಂದೆ ಸೂಚಿತವಾದ ಭಗವತ್ಸ್ವರೂಪ ಲಕ್ಷಣಗಳೊಂದೊಂದರಲ್ಲೂ ಅತಿ ಸೂಕ್ಷ್ಮವಾದ ಧ್ವನಿಗಳು ಉಪಾಸನಾ ಕಾಲಕ್ಕೇ ಸ್ಫುರಿಸುವುವೆಂದು ಭಾವಿಸಿ, ಅನುಭವಿಸಬೇಕು. ರುಚಿ ತೋರಿಸಲು ಮಾತ್ರ, ಲೇಖಕನ ಶಕ್ತಿಗೆ ಅನುಸಾರವಾಗಿ ಕೆಲವನ್ನು ಇಲ್ಲಿಯವರೆಗೆ ಸೂಚಿಸಲಾಗಿದೆ. ಅನೇಕರು ಈ ಸೂಕ್ತಾರ್ಥವನ್ನು ನಿತ್ಯ ಪಾರಾಯಣ ಮಾಡಲೆಂದು ಸೂಕ್ತವನ್ನು ಈಗ ಕೊಡಲಾಗಿದೆ :

॥ ಹರಿಃ ಓಂ ॥

ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।
ಸದಾಧಾರ ಪೃಥಿವೀಂ ದ್ಯಾಂ ಉತೇಮಾಂ ಕಸ್ಮೈದೇವಾಯ ಹವಿಷಾ
ವಿಧೇಮ ॥೧॥

ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯದೇವಾಃ ।
ಯಸ್ಯ ಛಾಯಾ ಮೃತಂ ಯಸ್ಯ ಮೃತ್ಯುಃ ಕಸ್ಮೈದೇವಾಯ ಹವಿಷಾ
ವಿಧೇಮ ॥೨॥

ಯಃ ಪ್ರಾಣತೋ ನಿಮಿಷತೋ ಮಹಿತ್ವೈಕ ಇದ್ರಾಜಾ ಜಗತೋ ಬಭೂವ ।
ಯ ಈಶೇ ಅಸ್ಯ ದ್ವಿಪದ : ಚತುಷ್ಪದಃ ಕಸ್ಮೈದೇವಾಯ ಹವೀಷಾ
ವಿಧೇಮ ॥೩॥

ಯಸ್ಯೇಮೇ ಹಿಮವಂತೋ ಮಹಿತ್ವಾ ಯಸ್ಯ ಸಮುದ್ರಂ ರಸಯಾ
ಸಹಾಹುಃ ।
ಯಸ್ಯೇಮಾಃ ಪ್ರದಿಶೋ ಯಸ್ಯ ಬಾಹೂ ಕಸ್ಮೈದೇವಾಯ ಹವಿಷಾ
ವಿಧೇಮ ॥೪॥

ಯೇನ ದ್ಯೌರುಗ್ರಾ ಪೃಥಿವೀಚ ದೃಳ್ಹಾ ಯೇನ ಸ್ವಃ ಸ್ತಭಿತಂ ಯೇನ ನಾಕಃ ।
ಯೋ ಅಂತರಿಕ್ಷೇ ರಜಸೋ ವಿಮಾನಃ ಕಸ್ಮೈದೇವಾಯ ಹವಿಷಾ
ವಿಧೇಮ ॥೫॥

ಯಂ ಕ್ರಂದಸೀ ಅವಸಾ ತಸ್ತಭಾನೇ ಅಭ್ಯೈಕ್ಷೇತಾಂ ಮನಸಾ ರೇಜಮಾನೇ ।
ಯತ್ರಾಧಿಸೂರ ಉದಿತೋ ವಿಭಾತಿ ಕಸ್ಮೈದೇವಾಯ ಹವಿಷಾ
ವಿಧೇಮ ॥೬॥

ಆಪೋಹ ಯದ್ಬೃಹತೀರ್ವಿಶ್ವಮಾಯರ್ನ್ ಗರ್ಭಂ ದಧಾನಾಜನಯಂತೀರಗ್ನಿಂ।
ತತೋ ದೇವಾನಾಂ ಸಮವರ್ತತಾಸುರೇಕಃ ಕಸ್ಮೈ ದೇವಾಯ ಹವಿಷಾ
ವಿಧೇಮ ॥೭॥

ಯಶ್ಚಿದಾಪೋಮಹಿನಾ ಪರ್ಯಪಶ್ಯದ್ದಕ್ಷಂ ದಧಾನಾ ಜನಯಂತೀ
ರ್ಯಜ್ಞಂ ।
ಯೋ ದೇವೇಷ್ವಧಿ ದೇವ ಏಕ ಆಸೀತ್ ಕಸ್ಮೈದೇವಾಯ ಹವಿಷಾ
ವಿಧೇಮ ॥೮॥

ಮಾನೋ ಹಿಂಸೀಜ್ಜನಿತಾ ಯಃ ಪೃಥಿವ್ಯಾ ಯೋ ವಾ ದಿವಂ ಸತ್ಯಧರ್ಮಾ
ಜಜಾನ ।
ಯಶ್ಚಾಪಶ್ಚಂದ್ರಾ ಬೃಹತೀರ್ಜಜಾನ ಕಸ್ಮೈದೇವಾಯ ಹವಿಷಾ
ವಿಧೇಮ ॥೯॥

ಪ್ರಜಾಪತೇ ನತ್ವ ದೇತಾನ್ಯನ್ಯೋ ವಿಶ್ವಾಜಾತಾನಿ ಪರಿತಾಬಭೂವ ।
ಯತ್ಕಾಮಾಸ್ತೇ ಜುಹುಮಃ ತನ್ನೋ ಅಸ್ತುವಯಗ್ಂ ಸ್ಯಾಮಪತಯೋರ
ಯೀಣಾಂ ॥೧೦॥

[ಈ ಸೂಕ್ತವು ಋ. X-121 ರಲ್ಲಿ ಮೊದಲು ಬಂದಿದ್ದು, ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿಯೂ (IV-1-8 ರಲ್ಲಿ) ಅಲ್ಪ ಸ್ವಲ್ಪ ವ್ಯತ್ಯಾಸಗಳೊಡನೆ ಪುನರುಕ್ತವಾದಿದೆ. ಹಾಗೆಯೇ ಅಥರ್ವವೇದದ ಪೈಪ್ಪಲಾದ ಸಂಹಿತೆಯಲ್ಲಿಯೂ (IV-2 ರಲ್ಲಿ) ಪುನರುಕ್ತವಾಗಿದೆ. ಯಜುರ್ವೇದದ ಇನ್ನೆರಡು ಶಾಖೆಗಳಾದ ಕಪಿಸ್ಥಲಕಠಸಂಹಿತೆಯಲ್ಲೂ ಮೈತ್ರಾಯಣೀಯ ಸಂಹಿತೆಯಲ್ಲೂ ಪುನರುಕ್ತವಾಗಿರುವ ಈ ದಿವ್ಯ ಸೂಕ್ತದ ಮಹಿಮೆಯನ್ನು ವಾಚಕರು ಮನಗಾಣಬೇಕು.]

ಋಗ್ವೇದದ ಹತ್ತು ಮಂಡಲಗಳ ಸಮಸ್ತ ಸೂಕ್ತಗಳಸಾರವೋ ಎಂಬಂತೆ ಈ ಸೂಕ್ತವು ಹತ್ತೇ ಮಂತ್ರಗಳಲ್ಲಿ ಅಡಕವಾಗಿರುವುದೂ ಸ್ವಾರಸ್ಯವಾಗಿದೆ. ಭಗವಂತನ ಸಾವಿರ ಮುಖಗಳಿಗೆ ಈ ಹತ್ತು ಮಂತ್ರಗಳು ಪ್ರತಿನಿಧಿಗಳಂತೆಯೂ ಇವೆ. "ಹತ್ತು ಅಂಗಲದಷ್ಟು" ಇನ್ನೂ ಆಚೆಗೆ ವ್ಯಾಪಿಸಿರುವ ಪರಾತ್ಪರನಾದ ಭಗವಂತನ ಮಹಿಮೆಯನ್ನು, "ಈ ಹತ್ತು ಮಂತ್ರಗಳಿಗೂ ಮೀರಿದುದು" ಎಂದು ಘೋಷಿಸುತ್ತಿರುವಂತೆಯೂ ಇದೆ. ವೇದದಲ್ಲಿ ಭಗವತ್ಸ್ವರೂಪವನ್ನು ತಿಳಿಯಲು ಈ ಒಂದೇ ಸೂಕ್ತ ಸಾಕು. ಇದನ್ನೂ ಈಶೋಪನಿಷತ್ತಿನಂತೆ ಉಪನಿಷತ್ತೆಂದೂ, ಪುರುಷಸೂಕ್ತಕ್ಕೆ ಸಮವೆಂದೂ ಭಾವಿಸಿ ನಿತ್ಯ ಪಾರಾಯಣ, ಪೂಜೆಗಳಲ್ಲಿ ವಿನಿಯೋಗಿಸಬಹುದು.

———

## ವೇದ ಪ್ರಶಸ್ತಿ

೧. ಯಜ್ಞಾನಾಂ ತಪಸಾಂ ಚೈವ ಶುಭಾನಾಂ ದೈವ ಕರ್ಮಣಾಂ ।
ವೇದ ಏವ ದ್ವಿಜಾತೀನಾಂ ನಿಶ್ಶ್ರೇಯಸಕರಂ ಪರಃ ॥

(ಯಜ್ಞಗಳು, ತಪಸ್ಸು, ಶುಭವಾದ ದೈವ ಕರ್ಮಗಳು, ಇವುಗಳೆಲ್ಲದರಲ್ಲಿಯೂ ವೇದಾಭ್ಯಾಸವೇ ದ್ವಿಜರಿಗೆ ಪರಮ ಶ್ರೇಯಸ್ಕರವಾಗಿ, ಮೋಕ್ಷ ಕಾರಣವಾಗಿದೆ.)

—ಶ್ರೀ ಯಾಜ್ಞವಲ್ಕ್ಯರು,

೨. ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿ ನಾಮಾನಿ ಕೀರ್ತಿತಾನಿ ನಸಂಶಯಃ ॥

(ವೇದಾಕ್ಷರಗಳನ್ನು ದ್ವಿಜರು ಎಲ್ಲಿಯವರೆಗೂ ಪಠಿಸುವರೋ, ಅಲ್ಲಿಯವರೆಗೂ ಶ್ರೀ ಹರಿ ನಾಮಗಳು ಕೀರ್ತಿಸಲ್ಪಡುವುವೆಂಬುದರಲ್ಲಿ ಸಂದೇಹವಿಲ್ಲ.)

—ವಿಷ್ಣು ಧರ್ಮೋತ್ತರ.

೩. ಯದಕ್ಷರ ಪದ ಭ್ರಷ್ಟಂ ಮಾತ್ರಾ ಹೀನಂತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಸ್ತುತೇ ॥

(ಈ ವರೆಗೆ ವಿವೇಚಿಸಲಾದ ವೇದ ಸೂಕ್ತಗಳಲ್ಲಿ) ಯಾವುದೊಂದು ಪದವೋ, ಅಕ್ಷರವೋ, (ಉಚ್ಚಾರಣೆಯಲ್ಲಿ) ಯಾವುದೊಂದು ಮಾತ್ರಾ ಕಾಲವೋ ಲೋಪವಾಗಿದ್ದಲ್ಲಿ, ಅದೆಲ್ಲವನ್ನೂ ಕ್ಷಮಿಸು, ಹೇ ದೇವ ನಾರಾಯಣ, ನಿನಗೆ ನಮಸ್ಕಾರ."

॥ ಹರಿಃ ಓಂ ॥ ಶ್ರೀ ಕೃಷ್ಣಾರ್ಪಣಮಸ್ತು ॥

## ಗ್ರಂಥದ ಬಗೆಗೆ ಪದ್ಮಶ್ರೀ ದ. ರಾ. ಬೇಂದ್ರೆ ಅವರು.

"ಪ್ರೊ. ಕೆ. ಎಸ್. ನಾರಾಯಣಾಚಾರ್ಯ ಅವರು ಬರೆದ ವೇದ ಸಂಸ್ಕೃತಿಯ ಪರಿಚಯ ಎಂಬ ಪುಸ್ತಕವು ಸುಮಾರು ೨೦೦ ಪುಟಗಳಷ್ಟೇ ಆಗಿದ್ದರೂ, ಅದಕ್ಕೆ ಒಂದು ಗ್ರಂಥದ ಯೋಗ್ಯತೆ ಇದೆ. ವೇದ ಮತ್ತು ಸಂಸ್ಕೃತಿ ಎಂಬ ಎರಡು ಶಬ್ದಗಳು ಎಷ್ಟೋ ಬುದ್ಧಿವಂತರಿಗೆ ಬಿಡಿಸ ಬರದ ಕಗ್ಗಂಟು, ಮಹಾಗ್ರಂಥಿ. ವೇದ ಸಂಸ್ಕೃತಿಯ ಪರಿಚಯವಾಗಲು ಇಲ್ಲಿಯ ಹತ್ತು ಪ್ರಕರಣಗಳೂ ಸಾಕು. ಅವುಗಳ ಬಗ್ಗೆ ಇಂದಿನ ಸಾಮಾಜಿಕ, ರಾಜಕೀಯದಲ್ಲಿ ಸಾಕಷ್ಟು ಅವಜ್ಞೆ, ಧಿಃಕ್ಕಾರ ಮನೋವೃತ್ತಿ ಇದೆ. ವೇದದ ಬಗ್ಗೆ ಯಾವದೇ ಬಗೆಯ ಶ್ರದ್ಧೆ, ಆದರ, ಭಕ್ತಿಉಳ್ಳವರಿಗೆ ಅದರ ಅಂಗಾಂಗ ಪರಿಚಯ ಸಾಕಷ್ಟು ಇರುವುದಿಲ್ಲ. ಆ ಕೊರತೆ ಹೋಗಲಾಡಿಸಲು ಈ ಗ್ರಂಥ ರೂಪ ತಾಳಿದೆ. ಇಂಥ ಗ್ರಂಥ ಬರೆಯಬೇಕಾದರೆ ಹುಟ್ಟಿನಿಂದಲೂ ಒಂದಿಷ್ಟು ಸಂಸ್ಕಾರ ಇರಬೇಕಾಗುತ್ತದೆ. ಮುಂದೆ ಶ್ರದ್ಧೆಯಿಂದ ಆ ವಾಙ್ಮಯದ ಅಭ್ಯಾಸ ಬಹಳ ಮಟ್ಟಿಗೆ ಆಗ ಬೇಕಾಗುತ್ತದೆ.....ವೇದಾಭ್ಯಾಸದ ನೆಪಮಾಡಿ ಅವುಗಳನ್ನು ನಿಂದಿಸಿದ ಸ್ವಕೀಯರು, ಪರಕೀಯರು ಏನು ವಕ್ರ ವಕ್ರ ಮಾತನಾಡಿದರೋ ಅವುಗಳನ್ನು ನೆನಪಿನಲ್ಲಿಟ್ಟು ಕೆಲವು ಸಂಶಯಗಳಿಗೆ ಪರಿಹಾರ ಹೇಳಿ ಮತ್ತೆ ಕೆಲವುಗಳ ಬಗ್ಗೆ ಪರಿಚಯದ ವಿಸ್ತಾರ, ಆಳ ಹೆಚ್ಚಿಸಿ ಕೊಡುವುದು ಒಂದು ಬಗೆಯ ತಪಸ್ಸಿಗೆ ಸಾಧ್ಯ. ಅಂಥ ತಪಸ್ಸಿನತ್ತ ಹೃದಯ ಒಲಿಯಬೇಕಾದರೆ ಇನ್ನೊಂದು ತಪಸ್ಸನ್ನು ಮಾಡಬೇಕಾಗುತ್ತದೆ. ಅಂಥ ಒಂದು ತಪಸ್ಸು ಶ್ರೀ ನಾರಾಯಣಾಚಾರ್ಯ ಅವರು ಶ್ರೀಮದ್ರಾಮಾಯಣದ ಪಠಣ, ಪ್ರವಚನಗಳಿಂದ ಸಾಧಿಸಿದರು. ಸಂಸ್ಕೃತ, ಕನ್ನಡ, ಇಂಗ್ಲಿಷು ಭಾಷೆಗಳಲ್ಲಿ ಅವರಿಗೆ ಅಸಾಮಾನ್ಯ ಪರಿಶ್ರಮವುಂಟು. ಇಂಥವರ ಈ ಗ್ರಂಥಕ್ಕೆ ಸ್ವಾಗತಬಯಸುವುದು ಒಂದು ಶುಭ ಸಂದರ್ಭವೆ."